# ಶುಭ ಹಾರೈಕೆ

ವೀರಶೈವ ಧಾರ್ಮಿಕ ಪೀಠಗಳ, ವಿಶ್ವವಿದ್ಯಾಲಯಗಳ ಮತ್ತು ವಿದ್ವಾಂಸರುಗಳ ಒಂದು ಶತಮಾನದ ದುಡಿಮೆಯಿಂದಾಗಿ 'ವಚನಸಾಹಿತ್ಯ'ದ ಸಂಶೋಧನೆ – ಪ್ರಕಟನೆ ಒಂದು ಹಂತಕ್ಕೆ ಬಂದು ನಿಂತಿದೆ ಎನ್ನಬಹುದು. ಇದೀಗ ಇಷ್ಟೇ ವಿಪುಲವಾಗಿರುವ, ಇದಕ್ಕಿಂತ ಹೆಚ್ಚು ಜನಪ್ರಿಯವಾಗಿರುವ "ಸ್ವರವಚನಸಾಹಿತ್ಯ''ದ ಸಂಶೋಧನೆ–ಪ್ರಕಟನೆ ವ್ಯಾಪಕವಾಗಿ, ವ್ಯವಸ್ಥಿತವಾಗಿ ನಡೆಯಬೇಕಾಗಿರುವುದು ಅಗತ್ಯವಾಗಿದೆ. ಡಾ. ಫ. ಗು. ಹಳಕಟ್ಟಿಯವರು ಮೊದಲುಮಾಡಿ ಅನೇಕ ಜನ ವಿದ್ವಾಂಸರು ಈ ಸಾಹಿತ್ಯವನ್ನು ಆಗಾಗ ಪ್ರಕಟಿಸುತ್ತ ಬಂದರೂ ಅದು ಬೆಳಕು ಕಂಡುದು ಕಡಿಮೆ. ಹೀಗಾಗಿ ಪ್ರಾಚೀನ ಹಸ್ತಪ್ರತಿಗಳಲ್ಲಿ, ಜನರ ಬಾಯಿಯಲ್ಲಿ ಬದುಕಿಬಂದ ಈ ಪ್ರಕಾರವನ್ನು ಒಮ್ಮೆ ಇಡಿಯಾಗಿ ಪ್ರಕಟಿಸಬೇಕಾಗಿದೆ. ಹಾಗೆ ಪ್ರಕಟವಾದರೆ ನಮ್ಮ ಹಾಡುಗಬ್ಬ ಪರಂಪರೆಗೆ ಇರುವ ಪ್ರಾಚೀನತೆಯನ್ನೂ ನಿರಂತರತೆಯನ್ನೂ ಎತ್ತಿ ತೋರಿಸಿದಂತಾಗುತ್ತದೆ. ಜೊತೆಗೆ ವೀರಶೈವಕ್ಕೆ ತನ್ನದೇ ಆದ ಹಾಡುಗಬ್ಬ ಪರಂಪರೆಯೊಂದು ಇರುವುದನ್ನು ಸ್ಪಷ್ಟಪಡಿಸಿದಂತಾಗುತ್ತದೆ. ಈ ಘನವಾದ ಉದ್ದೇಶವನ್ನು ಕಣ್ಣು ಮುಂದಿಟ್ಟುಕೊಂಡು ಪ್ರಸ್ತುತ ಯೋಜನೆಯನ್ನು ಶ್ರೀ ಶಿವರಾತ್ರೀಶ್ವರ ಧಾರ್ಮಿಕ ದತ್ತಿಯಿಂದ ಕೈಗೆತ್ತಿಕೊಂಡಿದೆ. ಈಗಾಗಲೆ ಡಾ. ಎಲ್. ಬಸವರಾಜು ಅವರು ಸಂಪಾದಿಸಿದ 'ಶಿವದಾಸ ಗೀತಾಂಜಲಿ'ಯನ್ನು ಜೆ. ಎಸ್.ಎಸ್. ಗ್ರಂಥಮಾಲೆಯಿಂದ ಪ್ರಕಟಿಸುವ ಮೂಲಕ ಈ ಸಾಹಿತ್ಯದ ಮಹತ್ವವನ್ನು ಪ್ರಥಮಬಾರಿಗೆ ಬೆಳಕಿಗೆ ತಂದುದಲ್ಲದೆ ಅದರ ಮುಂದುವರಿಕೆಯೆಂಬಂತೆ ಈ ಯೋಜನೆಯನ್ನು ಹಮ್ಮಿಕೊಂಡಿದೆ.

ಇಂಥ ಒಂದು ವ್ಯಾಪಕ ಯೋಜನೆಯ ಅನುಷ್ಠಾನಕ್ಕೆ ವಿದ್ವಾಂಸರ ನೆರವು ಅಗತ್ಯ, ಕರ್ನಾಟಕದ ಬೇರೆ ಬೇರೆ ಭಾಗಗಳ ವಿದ್ವಾಂಸರು ಈ ಕಾರ್ಯದಲ್ಲಿ ಸಹಕರಿಸಲು ಮುಂದೆ ಬಂದಿರುವುದು ಒಂದು ಶುಭಯೋಗ. ಇವರೆಲ್ಲರ ನೆರವಿನಿಂದ ಸ್ವರವಚನ ಸಾಹಿತ್ಯವನ್ನು ಮೊದಲು ಬಿಡಿಯಾದ ಸಂಪುಟಗಳ ರೂಪದಲ್ಲಿ ಪ್ರಕಟಿಸುವುದು ಎಂದು ಯೋಜಿಸಲಾಗಿದೆ. ಈ ಯೋಜನೆಯು ಫಲಪ್ರದವಾಗುವ ರೀತಿಯಲ್ಲಿ ಎಲ್ಲ ಸ್ವರವಚನಗಳು ಹಸ್ತಪ್ರತಿಗಳಿಂದ, ಜನಪದರ ಕಂಠಸ್ಥಲಗಳಿಂದ, ಸ್ಮೃತಿಪಟಲಗಳಿಂದ ಸೆರೆ ಬಿಡಿಸಿಕೊಂಡು ಬೆಳಕಿಗೆ ಬಂದ ಬಳಿಕ ಶ್ರೀ ಶಿವರಾತ್ರೀಶ್ವರ ಧಾರ್ಮಿಕದತ್ತಿಯು ಪ್ರಕಟಿಸಿದ ಹಾಗೂ ಅನ್ಯರು ಪ್ರಕಟಿಸಿದ ಎಲ್ಲ ಸಂಪತ್ತನ್ನು ಕ್ರೋಢೀಕರಿಸಿ; ವ್ಯವಸ್ಥಿತವಾಗಿ ವರ್ಗೀಕರಿಸಿ; ಅದನ್ನು "ಸಮಗ್ರ ಸ್ವರವಚನಸಾಹಿತ್ಯ ಪ್ರಕಟನ ಯೋಜನೆ'' ಹೆಸರಿನಿಂದ ಸಂಪುಟ ಶ್ರೇಣಿಯಲ್ಲಿ ಹೊರತರಲು ಸಂಕಲ್ಪಿಸಲಾಗಿದೆ.

ಈ ಸಂಕಲ್ಪವು ಈಡೇರುವಂತಾಗಲೆಂದು ಆಶಿಸುತ್ತ, ಇದರಲ್ಲಿ ನೆರವಾದ ಎಲ್ಲರಿಗೂ ಸಕಲ ಶ್ರೇಯಸ್ಸನ್ನು ಹಾರೈಸುತ್ತೇವೆ.

ಮಾಸ ಶಿವರಾತ್ರಿ
ಆಗಸ್ಟ್ ೨೪, ೧೯೯೫

ಶ್ರೀ ಶಿವರಾತ್ರಿದೇಶಿಕೇಂದ್ರಸ್ವಾಮಿಗಳು

# ಪ್ರಕಾಶಕರ ನುಡಿ

ಸುತ್ತೂರು ಜಗದ್ಗುರು ಶ್ರೀ ಶಿವರಾತ್ರೀಶ್ವರ ವೀರಸಿಂಹಾಸನ ಮಠ – ನಮ್ಮ ನಾಡಿನ ಒಂದು ಪ್ರಸಿದ್ಧ ಧಾರ್ಮಿಕಪೀಠ. ಧರ್ಮವನ್ನು ಶರಣಸಿದ್ಧಾಂತದ ವ್ಯಾಪಕ ಅರ್ಥದಲ್ಲಿ ಪರಿಭಾವಿಸಿದ ಈ ಪೀಠವು 'ದಾಸೋಹ'ಪದವನ್ನು ಕಾಲಕ್ಕೆ ತಕ್ಕಂತೆ ಪ್ರಸ್ತುತಗೊಳಿಸುತ್ತ ಬಂದಿದೆ. ಈ ಪ್ರಯೋಗದ ಒಂದು ಅಂಗ 'ಸಾಹಿತ್ಯದಾಸೋಹ'. ಅದರ ಫಲವೇ ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ. ಈ ಗ್ರಂಥಮಾಲೆಯಲ್ಲಿ 'ಶಿವದಾಸ ಗೀತಾಂಜಲಿ'ಯನ್ನು ಪ್ರಕಾಶನಗೊಳಿಸುವ ಮೂಲಕ ಶರಣರ 'ಸ್ವರವಚನಸಾಹಿತ್ಯ' ಪ್ರಕಟನೆಯ ಇತಿಹಾಸದಲ್ಲಿ, ಶ್ರೀಮಠವು, ಡಾ. ಫ.ಗು. ಹಳಕಟ್ಟಿಯವರ ಬಳಿಕ ಇನ್ನೊಂದು ಹೊಸಘಟ್ಟವನ್ನೇ ತೆರೆಯಿತು. ಧರ್ಮದಾಸೋಹದ ಜೊತೆಗೆ ಈ ಸಾಹಿತ್ಯದಾಸೋಹದ ಕಾರ್ಯವೂ ಕೂಡ ನಿರಂತರವಾಗಿ ಮುಂದುವರಿಯಬೇಕೆಂಬ ಸದುದ್ದೇಶದಿಂದ ಪರಮಪೂಜ್ಯ ಜಗದ್ಗುರು ಡಾ. ಶ್ರೀ ಶಿವರಾತ್ರಿ ರಾಜೇಂದ್ರ ಮಹಾಸ್ವಾಮಿಗಳವರು 'ಶ್ರೀ ಶಿವರಾತ್ರೀಶ್ವರ ಧಾರ್ಮಿಕದತ್ತಿ'ಯನ್ನು ಸಂಸ್ಥಾಪಿಸಿದರು. ಈ. ದತ್ತಿಯ ಆಶ್ರಯದಲ್ಲಿ ಸಾಹಿತ್ಯದಾಸೋಹದ ಅಂಗವಾಗಿ ಈಗಾಗಲೇ ಹಲವಾರು ವಿಚಾರಸಂಕಿರಣಗಳನ್ನೂ ಸಮ್ಮೇಳನಗಳನ್ನೂ ನೆರವೇರಿಸುತ್ತಾ ಬಂದಿರುತ್ತದೆ. ಉತ್ತಮೋತ್ತಮ ಗ್ರಂಥಗಳನ್ನು ಪ್ರಕಟಿಸಲಾಗುತ್ತಿದೆ. ಈ ಗ್ರಂಥಮಾಲೆಯಿಂದ ಆರಂಭಿಸಿದ ಸ್ವರವಚನಸಾಹಿತ್ಯ ಪ್ರಕಟನೆಯ ಮುಂದುವರಿಕೆಯೆಂಬಂತೆ 'ಮುಪ್ಪಿನ ಷಡಕ್ಷರಿಗಳ ಕೈವಲ್ಯಪದ' ಸಂಪುಟವನ್ನು ಪ್ರಕಟಿಸಿದೆ. ಈಗ ಈ ಪ್ರಯತ್ನಕ್ಕೆ ಪೂರ್ಣ ಸ್ವರೂಪವನ್ನು ಕೊಡುವ ಉದ್ದೇಶದಿಂದ ಬೃಹತ್ ಪ್ರಮಾಣದ 'ಸಮಗ್ರ ಸ್ವರವಚನಸಾಹಿತ್ಯ ಪ್ರಕಟನ ಯೋಜನೆಯನ್ನು ಕೈಗೆತ್ತಿಕೊಂಡಿದೆ.

ವೀರಶೈವಸಾಹಿತ್ಯದ ಮಹತ್ವದ ಪ್ರಕಾರವಾದ ವಚನ ಸಾಹಿತ್ಯ ಈವರೆಗೆ ಬಹುಮಟ್ಟಿಗೆ ಪೂರ್ಣಪ್ರಮಾಣದಲ್ಲಿ ಪ್ರಕಟವಾಗಿದೆ. ವಚನಗಳ ಸಾಹಿತ್ಯಕ, ಸಾಮಾಜಿಕ, ಸೈದ್ಧಾಂತಿಕ ಪ್ರಭಾವಗಳಿಗೆ ಮಾರುಹೋದ ವಿದ್ವಾಂಸರು, ಶರಣರ ಇನ್ನೊಂದು ಮಹತ್ವದ ಪ್ರಕಾರವಾದ 'ಸ್ವರವಚನಸಾಹಿತ್ಯ'ದ ಪ್ರಕಟಣೆಯ ಕಡೆಗೆ ಅಷ್ಟಾಗಿ ಗಮನ ಹರಿಸಲಿಲ್ಲ. ಈ ಕೊರತೆಯನ್ನು ತುಂಬಿಕೊಡುವ ಮಹೋದ್ದೇಶದಿಂದ ಪ್ರಸ್ತುತ ಯೋಜನೆಯನ್ನು ಹಮ್ಮಿಕೊಳ್ಳಲಾಗಿದೆ.

ತಮ್ಮ ಅನುಭಾವದ ವಾಚನಪಾತಳಿಗಾಗಿ 'ವಚನ'ಗಳನ್ನು ಬರೆದ ಶರಣರು, ಶ್ರವಣಪಾತಳಿಗಾಗಿ 'ಸ್ವರವಚನ'ಗಳನ್ನು ಬರೆದರು. ಹನ್ನೆರಡನೆಯ ಶತಮಾನದಿಂದ ಇಪ್ಪತ್ತನೆಯ ಶತಮಾನದವರೆಗೆ ನೂರಾರು ಜನ ಶಿವಶರಣರು, ಶಿವಕವಿಗಳು ಸೃಷ್ಟಿಸಿದ ಈ ಸಾಹಿತ್ಯ ಲಿಖಿತ ಮತ್ತು ಮೌಖಿಕ ಪರಂಪರೆಯಲ್ಲಿ ಸಾಗಿಬಂದಿದೆ. ಈ ಸಾಹಿತ್ಯವನ್ನು ಸಮಗ್ರವಾಗಿ ಪ್ರಕಟಿಸಲಿರುವ ಪ್ರಸ್ತುತ ಯೋಜನೆಯಲ್ಲಿ ನಾವು ಎರಡು ಹಂತಗಳನ್ನು ಕಲ್ಪಿಸಿಕೊಂಡಿದ್ದೇವೆ.

ಅಪ್ರಕಟಿತ ರೂಪದಲ್ಲಿರುವ ಲಿಖಿತ ಮತ್ತು ಮೌಖಿಕ ಪರಂಪರೆಯ ಎಲ್ಲ ಸ್ವರವಚನಗಳನ್ನು

ಪ್ರಕಟಿಸುವ ಉದ್ದೇಶ ನಮ್ಮ ಕಣ್ಣಮುಂದಿದೆ. ಇಲ್ಲಿ ಪ್ರಾಚೀನ ಸ್ವರವಚನ 'ಕೃತಿ'ಗಳನ್ನು ಪರಿಷ್ಕರಿಸಿ ಪ್ರಕಟಿಸುವುದು; ಹಸ್ತಪ್ರತಿಗಳಲ್ಲಿ ಬಿಡಿಬಿಡಿಯಾಗಿ ಸಿಗುವ ಸ್ವರವಚನಗಳನ್ನು ಸಂಗ್ರಹಿಸಿ ಸಂಪುಟರೂಪದಲ್ಲಿ ಪ್ರಕಟಿಸುವುದು; ಬೇರೆ ಬೇರೆ ಪ್ರದೇಶಗಳಲ್ಲಿ ಮೌಖಿಕ ಪರಂಪರೆಯಲ್ಲಿ ಸಿಗುವ ಸ್ವರವಚನಗಳನ್ನು ಧ್ವನಿ ಮುದ್ರಣ ಮಾಡಿಕೊಂಡು ಸಂಪುಟರೂಪದಲ್ಲಿ ಪ್ರಕಟಿಸುವುದು – ಇದು ಮೊದಲ ಹಂತದ ಪ್ರಕಟನ ಕಾರ್ಯ.

ಹೀಗೆ ಎಲ್ಲ ಮೂಲಗಳಿಂದ ಸಂಗ್ರಹಿಸಿ ನಾವು ಪ್ರಕಟಿಸಿದ ಮತ್ತು ಈಗಾಗಲೇ ಅನ್ಯಸಂಸ್ಥೆಗಳು ಪ್ರಕಟಿಸಿದ ಎಲ್ಲ ಸ್ವರವಚನಗಳ ರಾಶಿಯನ್ನು ಒಂದು ಶಿಸ್ತಿಗೆ ಅಳವಡಿಸಿ, ಹದಿನೈದು ಸಂಪುಟಗಳಲ್ಲಿ ಏಕಕಾಲಕ್ಕೆ ಪ್ರಕಟಿಸುವುದು ಎರಡನೆಯ ಹಂತದ ಕಾರ್ಯವಾಗಿದೆ. ಈ ಹಂತದ ಒಟ್ಟು ಯೋಜನೆ ಹೀಗಿದೆ;

ಮೊದಲನೆಯದು ಬಸವೇಶ್ವರರು ಮೊದಲಾದ ಹನ್ನೆರಡನೆಯ ಶತಮಾನದ ಶರಣರ ಬಿಡಿ ಸ್ವರವಚನ ಸಂಪುಟ. ಎರಡನೆಯದು ನಿಜಗುಣಶಿವಯೋಗಿ, ಸಪ್ತಕಾವ್ಯದ ಗುರುಬಸವ, ಸರ್ಪಭೂಷಣ ಶಿವಯೋಗಿ, ಮುಪ್ಪಿನ ಷಡಕ್ಷರಿ, ಬಾಲಲೀಲಾ ಮಹಾಂತಶಿವಯೋಗಿ, ಮೈಲಾರ ಬಸವಲಿಂಗ ಶರಣರು ಇತ್ಯಾದಿ ಪ್ರಸಿದ್ಧ ಸ್ವರವಚನಕಾರರ ಸಂಪುಟ. ಮೂರು, ನಾಲ್ಕು ಮತ್ತು ಐದು ಗುರುಬಸವಾರ್ಯ, ಕರಸ್ಥಲದ ನಾಗಿದೇವ, ಮಾಗ್ಗೆಯ ಮಾಯಿದೇವ, ಕೆಸ್ತೂರದೇವ, ಕವಿಲಿಂಗ, ವರತೆಯ ಸೋಮಣ್ಣ, ಸೋದೆ ಸದಾಶಿವರಾಯ, ದೊಡ್ಡಷಡಕ್ಷರಿಸ್ವಾಮಿ, ಜೆಗುನಿಮುರುಳದೇವ, ಬೆಂಗಳೂರು ಮುದ್ವೀರಸ್ವಾಮಿ, ಕಾರುಗಹಳ್ಳಿ ಶಾಂತಯ್ಯ, ಶಂಕರದೇವ, ನಿಷ್ಕಲರು, ಮರಿಶಾಂತಬಸವ, ಸೋಮನಕಟ್ಟೆ ಕರಿಬಸವೇಶ್ವರ, ಗುರುಗುಂಡಬಸವ – ಇತ್ಯಾದಿ ಅಪ್ರಸಿದ್ಧ ಸ್ವರವಚನಕಾರರ ಸಂಪುಟಗಳು. ಆರು, ಏಳು, ಎಂಟು, ಒಂಭತ್ತು ಮತ್ತು ಹತ್ತು ಹಸ್ತಪ್ರತಿಗಳಲ್ಲಿ ಸಿಗುವ ಬಿಡಿಸ್ವರವಚನ ಸಂಪುಟಗಳು. ಹನ್ನೊಂದು, ಹನ್ನೆರಡು, ಹದಿನೂರು, ಹದಿನಾಲ್ಕು ಮತ್ತು ಹದಿನೈದು ಬೇರೆ ಬೇರೆ ಪ್ರದೇಶಗಳಲ್ಲಿ ಮೌಖಿಕ ಪರಂಪರೆಯಲ್ಲಿ ಸಿಗುವ ಕಡಕೋಳ ಮಡಿವಾಳಪ್ಪ, ಕೊಡಲೂರು ಬಸವಲಿಂಗಶರಣರು, ನೀರಲಕೇರಿಸ್ವಾಮಿಗಳು, ರಾಂಪುರದ ಬಕ್ಕಪ್ಪ ಮೊದಲಾದವರ ಸ್ವರವಚನ ಸಂಪುಟಗಳು.

ಈ ಯೋಜನೆ ಶ್ರೀಮಠದ ಸಾಹಿತ್ಯಿಕ ಸಾಧನೆಗಳಲ್ಲಿ ಒಂದು ಮೈಲುಗಲ್ಲು. ಇದು ಪೂರ್ಣಗೊಂಡರೆ ನಮ್ಮ ಅವಜ್ಞೆಯಲ್ಲಿ ಮುಳುಗಿಹೋಗಿರುವ ಹೊಸ ಸಾಹಿತ್ಯಪ್ರಕಾರವೊಂದು ಸಮಗ್ರ ರೂಪದಲ್ಲಿ ಬೆಳಕಿಗೆ ಬರುತ್ತದೆ. ಹಾಗೆ ನೋಡಿದರೆ ಬಹುಸಂಖ್ಯೆಜನರ ಮೇಲೆ ಮೋಡಿ ಹಾಕಿದ, ಅವರ ವ್ಯಕ್ತಿತ್ವವನ್ನು ತೀಡುತ್ತ ಬಂದ ಸಾಹಿತ್ಯಸಮುದಾಯದಲ್ಲಿಯೇ ಹಾಡುಗಬ್ಬಪ್ರಕಾರ ಗಣ್ಯವಾದುದು. ಕನ್ನಡಸಾಹಿತ್ಯದ ಮೊದಲಘಟ್ಟದ ರಚನೆಗಳಾಗಿರುವ ಈ ದೇಶೀಯ 'ಹಾಡುಗಬ್ಬ'ಗಳನ್ನು 'ಓದುಗಬ್ಬ'ವಾದ ಚಂಪೂ ಮೊದಲಾದುವು ಮೂಲೆಗೆ ತಳ್ಳಿದವು. ಮುಂದೆ ಹನ್ನೆರಡನೆಯ ಶತಮಾನದಲ್ಲಿ ದೇಶೀ ನೆಲೆಗಳಿಂದ ಬಂದ ಶರಣರು ದೇಶೀಪರಂಪರೆಯನ್ನು ಮತ್ತೆ ಸ್ಥಾಪಿಸುವ ಮೂಲಕ, ಮೂಲೆಗುಂಪಾಗಿದ್ದ 'ಹಾಡುಗಬ್ಬ' ಪರಂಪರೆಯನ್ನು ಹೊರಗೆಡಿದು, ಅದಕ್ಕೆ ಲಿಖಿತಸಾಹಿತ್ಯದಲ್ಲಿ ನ್ಯಾಯವಾದ ಸ್ಥಾನವನ್ನು ಒದಗಿಸಿಕೊಟ್ಟರು. ಇದರಿಂದಾಗಿ ಜೇಡರದಾಸಿಮಯ್ಯ, ಬಸವಣ್ಣ, ಮಹಾದೇವಿಯಕ್ಕ ಮೊದಲಾದ ಶರಣರು ರಚಿಸಿದ 'ಹಾಡುಗಬ್ಬ' ಪ್ರಕಾರ 'ಸ್ವರವಚನ'ವೆಂಬ ಹೆಸರಿನಲ್ಲಿ ಪ್ರಸಿದ್ಧಿ ಪಡೆಯಿತು. ಬಳಿಕ ನಿಜಗುಣ ಶಿವಯೋಗಿಗಳಲ್ಲದೆ ವಿಜಯನಗರದ ಪ್ರೌಢದೇವರಾಯನ ಕಾಲದಲ್ಲಿ ಸಪ್ತಕಾವ್ಯದ ಗುರುಬಸವ,

ಮೊಗ್ಗೆಯ ಮಾಯಿದೇವ, ಕರಸ್ಥಲದ ನಾಗಿದೇವ ಮೊದಲಾದ ವೀರಶೈವ ಅನುಭಾವಿಗಳು 'ಸ್ವರವಚನ' ಪ್ರಕಾರದಲ್ಲಿ ಕೃಷಿ ಮಾಡಿದರು. ಪ್ರೌಢದೇವರಾಯನ ತರುವಾಯ ನೂರು ವರ್ಷ ಗತಿಸುವಲ್ಲಿ ಪಟ್ಟಕ್ಕೆ ಬಂದ ಕೃಷ್ಣದೇವರಾಯನ ಪರಿಸರದ ಪುರಂದರದಾಸ, ಕನಕದಾಸ ಮೊದಲಾದವರೆಲ್ಲ ಈ ಹಾಡುಗಬ್ಬ ಪ್ರಕಾರವನ್ನು ಹರಿಸರ್ವೋತ್ತಮ ನೆಲೆಯಲ್ಲಿ ದುಡಿಸಿ, 'ಕೀರ್ತನೆ' ಹೆಸರಿನಲ್ಲಿ ಪ್ರಸಿದ್ಧಿಪಡಿಸಿದರು. ಈ ದಾಸಸಂಪ್ರದಾಯದ ಎರಡನೆಯ ಘಟ್ಟದಲ್ಲಿ ಪ್ರಸನ್ನವೆಂಕಟದಾಸ, ವಿಜಯದಾಸ, ಮಹಿಪತಿದಾಸ ಮೊದಲಾದವರು ಹುಟ್ಟಿ 'ಕೀರ್ತನೆ' ಪ್ರಕಾರವನ್ನು ವಿಪುಲ ಪ್ರಮಾಣದಲ್ಲಿ ಬೆಳೆಸಿದರು. ರತ್ನಾಕರವರ್ಣಿ ಮೊದಲಾದ ಜೈನ ಕವಿಗಳು 'ಹಾಡು'ಗಳನ್ನು ಬರೆದರು. ಜೈನರ ಹಾಡು, ದಾಸರ ಕೀರ್ತನೆಯ ಜೊತೆ ಜೊತೆಗೇ ಕೆಸ್ತೂರದೇವ, ಜಿಗುನಿಮರುಳದೇವ, ಸರ್ಪಭೂಷಣಶಿವಯೋಗಿ, ಮುಪ್ಪಿನಷಡಕ್ಷರಿ, ಮೈಲಾರ ಬಸವಲಿಂಗ ಶರಣರು, ಕಡಕೋಳ ಮಡಿವಾಳಪ್ಪ, ಕೂಡಲೂರು ಬಸವಲಿಂಗಶರಣರು ಮೊದಲಾದ ವೀರಶೈವ ಅನುಭಾವಿಗಳು 'ಸ್ವರವಚನ' ಪರಂಪರೆಯನ್ನು ಮುಂದುವರಿಸಿದರು. ಈ ಎಲ್ಲ ರಚನೆಗಳನ್ನು ಒಂದೂ ಬಿಡದಂತೆ ಸಂಗ್ರಹಿಸಿ ಪ್ರಕಟಿಸಿದರೆ 'ಕೀರ್ತನ ಸಾಹಿತ್ಯ'ದ ಮಗ್ಗುಲಲ್ಲಿ 'ಸ್ವರವಚನ ಸಾಹಿತ್ಯ'ಎಂಬ ಇನ್ನೊಂದು ಪ್ರಕಾರ ಎದ್ದು ಕಾಣುತ್ತದೆ. 'ಹರಿಸರ್ವೋತ್ತಮ' ಹಾಡುಗಬ್ಬ ಸಂಪತ್ತಿನ ಜೊತೆ 'ಶಿವಸರ್ವೋತ್ತಮ' ಹಾಡುಗಬ್ಬ ಸಂಪತ್ತೂ ತೆರೆದುಕೊಳ್ಳುತ್ತದೆ.

ಪ್ರಾಚೀನಕಾಲದಿಂದಲೂ ಕರ್ನಾಟಕದಲ್ಲಿ ಓದುಗಬ್ಬ ಮತ್ತು ಹಾಡುಗಬ್ಬ ಎಂಬ ಎರಡು ಸಾಹಿತ್ಯಪ್ರಕಾರಗಳು ಬೆಳೆದುಬಂದಿವೆ. ಇವುಗಳಲ್ಲಿ ಒಂದು ವಾಚನಪಾತಳಿಯದು, ಸಾಹಿತ್ಯಗುಣ ಪ್ರಧಾನವಾದುದು. ಇನ್ನೊಂದು ಶ್ರವಣಪಾತಳಿಯದು, ಸಂಗೀತಗುಣ ಪ್ರಧಾನವಾದುದು. ಆದರೆ ಇಂಗ್ಲೀಷರ ಸಂಪರ್ಕದಿಂದಾಗಿ ಸಾಕ್ಷರತೆ ಬೆಳೆದು, ನಮ್ಮಲ್ಲಿ ಓದುಗಬ್ಬದೊಂದಿಗೆ ಹಾಡುಗಬ್ಬವನ್ನೂ ವಾಚನಪಾತಳಿಯಲ್ಲಿಟ್ಟು ಅಭ್ಯಾಸ ಮಾಡುವ ತಪ್ಪುಕ್ರಮ ವರ್ಧಿಸುತ್ತ ನಡೆಯಿತು. ಆಗ ಈ ಸ್ವರವಚನಗಳನ್ನು ಧ್ವನಿಮಾಧ್ಯಮದಲ್ಲಿ ಕೇಳಿ ಸಂಗೀತದ ನೆಲೆಯಲ್ಲಿ ವಿಮರ್ಶಿಸದೆ, ಅಕ್ಷರ ಮಾಧ್ಯಮದಲ್ಲಿ ಓದಿ ಸಾಹಿತ್ಯದ ನೆಲೆಯಲ್ಲಿ ವಿಮರ್ಶಿಸುವ ತಪ್ಪುಪದ್ಧತಿ ನಮ್ಮಲ್ಲಿ ಬೆಳೆಯಿತು. ಇದರಿಂದಾಗಿ ಅವು ಸಾಹಿತ್ಯಕ ಗುಣ ವಿದೂರ ರಚನೆಗಳೆಂಬ ಟೀಕೆಗೆ ಗುರಿಯಾದವು. ನಿಜಸ್ಥಿತಿಯೆಂದರೆ ಈ ಸಾಹಿತ್ಯವನ್ನು ಕಿವಿಯಿಂದಲೇ ಕೇಳಿ ವಿಮರ್ಶಿಸುವ ಹೊಸ ವಿಮರ್ಶಾ ಮಾನದಂಡಗಳು ಇಂದು ಬೆಳೆದು ಬರಬೇಕಾಗಿದೆ.

ಎರಡನೆಯದಾಗಿ ನಾವು ಮಾಡಬೇಕಾಗಿರುವ ಇನ್ನೊಂದು ಕಾರ್ಯವೆಂದರೆ, ಈ ಸಾಹಿತ್ಯದ ಪ್ರಸಾರ. ಧ್ವನಿಮಾಧ್ಯಮದ ಸಾಹಿತ್ಯವಾಗಿರುವ ಇದನ್ನು ಸಂಗೀತದ ಮೂಲಕ ಪ್ರಕಟಿಸುವ ವ್ಯವಸ್ಥೆ ಮಾಡುವುದು ಅವಶ್ಯವಿದೆ. ಅಂದರೆ ಸಂಗೀತಕಲಾವಿದರಿಂದ ಪ್ರಚುರಪಡಿಸುವ, ಧ್ವನಿಸುರುಳಿಗಳನ್ನು ಸಿದ್ಧಪಡಿಸುವ ಮೊದಲಾದ ಚಟುವಟಿಕೆಗಳು ಬೆಳೆದು ಬರಬೇಕಾಗಿದೆ.

ಹೀಗೆ ಸಮಗ್ರವಾಗಿ ಪ್ರಕಟಿಸುವುದು, ಹೊಸಬಗೆಯ ಮಾನದಂಡದಿಂದ ವಿಮರ್ಶಿಸುವುದು, ಸಂಗೀತ ಮಾಧ್ಯಮದಲ್ಲಿ ಪ್ರಸಾರಗೊಳಿಸುವುದು – ಈ ಮೂರೂ ಹಂತಗಳಲ್ಲಿ ಕೆಲಸ ನಡೆದರೆ ಮಾತ್ರ 'ಸ್ವರವಚನ'ಗಳಿಗೆ ಸರಿಯಾದ ನ್ಯಾಯ ಒದಗುತ್ತದೆ. ಈ ಬಗೆಯ ನ್ಯಾಯವನ್ನು ಒದಗಿಸಿಕೊಡುವ ಮೊದಲನೆಯ ಹಂತವಾಗಿ 'ಸಮಗ್ರ ಸ್ವರವಚನ ಸಾಹಿತ್ಯ ಪ್ರಕಟನ ಯೋಜನೆ'ಯನ್ನು ಶ್ರೀಮಠ ಕೈಗೊಂಡಿದೆ.

ಈ 'ಸ್ವರವಚನ ಸಾಹಿತ್ಯ ಪ್ರಕಟನ ಯೋಜನೆ'ಗೆ ಪ್ರೋತ್ಸಾಹವನ್ನು ನೀಡಿ, ಸ್ವರವಚನಸಾಹಿತ್ಯ ಸಂಪುಟಗಳು ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆಯಿಂದ ಪ್ರಕಾಶನಗೊಳ್ಳಲು ಆಶೀರ್ವದಿಸಿದ ಪರಮಪೂಜ್ಯ ಶ್ರೀ ಶಿವರಾತ್ರಿ ದೇಶಿಕೇಂದ್ರ ಸ್ವಾಮಿಗಳವರಿಗೆ ಪ್ರಣಾಮಗಳನ್ನು ಸಲ್ಲಿಸುತ್ತೇವೆ.

ತತ್ತ್ವಕ್ಕೆ ತತ್ತ್ವ, ಸಾಹಿತ್ಯಕ್ಕೆ ಸಾಹಿತ್ಯವಾಗಿರುವ 'ಸ್ವರವಚನಸಾಹಿತ್ಯ' ಏಕಕಾಲಕ್ಕೆ ಆತ್ಮಕಲ್ಯಾಣವನ್ನೂ, ಸಮಾಜಕಲ್ಯಾಣವನ್ನೂ ಪ್ರತಿಪಾದಿಸುವ ಮಹತ್ವವನ್ನು ಗಳಿಸಿದೆ. ಈ ಮೌಲಿಕ ಸಾಹಿತ್ಯವನ್ನು ಜನತೆಗೆ ಒದಗಿಸುವುದು ಈ ಯೋಜನೆಯ ಮುಖ್ಯ ಉದ್ದೇಶವಾಗಿದೆ. ಇಂತಹದೊಂದು ಆತ್ಯಮೂಲ್ಯವಾದ ಯೋಜನೆಯನ್ನು ರೂಪಿಸಿ ಮಾರ್ಗದರ್ಶನ ಮಾಡಿದವರು ನಮ್ಮ ನಾಡಿನ ಹೆಸರಾಂತ ಹಿರಿಯ ಸಂಶೋಧಕರೂ, ಪ್ರಾಧ್ಯಾಪಕರೂ ಆದ ಡಾ. ಎಂ. ಎಂ. ಕಲಬುರ್ಗಿ ಅವರು. ಪ್ರಾರಂಭದಲ್ಲಿ ಸುಪ್ರಸಿದ್ಧ ಸಾಹಿತಿಗಳಾದ ಡಾ. ಎಚ್. ತಿಪ್ಪೇರುದ್ರಸ್ವಾಮಿಯವರ ನಿರ್ದೇಶನದಲ್ಲಿ ಈ ಯೋಜನೆಯನ್ನು ಕಾರ್ಯ ರೂಪಕ್ಕೆ ತರಲು ಯೋಜಿಸಲಾಗಿತ್ತು. ಆದರೆ ಈಗ ಡಾ. ಎಂ.ಎಂ. ಕಲಬುರ್ಗಿಯವರ ನಿರ್ದೇಶನದಲ್ಲಿ ಈ ಸಂಪುಟಗಳು ಹೊರಬರುತ್ತಿವೆ.

ಈ ಯೋಜನೆಯ ಅಂಗವಾಗಿ 'ಸ್ವರವಚನ ಸಂಪುಟ – ಎರಡು' ಇದನ್ನು ಬೆಂಗಳೂರು ವಿಶ್ವವಿದ್ಯಾಲಯ, ಕನ್ನಡ ಅಧ್ಯಯನ ಕೇಂದ್ರದ ಸಂಪಾದಕರಾಗಿರುವ ಶ್ರೀ ಎಸ್. ಶಿವಣ್ಣ ಅವರು ಸಂಪಾದಿಸಿ ಸಿದ್ಧಪಡಿಸಿ ಕೊಟ್ಟಿದ್ದಾರೆ. ಲಕ್ಷ್ಮಿ ಮುದ್ರಣಾಲಯದ ಶ್ರೀ ಅಶೋಕ್‌ಕುಮಾರ್ ಹಾಗೂ ಅವರ ಸಿಬ್ಬಂದಿಯವರು ಅಂದವಾಗಿ ಮುದ್ರಿಸಿಕೊಟ್ಟಿದ್ದಾರೆ. ಈ ಕಾರ್ಯದಲ್ಲಿ ನೆರವಾದ ಎಲ್ಲರಿಗೂ ಧನ್ಯವಾದಗಳು.

ಈ ಕೃತಿಯನ್ನು ಸಹೃದಯರು ಸ್ವಾಗತಿಸುವರೆಂದು ನಂಬಿದ್ದೇವೆ.

ಪ್ರಕಾಶಕರು

# ಮೊದಲ ಮಾತು

ಜೇಡರ ದಾಸಿಮಯ್ಯ, ಸಕಲೇಶ ಮಾದರಸ, ಬಸವಣ್ಣ, ಪ್ರಭುದೇವ, ನೀಲಮ್ಮ, ಅಕ್ಕಮಹಾದೇವಿ ಮೊದಲಾದ ಅಸಂಖ್ಯಾತ ಶಿವಶರಣ/ಶರಣೆಯರು 'ಗದ್ಯಗಂಧಿ' ರೂಪದಲ್ಲಿನ ವಚನಗಳನ್ನು ಬರೆದಂತೆ ಸ್ವರವಚನಗಳನ್ನು ರಚಿಸಿದ್ದಾರೆ. ಇತ್ತೀಚಿನ ವರ್ಷಗಳಲ್ಲಿ ವಿದ್ವಾಂಸರು ಶಿವಶರಣರ ಸ್ವರವಚನಗಳ ಪ್ರಕಾರದ ಬಗೆಗೆ ತಾಳಿದ ಆಸಕ್ತಿಯ ಪರಿಣಾಮವಾಗಿ ಸ್ವರವಚನಗಳಿಗೆ ಸಂಬಂಧಿಸಿದಂತೆ ಹೆಚ್ಚು ಹೆಚ್ಚಿನ ಮೂಲ ಸಾಮಗ್ರಿ ಬೆಳಕಿಗೆ ಬರತೊಡಗಿದೆ.

ಡಾ। ಎಲ್. ಬಸವರಾಜು ಅವರ 'ಶಿವದಾಸ ಗೀತಾಂಜಲಿ' ಪೀಠಿಕೆ (ಪು. 77–96), ಡಾ। ಎಂ. ಚಿದಾನಂದಮೂರ್ತಿಯವರ (1975) 'ವಚನ ಸಾಹಿತ್ಯ' (ಪು. 243–47), ಡಾ। ವಿ. ಶಿವಾನಂದರ 'ಪ್ರೌಢದೇವರಾಯನ ಕಾಲದ ಕನ್ನಡ ಸಾಹಿತ್ಯ' (1978) (ಪು. 224–37) ಡಾ। ವೀರಣ್ಣ ರಾಜೂರ ಅವರ ಚೆನ್ನವೀರಾರ್ಯರ 'ಶಿವಯೋಗ ಪ್ರದೀಪಿಕೆ'ಗೆ ಬರೆದ 'ಪ್ರಸ್ತಾವನೆ' (ಪು. xx-xxv) ಹಾಗೂ ಡಾ। ಎಂ. ಎಂ. ಕಲಬುರ್ಗಿ ಅವರ 'ಸ್ವರ ವಚನ ಸಾಹಿತ್ಯ' ಲೇಖನ (ಗೌರವ, 1986, ೨೦೬)ಗಳಲ್ಲಿ ಸ್ವರವಚನಗಳ ಹುಟ್ಟು ಬೆಳವಣಿಗೆಗೆ ಸಂಬಂಧಿಸಿದ ವಿವಿಧ ಅಭಿಪ್ರಾಯಗಳ ವಿವರಗಳಿವೆ.

ಈಗ ನಮಗೆ ತಿಳಿದು ಬಂದಿರುವಂತೆ ಬಸವಣ್ಣನವರ (೧೧೬೦) ಹಿರಿಯ ಸಮಕಾಲೀನರಾಗಿದ್ದ ಸಕಲೇಶ ಮಾದರಸರು (೧೧೩೦) 'ಸಕಲೇಶ' ಅಂಕಿತದಲ್ಲಿ ರಚಿಸಿರುವ 'ತಂಗಾಳಿಗಳಿ E ಲ ? ∃ ರು ಮರನೆ' ಎಂಬ ಸ್ವರವಚನವೇ ಅತ್ಯಂತ ಪ್ರಾಚೀನ ಉಪಲಬ್ಧ ಸ್ವರವಚನವಾಗಿದೆ.

ಪ್ರಸ್ತುತ ಕೃತಿ 'ಸ್ವರವಚನ ಸಂಪುಟ – ೨'ರಲ್ಲಿ ೩೦೦ ಸ್ವರವಚನಗಳಿವೆ. ಕಾಲದ ದೃಷ್ಟಿಯಿಂದ ಕ್ರಿ. ಶ. ೧೧೬೦ರಲ್ಲಿದ್ದ ಅಕ್ಕಮಹಾದೇವಿಯಿಂದ ಹಿಡಿದು ಕ್ರಿ. ಶ. ೧೮೭೫–೭೬ರಲ್ಲಿನ ಅಜ್ಞಾತ 'ಕಂಪಲಿ ರಾಮಲಿಂಗ' ಅಂಕಿತದ ಸ್ವರವಚನಕಾರನವರೆಗೂ ರಚಿತವಾದ, ವಿವಿಧ ಶತಮಾನಗಳ ಅವಧಿಗೆ ಸಂಬಂಧಿಸಿದ ಸ್ವರವಚನಗಳಿವೆ. ಇಲ್ಲಿನ ಕೃತಿಗಳಲ್ಲಿ ಕರ್ತೃ ಕಾಲಗಳು ತಿಳಿದು ಬಂದಿರುವ ಕೃತಿಕಾರರಿಗಿಂತ ತಿಳಿಯದಿರುವ ಸ್ವರವಚನಕಾರರ ಸಂಖ್ಯೆ ಅಧಿಕವಾಗಿದೆ.

ಸ್ವರವಚನ ಕರ್ತೃಗಳು (ಕಾಲಾನುಗುಣವಾಗಿ)

ಅಕ್ಕಮಹಾದೇವಿ (೧೧೬೦)

ಶ್ರೀ ಶೈಲದ ಚೆನ್ನಮಲ್ಲಿಕಾರ್ಜುನನ ಅವಿಚ್ಛಿನ್ನ ಭಕ್ತೆ. ಇವಳ ಕೃತಿಗಳ ಅಂಕಿತ 'ಚೆನ್ನ ಮಲ್ಲಿಕಾರ್ಜುನ'. ಬಸವಾದಿ ಪ್ರಮಥರ ಸಮಕಾಲೀನೆ. ಇವಳಿಗೆ ಸಂಬಂಧಿಸಿದಂತೆ ಹರಿಹರ (೧೨೦೦), ಚೆನ್ನಬಸವಾಂಕ. (೧೫೫೦), ರಾಚಯ್ಯ (೧೮೦೦), ನಂದಪ್ಪ (೧೮೦೦), ರಾಚಮ್ಮ (೧೮೦೦) ಮೊದಲಾದವರು ಕೃತಿಗಳನ್ನು ರಚಿಸಿದ್ದಾರೆ.

ಕೃತಿಗಳು

– ಅಕ್ಕಗಳ ಪೀಠಿಕೆ (ಅಲಭ್ಯ)

- ವಚನಗಳು
- ಸ್ವರವಚನಗಳು
- ಸೃಷ್ಟಿಯ ವಚನ

ಈಕೆಯ ೨೪ ಸ್ವರವಚನಗಳನ್ನು ಕಂಬಾಳ ಶಾಂತಮಲ್ಲೇಶ (೧೬೦೦) 'ಗಣವಚನ ರತ್ನಾವಳಿ'ಯಲ್ಲೂ, ೧೫ ಸ್ವರವಚನಗಳನ್ನು ಚೆನ್ನವೀರಾರ್ಯ (೧೬೦೦) 'ಶಿವಯೋಗ ಪ್ರದೀಪಿಕೆ'ಯಲ್ಲೂ ಉಲ್ಲೇಖಿಸಿದ್ದಾರೆ.

ಇವುಗಳಲ್ಲಿ ಕಾಣಬರದ ಈಕೆಯ ೫ ಸ್ವರ ವಚನಗಳು ಪ್ರಸ್ತುತ ಸಂಪುಟದ ಕ್ರಮಾಂಕ ೧೪೯–೫೦ ಹಾಗೂ ೨೬೦–೬೨ ರಲ್ಲಿವೆ.

**ಕರಸ್ಥಲದ ನಾಗಿದೇವ (೧೪೩೦)**

ಇವನ ವ್ಯಕ್ತಿತ್ವದ ಬಗೆಗೆ ಡಾ। ಎಲ್. ಬಸವರಾಜು ಅವರು 'ಇವನಲ್ಲಿ ಅಲ್ಲಮನ ಉತ್ಕಟ ವೈರಾಗ್ಯ ಧೀರಭಾವವೂ, ತಣ್ಣನುರಿವ ಜ್ಞಾನ ಪ್ರದೀಪ್ತಿಯೂ, ಬೆಡಗಿನ ಮಾತಿನ ಮಾಯದ ಮೋಡಿಯೂ ಸೋಸಿ ನಿಂತಿವೆಯೆಂದರೆ ಅತಿಶಯೋಕ್ತಿಯಾಗಲಾರದು' ಎಂದಿದ್ದಾರೆ. (ಶಿವದಾಸ ಗೀತಾಂಜಲಿ, ಪೀಠಿಕೆ, ೧೯೬೩, ೧೨೩). ನೂರೊಂದು ವಿರಕ್ತರಲ್ಲಿ ಅಗ್ರಗಣ್ಯನೆನಿಸಿದ ಕರಸ್ಥಳದ ವೀರಣ್ಣೊಡೆಯನ (೧೪೩೦) ಕರಕಮಲ ಸಂಜಾತ. ವಿಜಯನಗರದ ದೊರೆ ಇಮ್ಮಡಿ ಪ್ರೌಢದೇವರಾಯನ (೧೪೧೭–೧೪೪೭) ಸಮಕಾಲೀನ. ಈತನ ಸಮಕಾಲೀನವರು ಜಕ್ಕಣಾರ್ಯ, ಕಲ್ಲುಮಠದ ಪ್ರಭುದೇವ, ಚಾಮರಸಾದಿಗಳು. ಈತನ ಜೀವನಕ್ಕೆ ಸಂಬಂಧಿಸಿದ ಹಲವಾರು ಅಂಶಗಳು ವಿರೂಪಾಕ್ಷ ಪಂಡಿತ (೧೫೮೪)ನ 'ಚೆನ್ನಬಸವ ಪುರಾಣ'; ರುದ್ರ (೧೬೫೦)ನ 'ಕರಸ್ಥಲದ ನಾಗಯ್ಯನ ಚರಿತೆ'; ಹಾಗೂ ಮೊದಿಯ ರುದ್ರ (೧೭೩೭) ನ 'ವಿರಕ್ತರ ಕಾವ್ಯ' ಗಳಲ್ಲಿವೆ.

**ಕೃತಿಗಳು**

- ಅಕ್ಷರದ ಚೌಪದನ (೨೧)
- ಕರಸ್ಥಲದ ನಾಗಿದೇವ ತ್ರಿವಿಧಿ (೨೧)
- ಕಾಲಜ್ಞಾನ
- ಮಡಿವಾಳಯ್ಯಗಳ ತಾರಾವಳಿ (೮ + ೨೭ ನುಡಿ)
- ಮಲ್ಲಿಕಾಮಾಲೆ (೧೧/೧೩ ವೃತ್ತ)
- ಲಿಂಗನಿಜಸ್ಥಲದ ತ್ರಿವಿಧಿ (೭–೩೧೨)
- ಶಾಂತ ಶತಕ (೧೦೮/೧೧೫ ಕಂದ)
- ಶಿವಜ್ಞಾನಾಂಜನ ರತ್ನಮಾಲೆ (೧೭೭ ತ್ರಿವಿಧಿ)
- ಸ್ವರವಚನಗಳು
- ಸೋಬಾನ ತ್ರಿವಿಧಿ

ಈತನ ಸ್ವರವಚನಗಳನ್ನು ಕಂಬಾಳ ಶಾಂತಮಲ್ಲೇಶ (೧೬೦೦) 'ಗಣವಚನ ರತ್ನಾವಳಿ'ಯಲ್ಲೂ, ಚೆನ್ನವೀರಾರ್ಯ (೧೬೦೦) 'ಶಿವಯೋಗ ಪ್ರದೀಪಿಕೆ'ಯಲ್ಲೂ ಉದಾಹರಿಸಿದ್ದಾರೆ.

'ಸ್ವರವಚನ ಸಂಪುಟ – ೧'ರ ಕ್ರಮಾಂಕ ೧೬೩ರಲ್ಲಿ ಈತನ ಸ್ವರವಚನವೊಂದು ಪ್ರಕಟವಾಗಿದೆ.

ಪ್ರಸ್ತುತ ಸಂಪುಟದಲ್ಲಿ ಈತನ ಎರಡು ಸ್ವರವಚನಗಳು ಕ್ರಮಾಂಕ ೧೩೧–೧೩೨ ರಲ್ಲಿವೆ.

**ನಿರ್ವಾಣಿ ಬೋಳೇಶ (೧೪೩೦)**

ನೂರೊಂದು ವಿರತರಲ್ಲೊಬ್ಬ. ಇಮ್ಮಡಿ ಪ್ರೌಢದೇವರಾಯನ (೧೪೧೯–೪೬) ಸಮಕಾಲೀನ. ವಿರೂಪಾಕ್ಷ ಪಂಡಿತ (೧೫೮೪)ನ ಚೆನ್ನಬಸವ ಪುರಾಣ' ಹಾಗೂ ಮೊದಿಯ ರುದ್ರ (೧೭೩೬) ನ 'ವಿರಕ್ತರ ಕಾವ್ಯ' ಈತನನ್ನು ಪ್ರಸ್ತಾಪಿಸಿವೆ. ಈತ ಸ್ವರವಚನಗಳ ಕರ್ತೃ.

ಈತನ ಸ್ವರವಚನಗಳು ಕಂಬಾಳ ಶಾಂತಮಲ್ಲೇಶನ (೧೬೦೦) 'ಗಣವಚನ ರತ್ನಾವಳಿ' ಹಾಗೂ ಚೆನ್ನವೀರಾರ್ಯರ (೧೬೦೦) 'ಶಿವಯೋಗ ಪ್ರದೀಪಿಕೆ'ಗಳಲ್ಲಿ ಉದ್ಧೃತವಾಗಿದೆ.

ಅಲ್ಲಿರದ ಕ್ರಮಾಂಕ ೧೯೦ನೆಯ ಸ್ವರವಚನ ಪ್ರಸ್ತುತ ಸಂಪುಟದಲ್ಲಿದೆ.

**ಕವಿಲಿಂಗ (೧೪೯೦)**

ವಿಜಯನಗರದ ಸಾಳುವ ನರಸಿಂಹನ (೧೪೮೬–೯೬) ಆಸ್ಥಾನಕವಿ. ಈತನನ್ನು 'ಪರಬ್ರಹ್ಮ ಚರಿತೆ' ಕರ್ತೃ ಅಹೋಬಲಕವಿ (ಸು. ೧೭೦೦), ಹಂಪೆಯ ಮಹಾಲಿಂಗ ಸ್ವಾಮಿ (ಸು. ೧೭೦೦) 'ಬಾಲಕುಮಾರರಾಮನ ಸಾಂಗತ್ಯ'ಗಳಲ್ಲಿ ಸ್ಮರಿಸಿದ್ದಾರೆ. ನಂಜನಗೂಡಿನ ನಂಜುಂಡೇಶ್ವರನ ಭಕ್ತ.

ಈತ ೧೩೦ಕ್ಕೂ ಮೀರಿ ಸ್ವರವಚನಗಳನ್ನು ರಚಿಸಿದ್ದಾನೆ; ಅಲ್ಲದೆ 'ನಂಜುಂಡೇಶ್ವರ ಜಾತ್ರೆಯ ತಾರಾವಳಿ' (ಸಂ. ವೀರಣ್ಣ ರಾಜೂರ, ಬಸವಪಥ, 5, 7, 8–9, 1983, 58–62) ಮತ್ತು 'ಲಿಂಗಾಂಗ ಸಮರಸದ ಪಾರಿಜಾತ' [ಓ] ೫೦೬ಯಳ (೩–೪) ಬೃಹನ್ಮಠ, ಚಿತ್ರದುರ್ಗ) ಗಳು ಇತರ ರಚನೆಗಳು.

ಈತನ ನಾಲ್ಕು ಸ್ವರವಚನಗಳು 'ಸ್ವರವಚನ ಸಂಪುಟ – ೧' ಕ್ರಮಾಂಕ ೪೪–೭ರಲ್ಲಿವೆ. ಈ ಸಂಪುಟದಲ್ಲಿನ ಕ್ರಮಾಂಕ ೧೯–೭೫ರಲ್ಲಿ ಈತನ ೫೭ ಸ್ವರವಚನಗಳಿವೆ.

**ವೀರಣ್ಣದೇವ (೧೫೫೦)**

ಡಾ। ವೀರಣ್ಣ ರಾಜೂರ ಅವರು ವೀರಣ್ಣದೇವನನ್ನು ಕರಸ್ಥಲದ ವೀರಣ್ಣೊಡೆಯ (೧೪೩೦) ರೊಡನೆ ಸಮೀಕರಿಸಲು ಪ್ರಯತ್ನಿಸಿದ್ದಾರೆ. ಈ ಬಗ್ಗೆ ನಿರ್ಧರಿಸಲು ಹೆಚ್ಚಿನ ಸಾಮಗ್ರಿಯ ಆವಶ್ಯಕತೆ ಇದೆ. (ನೋಡಿ : ಪ್ರಸ್ತಾವನೆ, ಶಿವಯೋಗ ಪ್ರದೀಪಿಕೆ, (ಸಂ.) ವೀರಣ್ಣ ರಾಜೂರ, ೧೯೮೧)

ಈತನ ಸ್ವರವಚನಗಳನ್ನು ಕಂಬಾಳ ಶಾಂತಮಲ್ಲೇಶ (೧೬೦೦) ಹಾಗೂ ಚೆನ್ನವೀರಾರ್ಯ (೧೬೦೦)ರು ಕ್ರಮವಾಗಿ 'ಗಣವಚನ ರತ್ನಾವಳಿ', 'ಶಿವಯೋಗ ಪ್ರದೀಪಿಕೆ'ಗಳಲ್ಲಿ ಉದಾಹರಿಸಿದ್ದಾರೆ.

ಪ್ರಸ್ತುತ ಸಂಪುಟದಲ್ಲಿ ಅಲ್ಲಿರದ ಎರಡು ಸ್ವರವಚನಗಳು ಕ್ರಮಾಂಕ ೨೪೮–೨೪೯ರಲ್ಲಿವೆ.

**ಗುರುಬಸವಯ್ಯ (೧೫೮೦)**

ವೀಣೆ ಗುರುಬಸವನೆಂದು ಪ್ರಖ್ಯಾತ ನಾದ ಈತ, ತಾನು ರಚಿಸಿರುವ ವಚನವೊಂದರಲ್ಲಿ ಗುರು ಪರಂಪರೆಯ ಬಗೆಗೆ, ಹೀಗೆ ತಿಳಿಸಿದ್ದಾನೆ. ಚೆನ್ನಬಸವ ಶಿವಯೋಗಿ (ಆವರ ಶಿಷ್ಯರ ಶಿಷ್ಯ) > ಹರದನ ಹಳ್ಳಿಯ ಪ್ರಭುಲಿಂಗಗುರುಸ್ವಾಮಿ > ಚೆನ್ನಯ್ಯ > ಸಿದ್ಧವೀರೇಶ್ವರ ದೇವ > ಗುರುಬಸವಯ್ಯ. ಈತ

ವಚನ, ಸ್ವರವಚನಗಳ ಕರ್ತೃ. ಗುರುಬಸವಯ್ಯನ 175 ಸ್ವರವಚನ, 87 ಸ್ವರಬೊಲ್ಲಿ ಹಾಗೂ ವಚನವೊಂದನ್ನು ಮೊರಬದ ಮಲ್ಲಿಕಾರ್ಜುನರು ಈಗಾಗಲೇ ಪ್ರಕಟಿಸಿದ್ದಾರೆ.

ಈತನ ಸ್ವರವಚನಗಳು ಕಂಬಾಳ ಶಾಂತಮಲ್ಲೇಶನ (೧೬೦೦) 'ಗಣವಚನ ರತ್ನಾವಳಿ' ಹಾಗೂ ಚೆನ್ನವೀರಾರ್ಯನ (೧೬೦೦) 'ಶಿವಯೋಗ ಪ್ರದೀಪಿಕೆ' ಗಳಲ್ಲಿವೆ.

'ಸ್ವರವಚನ ಸಂಪುಟ – ೧' ರಲ್ಲಿ ಕ್ರಮಾಂಕ ೮೯, ೯೧–೨ರಲ್ಲಿ ಈತನ ಮೂರು ಸ್ವರವಚನಗಳಿವೆ.

ಪ್ರಸ್ತುತ ಸಂಪುಟದಲ್ಲಿ ಕ್ರಮಾಂಕ ೧೨೦–೧೨೧ ರಲ್ಲಿ ಎರಡು ಸ್ವರವಚನಗಳಿವೆ.

ವಿರಕ್ತ ತೋಂಟದಾರ್ಯ (೧೬೧೬)

ಪರ್ವತೇಂದ್ರನ ಕರಜಾತ. ಗೂಳೂರು ಸಿದ್ಧವೀರೇಶನ ಕೃಪಾಪಾತ್ರ. ಈತನಿಗೆ ತೋಂಟದ ಸಿದ್ಧಲಿಂಗ ದೇಶಿಕನೆಂಬ ಹೆಸರಿದೆ. ಈತನ ಕೃತಿಗಳಲ್ಲಿ 'ನಿರಂಜನಲಿಂಗ'ವೆಂಬ ಅಂಕಿತವಿದೆ. ಕನ್ನಡ/ ಸಂಸ್ಕೃತಗಳಲ್ಲಿ ರಚಿಸಿದ್ದಾನೆ.

ಕೃತಿಗಳು

– ಕರ್ಣಾಟಕ ಶಬ್ದಮಂಜರಿ (೧೨೦ ವಾ. ಷ.)
– ಚಿದಾನಂದ ಸಿಂಧು (ಚಂಪು)
– ದೇವಿಯರ ಸಹಸ್ರನಾಮ (೪೪ ವಾ. ಷ.)
– ಪಂಚಗದ್ಯಗಳ ಟೀಕೆ
– ಪಾಲ್ಕುರಿಕೆ ಸೋಮೇಶ್ವರ ಪುರಾಣ (ವಾ. ಷ.)
– ಸಿದ್ಧೇಶ್ವರ ಪುರಾಣ (ವಾ. ಷ.)
– ಮಗ್ಗೆಯ ಮಾಯಿದೇವರ ಶತಕತ್ರಯ ಟೀಕೆ
– ಮನೋವಿಜಯ (ಗುರುಬಸವ) ತಾತ್ಪರ್ಯ
– ತೋಂಟದಾರ್ಯ ರಗಳೆ
– ದೇವಿಯರ ಸಹಸ್ರನಾಮ (೪೪ ವಾ. ಷ.)
– ನೂತನ ಪುರಾತನರ ರಗಳೆ
– ನಿರಂಜನಲಿಂಗ ಶತಕ (೧೦೫ ಕಂದ + ೧ ವೃ)
– ನಿರಂಜನ ಶತಕಂ (೧೦೪ ವೃತ್ತ)
– ಶಿವಸಹಸ್ರನಾಮ (೨೫ ವಾ. ಷ.)
– ಶೈವಸಂಜೀವಿನಿ (ಟೀಕೆ)
– ಸರ್ವಮಂಗಳೆ ಶತಕ (೧೦೮ ವೃತ್ತ)
– ಸಿದ್ಧಲಿಂಗೇಶ್ವರ ಶತಕ (೧೦೭ ವೃತ್ತ)
– ಸ್ವರವಚನಗಳು

ಸಂಸ್ಕೃತದಲ್ಲಿ

- ಕೈವಲ್ಯ ಸಾರ
- ಬಸವೇಶ್ವರ ಸಹಸ್ರನಾಮಾವಳಿ
- ಷಟ್‌ಸ್ಥಲಜ್ಞಾನ ಚಿಂತಾಮಣಿ

'ಸ್ವರ ವಚನ ಸಂಪುಟ – ೧'ರಲ್ಲಿ ಈತನ ಮೂರು ಸ್ವರವಚನಗಳು ಕ್ರಮಾಂಕ ೧೬೫–೬೭ರಲ್ಲಿವೆ.

ಪ್ರಸ್ತುತ ಕೃತಿಯಲ್ಲಿನ ಕ್ರಮಾಂಕ ೧೮೩–೮೫ರಲ್ಲಿ ಈತನ ನಾಲ್ಕು ಸ್ವರವಚನಗಳಿವೆ.

[ಕೋರಾಣ್ಯದ ಶಿವಲಿಂಗ] (ಸು. ೧೬೫೦)

ಕೆಳದಿ ಶಿವಪ್ಪನಾಯಕರ (೧೬೪೫–೧೬೬೧) ಅಳಿಯ ಬಸವಲಿಂಗಯ್ಯ ಕೋರಾಣ್ಯದ ಶಿವಲಿಂಗ ದೇವರ ಶಿಷ್ಯ. ಈತನೋ ಅಥವಾ ಮತ್ತೊಬ್ಬನೋ ಕೋರಾಣ್ಯದ ಶಿವಲಿಂಗ ಅಂಕಿತದಲ್ಲಿ ಸ್ವರವಚನಗಳನ್ನು ರಚಿಸಿದ್ದಾನೆ. ಈತನ ಕಾಲ ಸು. ೧೬೫೦

'ಸ್ವರವಚನ ಸಂಪುಟ – ೧'ರಲ್ಲಿನ ಕ್ರಮಾಂಕ ೭೩–೪ರಲ್ಲಿ ಈತನ ಮೂರು ಸ್ವರ ವಚನಗಳಿವೆ.

ಪ್ರಸ್ತುತ ಸಂಪುಟದಲ್ಲಿ ಈತನ ಸ್ವರವಚನವೊಂದು ಕ್ರಮಾಂಕ ೧೧೧ರಲ್ಲಿದೆ.

ಸೋದೆ ಸದಾಶಿವರಾಜ (೧೬೭೪–೧೭೧೭ ?)

ಬನವಾಸಿ ಹಿರಿಯ ಮಠದ ಮಳೆ ಬಗೆಗೆ ಸಂಬಂಧಿಸಿದ ಮಳೆಯಗುರು ನಂದೀಶ್ವರ ಕರುಣಸಂಜಾತ. ಈತ ಕನ್ನಡದ ವಿವಿಧ ಛಂದೋಪ್ರಕಾರಗಳಲ್ಲಿ ಕೃತಿಗಳನ್ನು ರಚಿಸಿದ್ದು ಅವು ಇಂತಿವೆ.

- ಉಳುವೆಯ ಮಹಾತ್ಮೆ (ಕಂದ + ಶ್ಲೋಕ + ವೃತ್ತ)
- ಕಲಹ ಕೇತಯ್ಯಗಳ ಲಕ್ಷಣ (ಗದ್ಯ + ಕಂದ)
- ಖಡ್ಗ ಪ್ರಬಂಧ
- ಜಾವಡಿ
- ತ್ರಿವಿಧಿ
- ನವರಸ ಜಕ್ಕಿಣಿ (ಹಾ)
- ನಂದೀಶ್ವರ ಅಷ್ಟಕ (ವರವನ್ನಿತ್ತು......) (೮ ವೃ + ಶ್ಲೋ)
- ನಂದೀಶ್ವರ ಅಷ್ಟಕ (ಈಶಾಧೀಶ್ವರ......) (೮ ವೃತ್ತ)
- ಪಂಚವಿಂಶತಿಲೀಲೆಯ ಮಂಗಳಾಷ್ಟಕ (೯ ವೃತ್ತ)
- ಪಂಚವಿಂಶತಿಲೀಲೆಯ ರಗಳೆ
- ಪ್ರಭುಲಿಂಗಲೀಲೆಯ ಜಾವಡಿ
- ಭಿಕ್ಷಾಟನಲೀಲೆಯ ಕಂದ
- ಮಹಾಚತುರಂಗ ಲಕ್ಷಣ
- ರಾಗಮಾಲಿಕೆ
- ವಿನಾಯಕ ಮಂಗಳಾಷ್ಟಕ (೧೦ ವೃತ್ತ)

– [ಶಿವ] ಮಂಗಳಾಷ್ಟಕ (೯ ವೃತ್ತ)
– ಸದಾಶಿವನೀತಿ (ಕಂದ)
– ಸದಾಶಿವರಾಜೀಯ
– ಸ್ವರವಚನ
– ಹಾಲಾಸ್ಯಪುರಾಣ (ಭಾ. ಷ.)

ಸಂಸ್ಕೃತದಲ್ಲಿ

– ಅಶ್ವಶಾಸ್ತ್ರ
– ಬಸವಪುರಾಣ (ಶಂಕರಾರಾಧ್ಯ) ಟೀಕೆ

'ಸ್ವರವಚನ ಸಂಪುಟ – ೧'ರಲ್ಲಿ ಕ್ರಮಾಂಕ ೧೫೭–೬೦ ರಲ್ಲಿವೆ.

ಪ್ರಸ್ತುತ ಸಂಪುಟದಲ್ಲಿ ಕ್ರಮಾಂಕ ೨೭೩ರಲ್ಲಿ ಈತನ ಸ್ವರವಚನವೊಂದಿದೆ.

ಇಮ್ಮಡಿ ಗುರುಸಿದ್ಧಸ್ವಾಮಿ (?–೧೭೨೯)

ಮುರಿಗಾ ಶಾಂತವೀರಸ್ವಾಮಿಗಳ ಶಿಷ್ಯ. ಕನ್ನಡ/ಸಂಸ್ಕೃತಗಳಲ್ಲಿ ಉದ್ದಾಮ ಪಂಡಿತ. ಶಿವಲಿಂಗ, ಶಿವಲಿಂಗೇಶ ಈತನ ಕೃತಿಗಳ ಅಂಕಿತ. ಈಗ ತಿಳಿದು ಬಂದಿರುವಂತೆ ಈತ ಕನ್ನಡದಲ್ಲಿ ೨೩ ಕೃತಿಗಳನ್ನು ಸಂಸ್ಕೃತದಲ್ಲಿ ೩ ಕೃತಿಗಳನ್ನು ರಚಿಸಿದ್ದಾನೆ.

ಕನ್ನಡದಲ್ಲಿ

– ಉದ್ಧರಣೆಯ ವಾರ್ಧಿಕ (೩೯)
– ಕನ್ನಡ ವಿರೂಪಾಕ್ಷ ಪಂಚಾಶಿಕೆ (ಭಾ. ಷ.)
– ಕರಣ ಹಸಿಗೆ (ಚೆನ್ನಬಸವ) ಟೀಕೆ
– ಕೈವಲ್ಯ ಸೋಪಾನ ನಾಮ್ನೈಕೋತ್ತರ ಶತಸ್ಥಲ (ಹಾ)
– ಕೊರವಂಜಿ ಕಟ್ಟಳೆ
– ಜಲಂಧರ ಕಾಳಗ (ಯಕ್ಷಗಾನ)
– ಪರಮತ ಖಂಡನದ ವಾರ್ಧಿಕ ಷಟ್ಪದಿ
– ಪಾದಸ್ತೋತ್ರ (ಹಾ)
– ಬಿಜ್ಜಾಂಬೆ ಚರಿತೆ (ಯ)
– ಮಿಶ್ರಾರ್ಪಣ ವಾರ್ಧಿಕ
– ಮುರಿಗೆ ತಾರಾವಳಿ
– ಯೋಗಕಲಾಪಸಾರ (ಭಾ. ಷ.)
– ಲಿಂಗಾಚಾರ ರಚನಾಗಮ ಟೀಕೆ
– ಶಿವಮತ ಪ್ರತಿಷ್ಠಾಪನ ವಾರ್ಧಿಕ
– ಶಿವರಹಸ್ಯ ಪುರಾಣ (ಭಾ. ಷ.)
– ಶಿವಲಿಂಗ ನಾಂದ್ಯ (ಭಾ. ವಾ. ಷ.)

- ಶಿವಲಿಂಗ ಮಹಿಮಾ ಷಟ್ಪದಿ (ವಾ. ಷ.)
- ಶಿವಾಧಿಕ್ಯ ತಿಲಕ (ವಾ. ಷ.)
- ಶೂನ್ಯಮಂತ್ರಗೋಪ್ಯ (೨೦೯ ವಚನ)
- ಸ್ಕಂದ ಕಲ್ಯಾಣ (ಚೌಪದಿ)
- ಸ್ವರವಚನ
- ಹಾಲಾಸ್ಯ ಪುರಾಣ (ಚಂಪು)
- ಹೋಳಿಪದ

ಸಂಸ್ಕೃತದಲ್ಲಿ

- ಚಾಮರವೃತ್ತ (೩/೫ ವೃತ್ತ)
- ನಂದೀಶ್ವರ ದಂಡಕ
- ಪ್ರಭುಲೀಲಾ

ಬೆರಟೂರ ಕರಿಬಸವ (ಸು. ೧೭೦೦)

ಕೃತಿಗಳು

- ಚಿತ್ರಶೇಖರ ಸೋಮಶೇಖರ ಚೌಪದನ
- ಸ್ವರವಚನಗಳು

ಈತನ ಚೌಪದನದ ಕೃತಿಯೊಂದು 'ಶಕ ೧೭೦೨ ಶಾರ್ವರಿನಾಮ ಸಂವತ್ಸರ ಮಾರ್ಗಶಿರ ೬ ಶನಿವಾರ' ಪ್ರತಿಯಾಗಿದೆ. (ಬಿ. ೯೬೫/೧, ಕ.ಅ.ಕೇಂ., ಬೆಂ.ವಿ.ವಿ.)

ಪ್ರಸ್ತುತ ಸಂಪುಟದಲ್ಲಿ ಈತನ ೬ ಸ್ವರವಚನಗಳು ಕ್ರಮಾಂಕ ೨೦೦–೨೦೫ರಲ್ಲಿವೆ.

ಐನೂಲಿ ಕರಿಬಸವಾರ್ಯ (೧೭೪೫–೧೮೪೦)

ಗುಲಬರ್ಗಾ ಜಿಲ್ಲೆ ಚಿಂಚೋಳಿ ತಾಲ್ಲೂಕ್ ಐನೂಲಿಯವ. ಇವನಿಗೆ ಕವೀಂದ್ರ ಶಾಬಕನೆಂಬ ಹೆಸರೂ ಉಂಟು. ತಾತ ರುದ್ರಸ್ವಾಮಿ. ಚಿಡಗುಪ್ಪಾದ ಚನ್ನವೀರಸ್ವಾಮಿಗಳು ಮನೆಯ ಗುರುಗಳು. ಹೆಂಡತಿ ರಾಚಮ್ಮ. ಮಗ ವೀರಬಸಯ್ಯ. ಕನ್ನಡ ಸಂಸ್ಕೃತ ತೆಲುಗು ಭಾಷೆಗಳಲ್ಲಿ ಕೃತಿಗಳನ್ನು ರಚಿಸಿದ್ದಾನೆ. ಈತನ ಕೃತಿಗಳ ಅಂಕಿತ ಐನೆಲೆ ಚನ್ನವೀರ. ಈತ ಶಾ. ಶ. ೧೭೬೨ ಶಾರ್ವರಿ ಸಂವತ್ಸರ ಭಾದ್ರಪದ ಬ ೩ ಸೋಮವಾರ ಹಗಲು ಎಂಟುತಾಸಿನಲ್ಲಿ ಲಿಂಗೈಕ್ಯನಾದಂತೆ ತಿಳಿದು ಬಂದಿದೆ. ಈತನ ಸಮಾಧಿ ಚಿಂಚೋಳಿ ಹಂಪೀಮಠದಲ್ಲಿದೆ.

ಈತನ ಸ್ವರವಚನಗಳ ಕಾಗದ ಪ್ರತಿಯೊಂದು 'ಶಾಲಿವಾಹನ ಶಕ ೧೭೫೨ ವಿಕೃತಿ ಸಂವತ್ಸರ ಶ್ರಾವಣ ಭೌಳಿ ಪಾಡ್ಯಮಿ ೧ ಗುರುವಾರ' ರಚಿತವಾಗಿದೆ. (ಡಾ| ಮುದ್ದಣ್ಣನವರ ಸಂಗ್ರಹ)

ಕೃತಿಗಳು

- ಅಮ್ಮವ್ವೆಯ ಕಥೆ (ಯಕ್ಷಗಾನ)
- ಕುಮಾರ ವಿಜಯ (ವಾ. ಷ.)

- ಗಣನಾಮ ರತ್ನಾವಳಿ ರಗಳೆ
- ಚತುಷ್ಟಿಗೀತೆ ಪಂಚವಿಂಶತಿ (ಹಾ)
- ಚೀಲಾಳನ ಪದ
- ನೀತಿರತ್ನಾಕರ (ಹಾ)
- ಪಾರಿಜಾತದ ಪದ (ಶ್ರೀಕೈಲಾಸಪತಿ......)
- ಪಾರ್ವತಿ ಪರಮೇಶ್ವರರ ಲಗ್ನದ ಶೋಭಾನದ ಪದಗಳು
- ಬಸವೇಶ್ವರ ಪರಿವರ್ಧಿನಿ (೨೫)
- ಬಸವೇಶ್ವರ ರಘಟಾ ಬಂಧ
- ಭೋಗಲಿಂಗ ಪಾರಿಜಾತ
- ಭೋಗಲಿಂಗ ಶತಕ (ಭಾ. ಷ.)
- ರಟ್ಟಶಾಸ್ತ್ರದ ಟೀಕೆ
- ವೀರಸಂಗಯ್ಯವ ಚೌಪದನ ಟೀಕೆ
- ಶಂಭುವಿನ ಕಂದ
- ಶಿವಗಣ ಸಂಗೀತ
- ಶಿವಪ್ರಾರ್ಥನ ಶಾರದ
- ಶ್ರೀ ಗುರುಬಸವ ಪವಾಡ ಚರಿತೆ
- ಸಮುದ್ರಮಥನ ಲೀಲಾ
- ಸ್ವರವಚನಗಳು (ಸ್ತೋತ್ರಗಳು ಸಹಿತ)

ಪ್ರಸ್ತುತ ಸಂಪುಟದಲ್ಲಿ ಈತನ ೨ ಸ್ವರವಚನಗಳಿದ್ದು ಕ್ರಮಾಂಕ ೧೧೧, ೧೫೧ ರಲ್ಲಿವೆ.

**ಕೊಡಲೂರು ಬಸವಲಿಂಗ (೧೭೭೦)**

ಕೊಡಲೂರು ಬಸವಲಿಂಗರು ಹುಟ್ಟಿದ ಊರು ಬಳೆಚಕ್ರ ಯಾದಗಿರಿ ತಾಲ್ಲೂಕು, ಕಲಬುರ್ಗಿ ಜಿಲ್ಲೆಯಲ್ಲಿದೆ. ತಂದೆ ತಾಯಿಗಳು ಮಹಾದೇವಪ್ಪ ಗಂಗಾಂಬೆ. ತಮ್ಮ ಊರಿನ ಬಳಿಯಲ್ಲಿನ ಸಿದ್ದೇಶ್ವರ ಬೆಟ್ಟದಲ್ಲಿದ್ದ ಸಾಧುಗಳೊಬ್ಬರ ಅನುಗ್ರಹ ಕಾರಣವಾಗಿ ಇವರಲ್ಲಿ ಅಧ್ಯಾತ್ಮ ಸಾಧನೆ ಮುಂದುವರಿದಂತೆ ತಿಳಿಯುತ್ತದೆ. ಕಾಯಿಪಲ್ಲೆ ವ್ಯಾಪಾರ ಇವರ ವೃತ್ತಿ. ಗೂಗಲ್ಲ ಪರಪ್ಪಯ್ಯ ಇವರ ಸಮಕಾಲೀನನೆಂದು ಜನ ಪ್ರತೀತಿಯಿಂದ. ಇವರ ಗದ್ದುಗೆಗಳು ಖಾನಾಪುರ ಹಾಗೂ ಕೊಡಲೂರುಗಳಲ್ಲಿವೆ. ಶ್ರೀ ಶಾಂತರಸರು ಇವರ ಕಾಲ 'ಸುಮಾರು ೧೮ನೆಯ ಶತಮಾನದ ಕೊನೆಯಭಾಗವೆಂದು' ಅಭಿಪ್ರಾಯ ಪಟ್ಟಿದ್ದಾರೆ. ಕೊಡಲೂರೇಶ ಅಂಕಿತದಲ್ಲಿ ಸ್ವರವಚನಗಳಿದ್ದು ಸುಮಾರು 140 ಲಭ್ಯವಿದೆ. ಆದರೆ ಪ್ರಕಟವಾಗಿರುವ ಸ್ವರ ವಚನಗಳು 124.

ಇವರ ಅಪ್ರಕಟಿತ ಸ್ವರವಚನವೊಂದು ಪ್ರಕೃತ ಸಂಕಲನದಲ್ಲಿದ್ದು ಕ್ರಮಾಂಕ ೯೨ ರಲ್ಲಿದೆ.

**ಬಕ್ಕಪ್ಪಯ್ಯ (೧೮೦೦)**

ಐನೂಲಿ (ಕಲಬುರಗಿ ಜಿಲ್ಲೆ) ಕರಿಬಸವರ್ಯಾನ (೧೭೪೫–೧೮೪೦) ಕಕ್ಕನ ಮಗ. ಗುರುಲಿಂಗಾರ್ಯನ

ಶಿಷ್ಯ ಪತ್ನಿ ಗಿರಿಜಮ್ಮ. ಈತನ ಲಿಂಗೈಕ್ಯವನ್ನು ಕರಿಬಸವಾರ್ಯ ತನ್ನ ಸ್ವರವಚನವೊಂದರಲ್ಲಿ ಉಲ್ಲೇಖಿಸಿದ್ದಾನೆ. 'ಏನುಲಿ/ಏನೆಲೆ ಗುರುಲಿಂಗ' ಇವನ ಅಂಕಿತ.

ಈತನ ಹಾಡುಗಳ ಕಾಗದದ ಪ್ರತಿಯೊಂದು 'ಶಕ ೧೭೫೩ ವಿಕೃತಿ ಸಂವತ್ಸರ ಶ್ರಾವಣ ಭೌಳಿ ಪಾಡ್ಯಮಿ ೧ ಗುರುವಾರ'ದಲ್ಲಿ ಲಿಖಿತವಾಗಿದೆ.

ಈತ ಸ್ವರವಚನಗೊಳೊಡನೆ 'ಜಲಕ್ರೀಡೆ ಹಾಡು' (ಬಿ. ೩೬೧/೨. ಗದಗದ ತೋಂಟದಾರ್ಯ ಮಠ) ಹಾಗೂ 'ರಾಜೇಶ್ವರ ಪುರಾಣ' (ಭಾ. ಷ.) (ಧಾರವಾಡದ ವಚನ ವಾಙ್ಮಯ ಭಾಂಡಾರದಲ್ಲಿದೆ) ಗಳನ್ನು ರಚಿಸಿದ್ದಾನೆ.

ಪ್ರಸ್ತುತ ಸಂಪುಟದಲ್ಲಿ ಈತನ ೨ ಸ್ವರವಚನಗಳಿದ್ದು ಅವು ಕ್ರಮಾಂಕ ೧೬–೭ ರಲ್ಲಿವೆ.

**ಹೊನ್ನಾಳಿ ಸಿದ್ಧಲಿಂಗಪ್ಪ (೧೮೦೦)**

ತೋಂಟದ ಸಿದ್ದಲಿಂಗರ ಸ್ತುತಿ ರೂಪವಾದ ಸ್ವರವಚನದ ಕರ್ತೃ. ಈತನ ಬಗೆಗೆ ಮತ್ತಾವ ವಿಷಯಗಳು ತಿಳಿದುಬಂದಿಲ್ಲ.

ಕ್ರಮಾಂಕ ೧೬೮ರಲ್ಲಿ ಈತನ ಸ್ವರವಚನವಿದೆ.

**ಘನಮಠದಾರ್ಯ (ನಾಗಭೂಷಣ ಶಿವಯೋಗಿ) ೧೮೨೯–೪೮**

ಆಂಧ್ರಪ್ರದೇಶದ ಪೂಟ್ಲೂರು ತಾಲೂಕಿನ (ಅತ್ರಾಫಬ ಜಿಲ್ಲೆ) ದೋರವಾಡದಲ್ಲಿ ಕ್ರಿ. ಶ. ೧೮೨೯ ಅಕ್ಟೋಬರದಲ್ಲಿ (ವಿರೋಧಿ ನಾಮ ಸಂ. ಆಶ್ವೀಜ ಮಾಸ ಶುದ್ಧ ಪಂಚಮಿ ಮಂಗಳವಾರ ದಿನ) ಜನಿಸಿದರು. ತಂದೆ ತಾಯಿ ಅಲ್ಲಿನ ಹಿರಿಯಮಠದ ವೀರಯ್ಯ ವೀರಮ್ಮ. ತೆಲುಗುವಿನಲ್ಲಿ ಇವರ ಬಾಲ್ಯದ ಅಭ್ಯಾಸ ನಡೆಯಿತು. ಇವರಿಗೆ ಕನ್ನಡವನ್ನು ಸಿಂದಗಿ ತಾಲೂಕ ಎಲಗೋಡ ಗ್ರಾಮದ ಹಿರಿಯಮಠದ ರೇವಣಸಿದ್ಧಯ್ಯನವರು ಕಲಿಸಿದರು. ಅಲ್ಲದೆ ಒಕ್ಕಲುತನ ಬಗೆಗೆ ಆಸಕ್ತಿ ಮೂಡಿಸಿದರು. ಇವರಿಗೆ ಬಸವಣ್ಣನವರ ಬಗೆಗೆ ಅಪಾರ ಭಕ್ತಿ. ಇವರ ಸಮಾಧಿ ಸಂತೆಕೆಲೂರಿನ ಶ್ರೀ ತೋಂಟದಾರ್ಯ ಮಠದಲ್ಲಿದೆ.

'ಘನಮಠೇಶ' ಅಂಕಿತದಲ್ಲಿ ಇವರು ಸ್ವರವಚನಗಳನ್ನು ರಚಿಸಿದ್ದಾರೆ. ಇವರ ೧೪೮ ಪದ್ಯಗಳನ್ನು ಪ್ರೊ. ಸಂ. ಶಿ. ಭೂಸನೂರಮಠರು 'ಭಕ್ತಿಸುಧಾಸಾರ' ಹೆಸರಿನಲ್ಲಿ ಪ್ರಕಟಿಸಿದ್ದಾರೆ (೧೯೪೬, ೧೯೭೬) ಇವರ ಮತ್ತೊಂದು ಕೃತಿ 'ಕೃಷಿಜ್ಞಾನ ಪ್ರದೀಪಿಕೆ ಗದ್ಯದಲ್ಲಿದೆ. ಇದನ್ನು ಕುನ್ನಾಳ ಸಿದ್ಧರಾಮಪ್ಪನವರಿಗೆ ಬೋಧಿಸಿ ಅವರಿಂದ ಕೃತಿಯನ್ನು ಬರೆಸಿದರು. ಕುನ್ನಾಳರೇ ಇದರ ಮೂರು ಪ್ರತಿಗಳನ್ನು ತಯಾರಿಸಿದ ಸಂಗತಿಯನ್ನು ಡಾ। ಎಸ್. ಎಸ್. ಕಟಗಿಹಳ್ಳಿಮಠರು ಉಲ್ಲೇಖಿಸಿದ್ದಾರೆ. (ಘನಮಠದಾರ್ಯರು, ಗದಗ, ೧೯೮೬, ೨೮–೩೧) ಸಿದ್ಧರಾಮಪ್ಪ ಕುನ್ನಾಳರು ಶ. ೧೮೦೧ರಲ್ಲಿ ಲಿಖಿಸಿದ ಪ್ರತಿಯ ಬಗೆಗೆ ಶ್ರೀ ಫ. ಗು. ಹಳಕಟ್ಟಿಯವರು ಉಲ್ಲೇಖಿಸಿದ್ದಾರೆ (೧೯೩೬).

ಇವರು ಈ ಕೆಳಕಂಡ ಕೃತಿಗಳನ್ನು ಸಹ ರಚಿಸಿದ್ದಾರೆ.

– ಶ್ರೀ ರೇಣುಕ ಸ್ತುತಿ [ವೀರಶೈವ, 2, 2, 1937, 9–12]

– ವಿಭೂತಿ (ಸಾಂ) (ಸದ್ಧರ್ಮ ದೀಪಿಕೆ, ೧೦೫–೦೬)

– ಸುಜ್ಞಾನಸಾರವು (ಗ) (ಶಿ. ಭ. ೧೦–೪, ೧೯೩೫, ೩೪೩–೬೨)

ಇವರನ್ನು ಜಾಲೀಹಾಳು ವೀರಭದ್ರ ಕವಿ (೧೯. ಶ) 'ಅರವತ್ತು ಮೂವರು ಪುರಾತನರ ಪುರಾಣ'ದಲ್ಲಿ ಉಲ್ಲೇಖಿಸಿದ್ದಾರೆ.

ಪ್ರಸ್ತುತ ಸಂಕಲನದಲ್ಲಿ ಇವರ ೨ ಹೊಸ ಸ್ವರವಚನಗಳಿದ್ದು ಕ್ರಮಾಂಕ ೧೪೩–೪೪ರಲ್ಲಿವೆ.

**(೧೮೭೫–೭೬ ?)**

'ಕಂಪಲಿಪುರಿ ರಾಮಲಿಂಗ ' ಅಂಕಿತದಲ್ಲಿ ಸ್ವರವಚನ ರಚಿಸಿರುವ ಈ ಅಜ್ಞಾತ ಕರ್ತೃ ಬಳ್ಳಾರಿಯ ಸಕ್ಕರಿ ಕರಡೆಪ್ಪ (೧೮೧೫–೧೮೭೫) ನವರ ಸಮಕಾಲೀನ. ಈತನ ಸ್ವರವಚನ ಸಕ್ಕರಿಯವರ ವ್ಯಕ್ತಿತ್ವದ ಬಗೆಗಿನ ಸಮಕಾಲೀನ ದಾಖಲೆಯಾಗಿದೆ. ಸಕ್ಕರಿಯವರು ಸಮಕಾಲೀನ ಪರಿಸ್ಥಿತಿಗೆ ಸ್ಪಂದಿಸಿದ ರೀತಿ–ನೀತಿಗಳ ನಿರೂಪಣೆ ಈ ಸ್ವರವಚನದಲ್ಲಿದೆ.

ಪ್ರಸ್ತುತ ಸಂಪುಟದಲ್ಲಿನ ಕ್ರಮಾಂಕ ೪೪ರಲ್ಲಿ ಈ ಸ್ವರವಚನವಿದೆ.

**ಕುಂಬಾರ ರಾಮ (?)**

ಪ್ರಸ್ತುತ ಸಂಪುಟದ ಕ್ರಮಾಂಕ ೯೧ ರಲ್ಲಿ ಪ್ರಕಟವಾಗಿರುವ ಸ್ವರವಚನದಲ್ಲಿ ಸೊಪ್ಪಿ ಬಸವಯ್ಯನನ್ನು (೧೪೦೦) ನೆನೆದಿದ್ದಾನೆ. ಈತನ ಕಾಲದ ಬಗೆಗೆ ಯಾವ ಅಂಶಗಳೂ ತಿಳಿದಿಲ್ಲ. ಸದ್ಯದಲ್ಲಿ ಈತನ ಏಕೈಕ ಸ್ವರವಚನ ಮಾತ್ರ ಲಭ್ಯವಿದೆ.

ಕುಂಬಾರ ರಾಮನ ಇತರ ಕೃತಿಗಳು.

– ಕನ್ನೆ ಲಕುಮಾಯಿಯ ಚರಿತೆ (ಚೌಪದಿ)

– ಚೆನ್ನಕ್ಕನ ಕಥೆ

– ಬೆಜವಾಡಿಯ ಚರಿತೆ (ಚೌಪದಿ)

**ಮಕ್ಕಳಸ್ವಾಮಿ (?)**

ಮುರಿಗೆ ಶಾಂತವೀರಸ್ವಾಮಿಗಳ ಸ್ತುತಿ ಈತನ ಸ್ವರ ವಚನದ ವಸ್ತು.

ಈತನ ಸ್ವರವಚನ ಪ್ರಸ್ತುತ ಸಂಕಲನದ ಕ್ರಮಾಂಕ ೨೧೯ ರಲ್ಲಿದೆ.

**ಶಬ್ದಮಣಿಸ್ವಾಮಿ**

'ಗುರುಬಸವೇಶ್ವರ' ಅಂಕಿತದಲ್ಲಿನ ಈ ಸ್ವರ ವಚನಕಾರನ ಕಾಲ ದೇಶಾದಿಗಳ ಬಗೆಗೆ ಏನೂ ತಿಳಿದಿಲ್ಲ.

ಪ್ರಸ್ತುತ ಸಂಪುಟದ ಕ್ರಮಾಂಕ ೧೨೨ರಲ್ಲಿ ಈತನ ಸ್ವರವಚನವಿದೆ.

ಇದೇ ಸ್ವರವಚನ 'ಸ್ವರವಚನ ಸಂಪುಟ – ೧' ರ ಕ್ರಮಾಂಕ ೯೩ರಲ್ಲಿ ಈಗಾಗಲೇ ಪ್ರಕಟವಾಗಿದ್ದು ಇಲ್ಲಿ ಪ್ರಮಾದವಶಾತ್ ಮರುಮುದ್ರಣವಾಗಿದೆ.

**ಮಠಾಧೀಶರು ಇತ್ಯಾದಿ**

**ಅಮರಕುಂಡ ಮಲ್ಲಿನಾಥಯ್ಯ (೧)**

ಪುರದ ನಾಗಣ್ಣ (೧೧೬೦) ನೆಂಬ ವಚನಕಾರ ‘ಅಮರಗುಂಡದ ಮಲ್ಲಿಕಾರ್ಜುನ’ ಅಂಕಿತದಲ್ಲಿ ವಚನಗಳನ್ನು ರಚಿಸಿದ್ದಾನೆ. ಈ ಸ್ವರವಚನಕಾರನ ಅಂಕಿತವೂ ಅದೇ ಆಗಿದೆ. ಆದರೆ ಪ್ರಸ್ತುತದಲ್ಲಿ ವಚನ/ಸ್ವರವಚನಕಾರರು ಅಭಿನ್ನರೊ ಅಥವ ಭಿನ್ನರೋ ಎಂಬುದನ್ನು ನಿರ್ಧರಿಸಲು ಸಾಧ್ಯವಿಲ್ಲ.

**ಅವುದುಂಬಪುರನಿಲಯ...... ನಂಜುಂಡೇಶ (೩)**

ಇಲ್ಲಿನ ಅವುದುಂಬಪುರ ಬೆಂಗಳೂರು ಸಿಟಿ ಜಿಲ್ಲೆಯ ಆನೇಕಲ್ಲು ತಾಲೂಕಿನ ಅತ್ತಿಬೆಲೆ. ಈ ಸ್ವರವಚನ ಹತ್ತೊಂಬತ್ತು ಇಪ್ಪತ್ತನೆಯ ಶತಮಾನಗಳ ಮಧ್ಯಂತರದಲ್ಲಿ ರಚಿತವಾಗಿರಬಹುದು.

**ಇಟ್ಟಿಗಿವಾಸ ಪುರದ ಸಂಗಮೇಶ (೫)**

ಈ ಸ್ವರವಚನದಲ್ಲಿನ ಮುರಿಗೇಂದ್ರ ಚಿತ್ರದುರ್ಗದ ಬೃಹನ್ಮಠದ ಶೂನ್ಯಪರಂಪರೆಗೆ ಸಂಬಂಧಿಸಿಲ್ಲ.

**ಇಮ್ಮಡಿ ಪ್ರಭು ಕರಿಯ......ಸಿದ್ದೇಶ್ವರ (೬)**

ಭಿಕ್ಷಕ್ಕೆ ಬಂದ ಯತಿರಾಯ ಕರಿಯ ಸಿದ್ಧೇಶ್ವರನ ವರ್ಣನೆ ಕಣ್ಣಿಗೆ ಕಟ್ಟುವಂತಿದೆ. ಈತ ಇಮ್ಮಡಿ ಪ್ರಭುದೇವನಂತಿದ್ದನಂತೆ.

**ಎಡೆಯೂರು ಸಿದ್ದಲಿಂಗ**

(೯, ೧೧, ೧೨, ೧೩, ೧೪, ೧೫, ೧೩೯, ೧೪೦, ೧೬೪, ೧೬೫, ೧೬೬, ೧೭೩, ೧೮೭, ೨೩೪–೩೫, ೨೫೯, ೨೮೨, ೨೮೩)

ಹದಿನಾರನೆಯ ಶತಮಾನದ ಉತ್ತರಾರ್ಧದಲ್ಲಿ ಎಡೆಯೂರಿನಲ್ಲಿ (ಕುಣಿಗಲ್ ತಾಲೂಕ್) ಲಿಂಗೈಕ್ಯರಾದ ತೋಂಟದ ಸಿದ್ಧಲಿಂಗ ಸ್ವಾಮಿಗಳ ಸ್ತುತಿ ಪ್ರಸ್ತುತ ಸ್ವರವಚನಗಳ ವಸ್ತು.

‘೯’ನೆಯ ಸ್ವರವಚನದಲ್ಲಿ ಇತರ ಶಿವಶರಣ ಶರಣೆಯರೊಡನೆ ಈತನ ಹೆಸರನ್ನು ನಮೂದಿಸಿದೆ. ೧೩ರಲ್ಲಿ ಎಡೆಯೂರನ್ನು ಕಾಶಿಗೆ ನೂರ್ಮಡಿ ಘನವಾದುದೆಂದು ಹೇಳಲಾಗಿದೆ.

‘೧೫’ರಲ್ಲಿ ಸಿದ್ದಲಿಂಗನನ್ನು ಗೋಸಲ ಬಗೆ ಚೆನ್ನ ಬಸವ ಸದ್ಗುರು ಕರಜಾತನೆನ್ನುವಲ್ಲಿ ಆತನ ದೀಕ್ಷಾಗುರುವನ್ನು ಹೆಸರಿಸಲಾಗಿದೆ.

‘೧೪೦’ರಲ್ಲಿನ ‘ಗುಹಜಾತನೆ’ ಎಂಬ ಅಂಶದ ವಿವರ ಅಸ್ಪಷ್ಟವಾಗಿದೆ.

‘೨೩೪–೩೫’ರಲ್ಲಿನ ವಾಮಪುರ ಎಡೆಯೂರಿನ ಸಂಸ್ಕೃತದ ಅನುವಾದ.

‘೨೮೨’ರಲ್ಲಿ ಸಿದ್ದಲಿಂಗರ ಕೆಲವು ಪವಾಡಗಳ ಉಲ್ಲೇಖವಿದೆ.

**ಇಷ್ಟಲಿಂಗೇಶ (೯)**

ಇಲ್ಲಿನ ಮೊದಲ ನುಡಿಯಲ್ಲಿನ ಕೊಟ್ಟೂರ ಬಸವ, ಕೋಲಶಾಂತೇಶರು ಸಮಕಾಲೀನರಾಗಿದ್ದು, ‘ಪಂಚಗಣಾಧೀಶ್ವರ’ರಲ್ಲಿ ಮೊದಲ ಇಬ್ಬರು. ಇವರ ಕಾಲ ಕ್ರಿ. ಶ. ೧೬ನೆಯ ಶತಮಾನದ ಪೂರ್ವಾರ್ಧ.

**ಕೊಟ್ಟೂರ ಬಸವ (೯೬–೯೯)**

ಈತ ಐತಿಹಾಸಿಕ ವ್ಯಕ್ತಿ. ಬಳ್ಳಾರಿ ಜಿಲ್ಲೆ ಕೊಟ್ಟೂರಿನಲ್ಲಿ ಈತನ ಗದ್ದುಗೆಯಿದೆ. ಈತನನ್ನು ಎಮ್ಮೆ ಬಸವ (೧೫೪೩) 'ಕಾಲಾಜ್ಞಾನ'ದಲ್ಲಿ ಉಲ್ಲೇಖಿಸಿದ್ದಾನೆ. ಮೊಗಲ ಬಾದಷಹ ಅಕ್ಬರ್ ಈತನ ಕಿರಿಯ ಸಮಕಾಲೀನ. ಕ್ರಿ. ಶ. ೧೬೭೯ರಲ್ಲಿ ಬಸವಲಿಂಗ ಕವಿ ಈತನ ಜೀವನ ಚಿತ್ರಣವನ್ನೇ ವಸ್ತುವಾಗುಳ್ಳ 'ಕೊಟ್ಟೂರು ಬಸವೇಶ್ವರ ಪುರಾಣ'ವನ್ನು ರಚಿಸಿದ್ದಾನೆ. ಈತನಿಗೆ ಸಂಬಂಧಿಸಿಂದತೆ ತಾರಾವಳಿ, ವೃತ್ತ, ಕಂದ, ದಂಡಕ ಮೊದಲಾದ ವಿವಿಧ ಪ್ರಕಾರಗಳಲ್ಲಿ ಕೃತಿಗಳು ರಚಿತವಾಗಿವೆ.

**ಗುಬ್ಬಿ ಚೆನ್ನಬಸವೇಶ (೧೦೮, ೧೮೬)**

ಎಡೆಯೂರು ಸಿದ್ದಲಿಂಗರ ದೀಕ್ಷಾ ಗುರುಗಳು. ಕಾಲ ಹದಿನಾರನೆಯ ಶತಮಾನದ ಪೂರ್ವಾರ್ಧ. ಇವರ ಸ್ತುತಿ ಈ ಎರಡು ಸ್ವರವಚನಗಳ ವಸ್ತು.

**ಗುರು ಕುಮಾರಸ್ವಾಮಿ (೧೦೯)**

ಶಂಭುಲಿಂಗಾಂಕಿತದ ನಿಜಗುಣ ಶಿವಯೋಗಿಗಳ (೧೫೫೦) 6 ಕೃತಿಗಳನ್ನು ಹೆಸರಿಸಿದ್ದಾನೆ. ಹೀಗೆ ಹತ್ತೊಂಬತ್ತನಯ ಶತಮಾನದಲ್ಲಿದ್ದ ಸೋಮೇಕಟ್ಟೆ (ನೊಣವಿನಕೆರೆ) ಕರಿವೃಷಭಸ್ವಾಮಿಗಳು ಸಹ ತಮ್ಮ ಸ್ವರವಚನವೊಂದರಲ್ಲಿ ನಿಜಗುಣರ ಕೃತಿಗಳನ್ನು ಹೆಸರಿಸಿದ್ದಾರೆಂಬ ಅಂಶ ಗಮನಾರ್ಹ.

**ಚಿತ್ತಾರಕಲ್ಲ/ಚಿನ್ಮೂಲಗಿರಿ ಸಿದ್ದೇಶ (೧೪೫–೧೪೭)**

ಇಲ್ಲಿನ ಚಿತ್ತಾರಕಲ್ಲ/ಚಿನ್ಮೂಲಗಿರಿ ಇಂದಿನ ಚಿತ್ರದುರ್ಗ. ಬೆಟ್ಟದ ಮೇಲೆ ಚಂಪಕ ಸಿದ್ದೇಶ್ವರನ ದೇಗುಲವಿದೆ. ಈ ಸಿದ್ದೇಶನ ಹೆಸರಿಗೆ ಸಂಬಂಧಿಸಿದಂತೆ ದಂಡಕ ಮತ್ತು ಶತಕಗಳಿದ್ದು ಅವುಗಳ ಓಲೆ ಪ್ರತಿಗಳು ಬೃಹನ್ಮಠ (ಸಿರಿಗೆರೆ)ದಲ್ಲಿವೆ.

**ಟೀಕಿನ ಚೆನ್ನವೀರಣಾರ್ಯ (೧೫೮)**

ಶಾ. ಶ. ೧೬೮೦ರಲ್ಲಿ ತ್ರಿಭುವನಾತನ 'ಗುರು ರಗಳೆ' ಪ್ರತಿಯಾಗಿದ್ದು, ಅದರ ಅಂತ್ಯದಲ್ಲಿ ಟೀಕಿನ ಚೆನ್ನವೀರಸ್ವಾಮಿಗಳು, ಅದನ್ನು ಬರೆಸಿದರೆಂದು ತಿಳಿಸಿದೆ. (ಚೆನ್ನುಡಿ, ೨–೩೩, ೩–೧೧–೯೮೬, ಪುಟ ೪) ಇಲ್ಲಿನ ಚೆನ್ನವೀರಸ್ವಾಮಿಗಳು ಹಾಗೂ ಪ್ರಸ್ತುತ ಸ್ವರವಚನದ ಚೆನ್ನವೀರಸ್ವಾಮಿಗಳು ಅಭಿನ್ನರಾದರೆ ಈ ಸ್ವರವಚನದ ರಚನಾಕಾಲ ಕ್ರಿ. ಶ. ೧೭೫೮ರ ಹಿಂದುಮುಂದಾಗುವ ಸಂಭವವಿದೆ.

**ತುರುಬೇಗಿರಿಯ ಗುರು ಶಿವಲಿಂಗ (೧೬೨)**

ಅಜ್ಞಾತ. ಇದಲ್ಲದೆ 'ತುರುವೇಗುಡ್ಡದ ಶಿವಲಿಂಗ' ಅಂಕಿತದಲ್ಲಿ ೨೫ ನುಡಿಗಳ 'ಚೆನ್ನಬಸವ ಜೋಗುಳ ಪದ'ವನ್ನು ರಚಿಸಿದ್ದಾನೆ. (ಕೆ. ಬಿ. ೩೫೧/೨) ಕ. ಅ. ಸಂ. (ಮೈ)

**ದುರದುಂಡೀಶ (೧೭೭)**

ಅರಭಾವಿ ಮಠಾಧೀಶ. ಕಿತ್ತೂರ ಮಲ್ಲೇಂದ್ರನ ಸಮಕಾಲೀನ. 'ಮೈಸೂರು ಹುಲಿ' ಎನಿಸಿದ ಟಿಪ್ಪುವಿನ ಬಂಧನದಿಂದ ಮಲ್ಲೇಂದ್ರನನ್ನು ಮುಕ್ತಗೊಳಿಸಿದ.

---

* ದುಂಡುಕಂಸಗಳಲ್ಲಿನ ಸಂಖ್ಯೆಗಳು ಪ್ರಸ್ತುತ ಸಂಪುಟದಲ್ಲಿನ ಸ್ವರವಚನಗಳ ಕ್ರಮಾಂಕಗಳಿಗೆ ಸಂಬಂಧಿಸಿದೆ.

ಬಸವಕವಿ (೧೮೬೦) ಈತನನ್ನು ಕುರಿತು 'ದುರದುಂಡಿ ಜಂಗಮಲೀಲೆ' ಎಂಬ ಪುರಾಣವನ್ನು ವಾರ್ಧಕ ಷಟ್ಪದಿಯಲ್ಲಿ ರಚಿಸಿದ್ದು ಪ್ರಕಟವಾಗಿದೆ.

**ನಿಜಗುರು ಶಾಂತಮಲ್ಲೇಶ (೧೮೧)**

ಈ ಅಂಕಿತದ ೪ ಸ್ವರವಚನಗಳನ್ನು ಕಂಬಾಳ ಶಾಂತಮಲ್ಲೇಶ (೧೬೦೦) 'ಗಣವಚನ ರತ್ನಾವಳಿ'ಯಲ್ಲಿ ಉದಾಹರಿಸಿದ್ದಾನೆ. ಹೀಗಾಗಿ ಈ ಅಜ್ಞಾತ ಸ್ವರವಚನಕಾರ ಕ್ರಿ. ಶ. ೧೬೦೦ಕ್ಕಿಂತ ಹಿಂದಿನವನು.

**ನಿರ್ವಾಣಿ ಅಲ್ಲಮಪ್ರಭು (೧೯೧)**

ಈತ ನೂರೊಂದು ವಿರಕ್ತರಲ್ಲೊಬ್ಬನಾಗಿರಬಹುದೆನಿಸುತ್ತದೆ.

**ಪಾರ್ವತಿಪತಿ (೧೯೫)**

ಈ ಸ್ವರವಚನದಲ್ಲಿ ಐತಿಹಾಸಿಕ ವ್ಯಕ್ತಿಗಳಾದ ಲಿಂಗಮ್ಮಾಜಿ, ತನುಜ ಕೆಂಚಬಹುದೂರನನ್ನು ಹೆಸರಿಸಿದೆ. ಇವನ ಕಾಲ ತಿಳಿದುಬಂದಲ್ಲಿ ಈ ಸ್ವರವಚನದ ರಚನಾಕಾಲವನ್ನು ನಿರ್ಧರಿಸಬಹುದಾಗಿದೆ.

**ಬನವಸೆ ಮಧುಲಿಂಗ (೧೯೭)**

ಅಪೂರ್ಣ ಸ್ವರವಚನ ಲಭ್ಯ. ಇಲ್ಲಿನ ಬನವಾಸಿ ಉತ್ತರ ಕನ್ನಡ ಜಿಲ್ಲೆಯಲ್ಲಿದೆ. ಅಲ್ಲಮಪ್ರಭುಗಳ ಆರಾಧ್ಯದೈವ ಮಧುಕೇಶ್ವರ. ದಾಸೋಹದ ಸಂಗಣ್ಣ (೧೧೬೦)ನೆಂಬ ವಚನಕಾರರ ಅಂಕಿತವಾದ 'ಶಂಭುವಿಗಿಂದಿತ್ತ ಸ್ವಯಂಭುವಿಗಿಂದತ್ತ ಅತಿಬಳ ನೋಡ ಮಾತುಳಂಗ ಮಧುಕೇಶ್ವರನು' ಎಂಬಲ್ಲಿನ ಮಧುಕೇಶ್ವರ ಬನವಸೆಯು ಮಧುಲಿಂಗನಿರಬಹುದು.

**ಬಸವರಾಜ (೧೯೮, ೧೯೯, ೨೬೪, ೨೮೪)**

ಮಂಗಳವಾಡ/ಕಲ್ಯಾಣಗಳ ಕಲಚೂರಿ ಬಿಜ್ಜಳನ (೧೧೬೦) ದಣ್ಣಾಯಕ. ಈತನ ಸ್ತುತಿ ಸ್ವರವಚನಗಳ ವಸ್ತು.

**ಬಸವಣ್ಣನವರ ಕೃತಿಗಳು**

- ಕಾಲಜ್ಞಾನ ವಚನ
- ವಚನಗಳು (ಕೂಡಲ ಸಂಗಮದೇವ ಅಂಕಿತದಲ್ಲಿ)
- ಸ್ವರವಚನಗಳು (ಕೂಡಲ ಸಂಗಮದೇವ ಅಂಕಿತದಲ್ಲಿ)

**ಬೆಂಗಳೂರು ದೊಡ್ಡಬಸವ (೨೦೬)**

'ಬಸವನಗುಡಿ' ಎಂದು ಹೆಸರು ಬರಲು ಮೂಲ ಕಾರಣವಾದ ಬಸವೇಶ್ವರನ ಅಂಕಿತದಲ್ಲಿನ ಈ ಸ್ವರವಚನದ ಕರ್ತೃ ಅಜ್ಞಾತ.

**ಮಂತ್ರರಾಜಪುರದ ಸಿದ್ದೇಶ (೨೧೩–೨೧೪)**

ಕೆಳದಿ ಬಸವಪ್ಪನಾಯಕ (೧೭೪೦–೫೫) ಮಂತ್ರರಾಜಪುರ (ಸಿದ್ಧಾಪುರದ ಪೇಟೆಯ ಸಮೀಪ)

ನಿರ್ಮಿಸಿದ ಸಂಗತಿ ಲಿಂಗಣ್ಣನ 'ಕೆಳದಿನೃಪ ವಿಜಯ'ದಲ್ಲಿದೆ. ([ಸಂ] ಆರ್. ಶಾಮಾಶಾಸ್ತ್ರಿ, ೧೯೨೧, ಪು. ೨೦೧) ಹೀಗಾಗಿ ಮಂತ್ರರಾಜಪುರದ ಹೆಸರಿನಲ್ಲಿರುವ ಈ ಸ್ವರ ವಚನಗಳು ೧೮ನೆಯ ಶತಮಾನದ ಉತ್ತರಾರ್ಧದಲ್ಲಿ ರಚಿತವಾಗಿರಬಹುದಾಗಿದೆ.

**ವೀರಭದ್ರ (೪, ೮೨, ೧೯೩, ೨೧೫–೧೬, ೨೨೯, ೨೯೨)**

ಪೌರಾಣಿಕ ಪ್ರಪಂಚಕ್ಕೆ ಸೇರಿದ ವೀರಭದ್ರ ಶಿವನ ಮಾನಸಪುತ್ರರಲ್ಲೊಬ್ಬ. ಈತನನ್ನು ಕುರಿತ ಸಾಹಿತ್ಯ ಹಾಗೂ ಶಿಲ್ಪಗಳ ಪ್ರಮಾಣ ಅಪಾರ.

ಇಟ್ಟಗಿ (೪), ಹೊಸಹಳ್ಳಿ (೮೨), ನೂತನಪುರಿ (೧೯೩), ಮುಚಖಂಡಿ (೨೧೫–೧೬), ರಾಚೋಟಿ (೨೨೯) ಹಾಗೂ ಊರನ್ನು ಹೆಸರಿಸದ (೨೯೨) ಊರುಗಳಲ್ಲಿರುವ ವೀರಭದ್ರ ವಿಗ್ರಹಗಳ ವರ್ಣನೆಗಳು ಪ್ರಸ್ತುತ ಸಂಪಟುದಲ್ಲಿ ಸಮಾವೇಶಗೊಂಡಿವೆ.

**ವರವಿಯ ಮೋನಣ್ಣ (೨೩೩)**

ತಿಂಥಣಿ ಮೋನಪ್ಪಯ್ಯನೆಂದು ಪ್ರಖ್ಯಾತನಾದ ಈತ ೧೬ನೆಯ ಶತಮಾನದ ಅಂತ್ಯ ಹಾಗೂ ೧೭ನೆಯ ಶತಮಾನದ ಆದಿಕಾಲದಲ್ಲಿದ್ದ ಐತಿಹಾಸಿಕ ವ್ಯಕ್ತಿ. ಈತ 'ಬಸವ' ಅಂಕಿತದಲ್ಲಿ ವಚನಗಳನ್ನು ಬರೆದಿದ್ದಾನೆ. ಈತನ ವ್ಯಕ್ತಿತ್ವ ಸಾಹಿತ್ಯ ರಚನೆಗಳ ಬಗೆಗೆ ಡಾ। ಎಂ. ಎಂ. ಪಡಶೆಟ್ಟಿಯವರು 'ತಿಂಥಿಣಿ ಮೋನಪ್ಪಯ್ಯ : ಒಂದು ಅಧ್ಯಯನ' ಎಂಬ ಮಹಾಪ್ರಬಂಧವನ್ನು ರಚಿಸಿದ್ದು ಪ್ರಕಟವಾಗಿದೆ. (1992)

ಇತನ ಹೆಸರನ್ನೇ ತನ್ನ ಸ್ವರವಚನಕ್ಕೆ ಅಂಕಿತವನ್ನಾಗಿ ಬಳಸಿಕೊಂಡ ಪ್ರಸ್ತುತ ಸ್ವರವಚನಕಾರನ ಕಾಲ ೧೭ನೆಯ ಶತಮಾನದ ಪೂರ್ವಾರ್ಧವೆಂದೆನಿಸುತ್ತದೆ.

**ವಿರಕ್ತ ಲೀಲಾಖ್ಯದ ಚೆನ್ನಬಸವೇಶ (೨೩೭–೩೮)**

ಬೆಟ್ಟದಪುರದ (ಮೈಸೂರು ಜಿಲ್ಲೆ) ಮಠದ ಮಠಾಧೀಶರಾದ ಚೆನ್ನಬಸವೇಶ್ವರು ಮುರಿಗಾ ಸಂಪ್ರದಾಯದ ಸ್ವಾಮಿಗಳು. ಇವರ ಸ್ತುತಿ ಸ್ವರವಚನಗಳ ವಸ್ತು.

ಸ್ವರವಚನ '೨೩೭'ರಲ್ಲಿ ಚೆನ್ನಬಸವಸ್ವಾಮಿಗಳ ಜೀವನಕ್ಕೆ ಸಂಬಂಧಿಸಿದ ಕೆಲವು ವಿವರಗಳಿವೆ. ಅಲ್ಲದೆ ಇಲ್ಲಿನ ನುಡಿ ೪ರಲ್ಲಿನ 'ಸಾಲು ಸಾವಿರಕಂಬಮಂಟಪ'ದ ಉಲ್ಲೇಖ ಮೂಡಬಿದರೆಯ ಸಾವಿರಕಂಬದ ಚಂದ್ರನಾಥ ಬಸದಿಗೆ ಸಂಬಂಧಿಸಿದೆ.

**ಹಂಪೆಯ ವಿರೂಪಾಕ್ಷ (೧೯೪, ೨೩೯–೪೧)**

ಈ ನಾಲ್ಕು ಸ್ವರವಚನಗಳಲ್ಲಿ ಹಂಪೆಯ ಪ್ರಭು ವಿರೂಪಾಕ್ಷನ ಸ್ತುತಿಯಿದೆ.

೨೪೨ ರಲ್ಲಿ ಆಂಧ್ರಪ್ರದೇಶದ ಶ್ರೀ ಶೈಲಕ್ಕೆ ಸಂಬಂಧಿಸಿದ ಕೆಲವು ವಿವರಗಳಿವೆ.

**ಪುಂಗನೂರ ಪ್ರಭುರಾಯ (೨೪೪)**

ಪುಂಗನೂರು ರಾಜಮನೆತನದವರ ಉಲ್ಲೇಖಗಳಿರುವ ಈ ಐತಿಹಾಸಿಕ ಸ್ವರವಚನದಲ್ಲಿ ಅಲ್ಲಿಯ ಹಿರಿಯಮಠದ ಪ್ರಭುರಾಯನ ಉಲ್ಲೇಖವಿದೆ.

**ಮದ್ದುಗುರು ಶಾಂತಲಿಂಗ (೨೪೭)**

ಕರ್ತೃ ತಿಳಿದಿಲ್ಲ. 'ಮದ್ದುಗುರು ಶಾಂತ' ಅಂಕಿತದಲ್ಲಿ 'ಬಸವರಾಜ ರಗಳೆ' ಮತ್ತು '೪೯ ಕಂದಗಳು' ದೊರೆಯುತ್ತದೆ. ಇವು ಸಹ ಈತನವೇ ಇರಬಹುದು.

**ಸಿದ್ದಲಿಂಗ (೨೬೩, ೨೬೫, ೨೬೭)**

ಈ ಸ್ವರವಚನಗಳಲ್ಲಿ ಕ್ರಮವಾಗಿ ಶ್ರೀಪುರ, ಶ್ವೇತನೀಲಗಿರಿ ಹಾಗೂ ಸಗರದ ಸಿದ್ದಲಿಂಗರ ಸ್ತುತಿಗಳಿವೆ.

**ಸಿದ್ದಲಿಂಗ (೨೭೭–೨೭೮)**

ನಮಗೆ ಈಗಾಗಲೇ ತಿಳಿದು ಬಂದಿರುವಂತೆ ಹಿರಣ್ಯಾರ್ಯ (೧೫೬೧) ಹಾಗೂ ಕೆಸ್ತೂರದೇವರ (೧೭೦೦) ಸ್ವರವಚನಗಳಲ್ಲಿ ಸಿದ್ದಲಿಂಗ ಅಂಕಿತ ಕಂಡುಬಂದಿದೆ. ಹೀಗಾಗಿ ಪ್ರಸ್ತುತ ಸ್ವರವಚನಗಳ ಕರ್ತೃ ಇವರಲ್ಲೊಬ್ಬರಾಗಿರಬಹುದು ಅಥವಾ ನಮಗೆ ತಿಳಿಯದ ಮತ್ತೊಬ್ಬನಾಗಿರಬಹುದು.

**ಚಿತ್ರದುರ್ಗದ ಮಠಾಧೀಶರು**

೧೩೫ನೆಯ ಸ್ವರವಚನದಲ್ಲಿ ಗುರುಪಾದಯೋಗೀಂದ್ರ, ರಾಚೋಟಿ ಯೋಗೀಂದ್ರ ಹಾಗೂ ಗುರು ಸಿದ್ಧಬಸವರಾಜೇಂದ್ರರ ಉಲ್ಲೇಖಗಳಿವೆ. ಈ ಹೆಸರುಗಳು ಚಿತ್ರದುರ್ಗದ ಶೂನ್ಯಪೀಠ ಪರಂಪರೆಯಲ್ಲಿ ದೊರೆಯುತ್ತವೆ. ಆದರೆ ಈ ಹೆಸರುಗಳ ನಿರೂಪಣಾಕ್ರಮ ಪೀಠಪರಂಪರೆಯ ಕಾಲಾನುಕ್ರಮಕ್ಕೆ ಅನುಗುಣವಾಗಿಲ್ಲ.

**ಮುರಿಗೆ ಶಾಂತವೀರ (?–೧೭೦೩)**

೧೫೭ನೆಯ ಸ್ವರವಚನ ಮುರಿಗೇಶ 'ಚಿನ್ಮೂಲಾದ್ರಿಯವಾಸ'ನೆಂದರೆ, ೨೨೫ನೆಯ ಸ್ವರವಚನ 'ಚಿನ್ಮೂಲಗಿರಿಯೊಳು ನೆಲಸಿದ ಗುರು ಮುರಿಗೇಶನಿಹ ಹರುಷದಲಿ' ಎಂದಿದೆ.

೨೨೪ನೆಯ ಸ್ವರವಚನದಲ್ಲಿ 'ವೀರ ಮಡಿವಳ ತಾನೆ ಪರವಿಲ್ಲ' ಎಂದಿರುವಲ್ಲಿ ಮುರಿಗೆ ಶಾಂತವೀರರು ವೀರ ಮಡಿವಾಳ ಮಾಚಿದೇವರ ಅಂಶೋದ್ಭವರೆಂಬ ನಂಬಿಕೆಯ ಎಳೆಯೊಂದರ ಸೂಚನೆ ವ್ಯಕ್ತವಾಗಿದೆ.

ಶಾಂತವೀರರನ್ನು ೨೧೭ರಲ್ಲಿ ಮುರಿಗಿಮೂರ್ತಿಯೆಂದೂ, ೨೧೯ರಲ್ಲಿ ಮುರಿಗೆಯದೇವನೆದೂ, ೨೨೦ರಲ್ಲಿ ಮುರಿಗೆಯ ಮಹಾತ್ಮನೆಂದೂ ಹೆಸರಿಸಿವೆ.

ಚಾಮರಸನ (೧೪೩೦) 'ಪ್ರಭುಲಿಂಗಲೀಲೆ'ಯಲ್ಲಿನ ಪ್ರಭುವಿನ ಮಾಯಾ ನಿರಾಕರಣ ಸನ್ನಿವೇಶ ೨೨೦ನೆಯ ಸ್ವರವಚನದಲ್ಲಿನ ಎರಡನೆಯ ನುಡಿಯಲ್ಲಿ ಸೂಚಿತವಾಗಿದೆ.

೨೨೧ನೆಯ ಸ್ವರವಚನ ಮುರಿಗೆ ಶಾಂತವೀರರು ಲಿಂಗೈಕ್ಯರಾದ ನಂತರ ರಚಿತವಾಗಿದ್ದು ಅದು ಅವರ ಚರಮಗೀತೆಯಂತಿದೆ.' ಈ ಸ್ವರವಚನದ ೫ನೆಯ ನುಡಿಯಲ್ಲಿನ 'ಬಸವಲಿಂಗರಾಜನಾಳ್ವ ರಮಣನ' ಎಂಬ ಉಲ್ಲೇಖ ಸೋದೆ ಬಸವಲಿಂಗರಾಜನಿಗೆ (೧೬೯೭–೧೭೪೫) ಸಂಬಂಧಿಸಿದೆ. ಈ ಸ್ವರವಚನ ಅವನಿಂದಲೇ ರಚಿತವಾಗಿರಬಹುದಾದ ಸಂಭಾವ್ಯತೆಯನ್ನು ಅಲ್ಲಗಳೆಯುವಂತಿಲ್ಲ.

### ಇಮ್ಮಡಿ ಗುರುಸಿದ್ಧ (?–೧೭೨೯)

೧೪೮ರಲ್ಲಿ ಸೋಮೇಕಟ್ಟೆ ಚೆನ್ನವೀರಸ್ವಾಮಿಗಳು (೧೭೪೦) ಇಮ್ಮಡಿ ಗುರುಸಿದ್ಧರನ್ನು 'ದ್ವಿತೀಯ ಶಾಂತವೀರನಾಮದೆ ಮೆರೆವನೆ ಗುರುಸಿದ್ಧಲಿಂಗ' ಎಂದು ಕೀರ್ತಿಸಿದ್ದಾರೆ.

'ಸ್ವರವಚನ ಸುಪುಟ – ೧'ರಲ್ಲಿ ಇಮ್ಮಡಿ ಗುರುಸಿದ್ಧರಿಗೆ ಸಂಬಂಧಿಸಿದಂತೆ ಕ್ರಮಾಂಕ ೯೦, ೧೯೨–೯೩ರಲ್ಲಿ ೩ ಸ್ವರವಚನಗಳಿವೆ. ೨೩೪ನೆಯ ರಚನೆಯು ಇವರದಿರಬಹುದು.

### ನೈಘಂಟಿನ ಸಿದ್ಧಬಸವ (೧೮೦೦–೨೦)

೧೩೬, ೨೮೧ರಲ್ಲಿ ನೈಘಂಟಿನ ಸಿದ್ಧಬಸವರ ಕೀರ್ತಿ ಪ್ರಸ್ತಾಪವಿದೆ. ೨೨೭ನೆಯ ಸ್ವರವಚನ ಇವರನ್ನು ಹೆಸರಿಸಿದೆ.

'ಸ್ವರವಚನ ಸಂಪುಟ – ೧'ರಲ್ಲಿನ ೨೫೮–೬೧ರಲ್ಲಿ ಸಿದ್ಧಬಸವಸ್ವಾಮಿಗಳ ಸ್ತುತಿಯಿದೆ.

### ಸಣ್ಣಬರಹದ ರಾಚೋಟಿಸ್ವಾಮಿಗಳು (೧೮೨೦–೩೦)

ಬೃಹನ್ಮಠದ ೧೮ನೆಯ ಪಟ್ಟದವರು.

೨೨೭ನೆಯ ಸ್ವರವಚನದಲ್ಲಿ ಚಿತ್ರದುರ್ಗದ ಶೂನ್ಯಪೀಠ ಪರಂಪರೆಯನ್ನು ತೋಂಟದ ಸಿದ್ಧಲಿಂಗರಿಂದ (೧೫೬೧) ರಾಚವಟ್ಟಸ್ವಾಮಿಗಳವರೆಗೆ ಕೀರ್ತಿಸಿದೆ. ಇವರನ್ನು ಕುರಿತ ಮಂಗಳಾರತಿ ರೂಪದ ಸ್ವರಚನವೊಂದು ಕ್ರಮಾಂಕ ೨೨೮ರಲ್ಲಿದೆ.

### ಮುರಿಗೇಶನನ್ನು ಕುರಿತ ಇತರ ಉಲ್ಲೇಖಗಳು

೧೫೭ರಲ್ಲಿ ಮುರಿಗೇಶ ಜೆಟ್ಟಗಿ ಬಸವಲಿಂಗೇಶರ ಅಭೇದರೂಪದ ಚಿತ್ರಣವಿದೆ.

೧೭೭ರಲ್ಲಿ ಅರಭಾವಿಮಠದ ದುರದುಂಡೀಶ (= ಶಿಲಿಂಗೇಶ)ರನ್ನು ಮುರಿಗಾ ಜಗದ್ಗುರುವೆಂದಿದೆ.

೨೩೭–೩೮ರಲ್ಲಿ ಬೆಟ್ಟದಪುರ (ಮೈಸೂರು ಜಿಲ್ಲೆ) ಮೂರುಬಣ್ಣದ ಮಠದ ಚೆನ್ನಬಸವ ಸ್ವಾಮಿಗಳನ್ನು ಲೀಲಾಖ್ಯದ ಮುರುಗಿ ಚೆನ್ನಬಸವೇಶ/ಲೀಲಾಖ್ಯದ ಮುರಿಗೇಂದ್ರರೆಂದು ಕರೆಯಲಾಗಿದೆ.

೨೧೮ರಲ್ಲಿ ಮದ್ದೂರಸ್ಥಲದ ಸಿದ್ಧರಾಮೇಶನನ್ನು ಮುರಿಗಿ ಶಾಂತರೊಡನೆ ಸಮೀಕರಿಸಿದೆ.

## ಐತಿಹಾಸಿಕ ವ್ಯಕ್ತಿಗಳ ಉಲ್ಲೇಖ

### ಕುಮ್ಮಟದುರ್ಗ

೧೫೫ರಲ್ಲಿ ಪರದಾರ ಸೋದರನೆಂಬ ಕೀರ್ತಿಗೆ ಭಾಜನನಾದ ಕಂಪಿಲನ ಮಗ ಕುಮಾರರಾಮನ ಜೀವನದಲ್ಲಿ ನಡೆದ ಒಂದೆರಡು ಐತಿಹಾಸಿಕ ಮೌಲ್ಯವನ್ನುಳ್ಳ ಘಟನೆಗಳ ನಿರೂಪಣೆಯಿದೆ. ಈತನನ್ನು ಕುರಿತಂತೆ ಕನ್ನಡದಲ್ಲಿ ನಂಜುಂಡ (೧೫೨೫), ಪಾಂಚಾಳಗಂಗ (೧೬೦೦) ಹಂಪೆಯ ಚರಪತಿ ಮಹಾಲಿಂಗಸ್ವಾಮಿ, (೧೭೦೦) ಹಾಗೂ ಅನುಷಂಗಿಕವಾಗಿ ಬಸವಣಯ್ಯ (೧೭೦೦ ?)ರು ಸಾಂಗತ್ಯದಲ್ಲಿ ಕೃತಿಗಳನ್ನು ರಚಿಸಿದ್ದಾರೆ.

ಪ್ರಸ್ತುತ ಸ್ವರವಚನದಲ್ಲಿ ಶಂಭುರಾಯನ ವಾಹನವನ್ನು ತಂದ ಹಾಗೂ ಗುತ್ತಿಯರಾಯನನ್ನು ಗೆದ್ದ ಘಟನೆಗಳನ್ನು ನಮೂದಿಸಿದೆ.

**ಪುಂಗನೂರು**

೨೪೪ರಲ್ಲಿ ಪುಂಗನೂರು ಸಂಸ್ಥಾನ (ಆಂಧ್ರಪ್ರದೇಶದ ಅನಂತಪುರ ಜಿಲ್ಲೆ)ದ ಅರಸು ಮುಮ್ಮಡಿರಾಜ ಹಾಗೂ ಆತನ ಸತಿಯರಾದ ಮುದ್ದಮ್ಮಾಜಿ, ಚನ್ನಮ್ಮಾಜಿ, ಚಿಕ್ಕಮುದ್ದಮ್ಮಾಜಿ, ಮಲ್ಲಮ್ಮರ ಉಲ್ಲೇಖವಿದೆ. ಇದೇ ಸ್ವರವಚನದ ಅಂತ್ಯ ನುಡಿಯಲ್ಲಿನ ಹಿರಿಯಮಠದ ಪ್ರಭುದೇವನ ಉಲ್ಲೇಖ ಧಾರ್ಮಿಕ ದೃಷ್ಟಿಯಿಂದ ಗಮನಾರ್ಹವಾದ ಐತಿಹಾಸಿಕ ದಾಖಲೆಯಾಗಿದೆ.

**ಕಿತ್ತೂರು**

೧೭೭ರಲ್ಲಿ ಅರಭಾವಿ ಮಠಾಧೀಶ ದುರದುಂಡಿ ಶಿವಲಿಂಗೇಶನ ಸಮಕಾಲೀನನಾಗಿದ್ದ ಮಲ್ಲೇಂದ್ರನ ಉಲ್ಲೇಖವಿದೆ. ಈತ ಮೈಸೂರು ನವಾಬ ಟೀಪುವಿನಿಂದ ಬಂಧಿತನಾಗಿದ್ದು ದುರದುಂಡೀಶರ ಅನುಗ್ರಹದಿಂದ ಬಂಧನಮುಕ್ತನಾದ ಸಂಗತಿಯ ವಿವರ ಬಸಕವಿ (೧೮೬೦)ಯ 'ದುರದುಂಡಿ ಜಂಗಮಲೀಲೆ' ಕಾವ್ಯದಲ್ಲಿದೆ.

**ವಿಜಯನಗರ**

೫೭–೫೮ರಲ್ಲಿ ನರಸ, ನರಸಿಂಗ ಎಂದಿರುವ ವ್ಯಕ್ತಿ ಸಾಳುವ ನರಸಿಂಹ (೧೪೮೭–೯೩).

**ಸ್ವಾದಿ/ಸೋದೆ**

೨೭೩ನೆಯ ಸ್ವರವಚನದ ಅಂತ್ಯದ ನುಡಿಯಲ್ಲಿನ ಸದಾಶಿವನಾಮ ಸ್ವಾದಿ ಸದಾಶಿವರಾಜ (೧೬೬೩–೯೬)ನನ್ನು ಸೂಚಿಸುತ್ತದೆ. ಅಲ್ಲದೆ ನುಡಿ ೩ರ ಮಧುರಾಪುರ ತಮಿಳುನಾಡಿನ ಮಧುರೆ. ಅಂತೆಯೆ ನುಡಿ ೨ರ ಸುಂದರಮೂರ್ತಿ ಮಧುರೆ ಸುಪ್ರಸಿದ್ಧ ದೇವತೆ ಸುಂದರೇಶ್ವರ. ಸ್ವಾದಿ ಸದಾಶಿವ ಮಧುರೆ ಸುಂದರೇಶ್ವರನ 64 ಲೀಲೆಗಳನ್ನು ಕುರಿತ 'ಹಾಲಾಸ್ಯ ಪುರಾಣ'ವನ್ನು ಭಾಮಿನೀ ಷಟ್ಪದಿಯಲ್ಲಿ ರಚಿಸಿದ್ದಾನೆ.

೨೨೧ರಲ್ಲಿನ ಬಸಲಿಂಗರಾಜ ಸೋದೆ ಸದಾಶಿವರಾಜನ ಪುತ್ರ. ಈತನ ಕಾಲ ಕ್ರಿ. ಶ. ೧೬೯೭–೧೭೪೫. ಈತ ಚಿತ್ರದುರ್ಗದ ಬೃಹನ್ಮಠದ ಮಠಾಧೀಶರಾದ ಮುರಿಗೆ ಶಾಂತವೀರಸ್ವಾಮಿಗಳು (?–೧೭೦೩) ಇಮ್ಮಡಿ ಗುರುಸಿದ್ಧ ಸ್ವಾಮಿಗಳು (?–೧೭೨೯) ಸ್ವಾದಿ ಚೆನ್ನಬಸವ ಸ್ವಾಮಿಗಳು (೧೭೨೯–೩೦) ಹಾಗೂ ಶಿರಹಟ್ಟಿ ಸಿದ್ಧಲಿಂಗಸ್ವಾಮಿಗಳ (೧೭೩೦–೫೭) ಸಮಕಾಲೀನ.

ಸ್ವರವಚನ ೨೮೫ರಲ್ಲಿನ ಸೋದೆರಾಯ ಈ ವಂಶದ ಯಾರಿಗೆ ಸಂಬಂಧಿಸಿದೆಯೋ ತಿಳಿಯದು.

**ಇತರ**

೧೨೧ರಲ್ಲಿ ಮೌನೇಂದ್ರನ ಗರ್ಭಾಬ್ಧಿ ಚಂದಿರನಾದ ನಿರುವಾಣೇಂದ್ರನ ಉಲ್ಲೇಖವಿದೆ. ಈತನ ಬಗೆಗೆ ಯಾವುದೇ ಸಂಗತಿ ತಿಳಿದಿಲ್ಲ. ಈತ ಸ್ವರವಚನಕಾರನ ಕಾಲವಾದ ಕ್ರಿ. ಶ. ೧೫೮೦ ಕ್ಕಿಂತ ಹಿಂದಿನವನೆಂಬುದು ಖಚಿತ.

೧೯೫ರಲ್ಲಿ ಲಿಂಗಮ್ಮಾಜಿ ತನುಜ ಕೆಂಚಬಹದೂರನ ಉಲ್ಲೇಖವಿದೆ. ಈತನ ಬಗೆಗೆ ಏನೂ ತಿಳಿದಿಲ್ಲ.

ಇದೇ ಸ್ವರವಚನದಲ್ಲಿ ಶಿವಪೂಜೆಯಾರ್ಯನ ಉಲ್ಲೇಖವಿದೆ. ಈತ ತೋಂಟದ ಸಿದ್ಧಲಿಂಗರ ಶಿಷ್ಯನಾದ ಬೋಳಬಸವನೇ ಆಗಿದ್ದರೆ (ಬೋಳಬಸವನ ಮತ್ತೊಂದು ನಾಮಧೇಯ ಶಿವಪೂಜೆಯಾರ್ಯ) ಆಗ ಕೆಂಚಬಹದೂರನ ಕಾಲ ೧೬ನೆಯ ಶತಮಾನದ ಉತ್ತರಾರ್ಧವಾಗುತ್ತದೆ.

**ಕರ್ತೃಗಳು ತಿಳಿಯದ ಸ್ವರವಚನಗಳ ಕ್ರಮಾಂಕ**

೧, ೨, ೩, ೪, ೫, ೬, ೭–೯, ೧೦, ೧೧, ೧೨, ೧೩, ೧೪, ೧೫, ೧೮, ೭೬, ೭೬ಎ, ೭೭, ೭೮, ೭೯, ೮೦, ೮೧, ೮೨, ೮೩, ೮೪, ೮೫, ೮೬, ೮೭, ೮೮, ೮೯, ೯೦, ೯೩, ೯೪, ೯೫, ೯೬, ೯೭, ೯೮, ೯೯, ೧೦೦, ೧೦೧, ೧೦೨–೦೫, ೧೦೬–೦೭, ೧೦೮, ೧೦೯, ೧೧೦, ೧೧೨, ೧೧೩–೧೬, ೧೧೭–೧೮, ೧೧೯, ೧೨೩–೧೨೪, ೧೨೫, ೧೨೬–೨೯, ೧೩೦, ೧೩೪, ೧೩೫–೩೬, ೧೪೦, ೧೪೧, ೧೪೨, ೧೪೫, ೧೪೬, ೧೪೭, ೧೫೨, ೧೫೩, ೧೫೪, ೧೫೫, ೧೫೬, ೧೫೭, ೧೫೮, ೧೫೯, ೧೬೦, ೧೬೧, ೧೬೨, ೧೬೩, ೧೬೪, ೧೬೬, ೧೬೭, ೧೬೯, ೧೭೦–೭೨, ೧೭೩, ೧೭೪–೭೫, ೧೭೬, ೧೭೭, ೧೭೮, ೧೭೯, ೧೮೦, ೧೮೧, ೧೮೬, ೧೮೭, ೧೮೮–೧೮೯, ೧೯೧, ೧೯೨, ೧೯೩, ೧೯೪, ೧೯೫, ೧೯೬, ೧೯೭, ೧೯೮, ೧೯೯, ೨೦೬, ೨೦೭, ೨೦೮–೦೯, ೨೧೦, ೨೧೧, ೨೧೨, ೨೧೩–೧೪, ೨೧೫–೧೬, ೨೧೭, ೨೧೮, ೨೨೦, ೨೨೧, ೨೨೨, ೨೨೩, ೨೨೪–೨೫, ೨೨೬; ೨೨೭, ೨೨೮, ೨೨೯, ೨೩೦, ೨೩೧, ೨೩೨, ೨೩೩, ೨೩೪, ೨೩೫, ೨೩೬, ೨೩೭–೩೮, ೨೩೯–೪೨, ೨೪೩, ೨೪೪, ೨೪೫, ೨೪೬, ೨೪೭, ೨೫೦, ೨೫೧–೫೨, ೨೫೩, ೨೫೫, ೨೫೬, ೨೫೭, ೨೬೩, ೨೬೪, ೨೬೫, ೨೬೬, ೨೬೮, ೨೬೯, ೨೭೦, ೨೭೨, ೨೭೪, ೨೭೫, ೨೭೬, ೨೭೭–೭೯, ೨೮೦, ೨೮೧, ೨೮೨–೮೩,, ೨೮೪, ೨೮೫, ೨೮೬–೩೦೦.

## ಸ್ವರವಚನ ಆಕರಗಳು

ಸ್ವರವಚನಗಳ ಸಂಗ್ರಹವನ್ನು ಈ ಕೆಳಕಂಡ ವ್ಯಕ್ತಿಗಳು ಹಾಗೂ ಸಂಸ್ಥೆಗಳ ಮೂಲಕ ಮಾಡಿದೆ.

## ವ್ಯಕ್ತಿಗಳು

ಶ್ರೀ ಉಮಾಪತಿ, ಎಸ್. (ದಾವಣಗೆರೆ)
ಶ್ರೀ ಉಮೇಶಚಂದ್ರ (ಕೆಂಗೇರಿ)
ಶ್ರೀ ಗಂಗಣ್ಣಪ್ಪ (ಕನಕಪುರ)
ಶ್ರೀ ಗಿರಿರಾಜು, ಪಿ. ಎಂ. (ಮೈಸೂರು)
ಲಿಂ. ನಂಜುಂಡಪ್ಪ ಬೈರನಹಳ್ಳಿ (ಕನಕಪುರ)
ಡಾ। ನಂಜುಂಡಸ್ವಾಮಿ ಬಿ. (ತುಮಕೂರು)
ಡಾ। ಮರುಳಸಿದ್ಧಯ್ಯ, ಎಚ್. ಎಂ. (ಬೆಂಗಳೂರು)
ಡಾ। ರಾಘವೇಂದ್ರರಾವ್, ಕೆ. (ಮೈಸೂರು)
ಶ್ರೀ ಶಿವಲಿಂಗಯ್ಯ ಗು. ಅ. (ಮೈಸೂರು)

## ಸಂಸ್ಥೆಗಳು

ಕ.ಅ.ಕೇಂ. : ಕನ್ನಡ ಅಧ್ಯಯನ ಕೇಂದ್ರ (ಬೆಂಗಳೂರು)
ಕ.ಅ.ಸಂ. : ಕನ್ನಡ ಅಧ್ಯಯನ ಸಂಸ್ಥೆ (ಮೈಸೂರು)
ಕ.ಸಂ.ಸಂ. : ಕನ್ನಡ ಸಂಶೋಧನ ಸಂಸ್ಥೆ (ಧಾರವಾಡ)
ಕ.ಸಾ.ಪ. : ಕನ್ನಡ ಸಾಹಿತ್ಯ ಪರಿಷತ್ತು (ಬೆಂಗಳೂರು)
ಜ. ತೋಂಟದಾರ್ಯ ಸಂಸ್ಥಾನ ಮಠ (ಗದಗ)
ಬಸವ ಭವನ (ಬೆಂಗಳೂರು)
ಬೃಹನ್ಮಠ (ಚಿತ್ರದುರ್ಗ)
ಬೇಲಿಮಠ (ಬೆಂಗಳೂರು)
ಮಂಜುನಾಥೇಶ್ವರ ಸಂಸ್ಕೃತಿ ಸಂಶೋಧನ ಪ್ರತಿಷ್ಠಾನ (ಧರ್ಮಸ್ಥಳ)
ಮೂರುಸಾವಿರ ಮಠ (ಹುಬ್ಬಳ್ಳಿ)
ರಂಭಾಪುರೀ ಮಠ (ರಂಭಾಪುರಿ)
ವ.ವಾ.ಭಾಂ. : ವಚನ ವಾಙ್ಮಯ ಭಾಂಡಾರ (ಧಾರವಾಡ)
ಶಿರಾಳಕೊಪ್ಪ ವಿರಕ್ತಮಠ (ಶಿರಾಳಕೊಪ್ಪ)

ಸ್ವರವಚನ ಸಂಪುಟ – ೨ ನ್ನು ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆಯ ಮೂಲಕ ಪ್ರಕಟಿಸುತ್ತಿರುವ ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರಸ್ವಾಮಿಗಳವರಿಗೆ ನನ್ನ ಶಿರಸಾಷ್ಟಾಂಗ ಪ್ರಣಾಮಗಳು.

ಈ ಸಂಪುಟ ಪ್ರಕಟಣೆಗೆ ಮೂಲ ಪ್ರೇರಕವಾದ ಡಾ। ಎಂ. ಎಂ. ಕಲಬುರ್ಗಿಯವರಿಗೆ ವಂದನೆಗಳು.

ಈ ಸಂಪುಟದ ಸಿದ್ಧತೆಗೆ ಹಲವಾರು ವ್ಯಕ್ತಿಗಳ ಹಾಗೂ ಸಂಸ್ಥೆಗಳ ನೆರವನ್ನು ಬಳಸಿಕೊಳ್ಳಲಾಗಿದೆ. ಅವರೆಲ್ಲರಿಗೂ ನಾನು ಕೃತಜ್ಞನಾಗಿದ್ದೇನೆ.

ಈ ಸಂಪುಟವನ್ನು ಅಂದವಾಗಿ ವಿನ್ಯಾಸಗೊಳಿಸಿ ಮುದ್ರಿಸಿದ ಲಕ್ಷ್ಮಿ ಮುದ್ರಣಾಲಯದ ಶ್ರೀ ಅಶೋಕ್ ಕುಮಾರ್‌ಅವರಿಗೂ, ಅವರ ಸಿಬ್ಬಂದಿಯವರಿಗೂ ನಮನಗಳು.

೧೪–೯–೧೯೯೪

## ಸಂದರ್ಭ ಗ್ರಂಥಗಳು

– ಕರಿಬಸವಾರ್ಯ ವಿರಚಿತ ನೀತಿರತ್ನಾಕರ
(ಸಂ.) ಶ್ರೀ ಶಿವರಾಜ ಎಂ. ದೇವಪ್ಪ ಹೂವಿನ ಶಿಗ್ಲಿ, 1994
– ಕಂಬಾಳ ಶಾಂತಮಲ್ಲೇಶನ ಗಣವಚನ ರತ್ನಾವಳಿ
(ಸಂ.) ಪ್ರೊ। ಎಸ್. ಉಮಾಪತಿ, ತೋಂಟದಾರ್ಯ ಸಂಸ್ಥಾನ ಮಠ,ಗದಗ, 1986
– ಕೂಡಲೂರು ಬಸವಲಿಂಗ ಶರಣರ ಸ್ವರವಚನಗಳು
(ಸಂ.) ಪ್ರೊ। ಶಾಂತರಸ, ತೋಂಟದಾರ್ಯ ಸಂಸ್ಥಾನ ಮಠ, ಗದಗ, 1983

– ಕೆಸ್ತೂರದೇವನ ಸ್ವರವಚನಗಳು
(ಸಂ.) ಡಾ। ಎಂ. ಎಸ್. ಸುಂಕಾಪುರ, ತೋಂಟದಾರ್ಯ ಸಂಸ್ಥಾನ ಮಠ, ಗದಗ, 1982
– ಗುರುಬಸವಾರ್ಯರ ಸ್ವರವಚನಗಳು
(ಸಂ.) ಶ್ರೀ ಮೊರಬದ ಮಲ್ಲಿಕಾರ್ಜುನ, ತೋಂಟದಾರ್ಯ ಸಂಸ್ಥಾನ ಮಠ, ಗದಗ, 1986
– ಘನಮಠದ ಶ್ರೀ ನಾಗಭೂಷಣ ಶಿವಯೋಗಿಯ ಪಾವನ ಚರಿತ್ರೆ
ಶ್ರೀ ಕಲ್ಲೂರ ಸಂಗಣ್ಣ, ನರಗುಂದ, 1986 (2)
– ಘನಮಠದಾರ್ಯರು
ಪ್ರೊ। ಎಸ್. ಎಸ್. ಕಟಗಿಹಳ್ಳಿಮಠ, ತೋಂಟದಾರ್ಯ ಸಂಸ್ಥಾನ ಮಠ, ಗದಗ, 1986
– ಘನಮಠೇಶ ತತ್ತ್ವ ಪದಗಳು
(ಸಂ.) ಶ್ರೀ ಮಲ್ಲಿಕಾರ್ಜುನ ದೇಶಿಕೇಂದ್ರಸ್ವಾಮಿ, ಸಂತೆಕೆಲ್ಲೂರು, 1970
– ಭಕ್ತಿಸುಧಾಸಾರ
(ಸಂ.) ಪ್ರೊ। ಸಂ. ಶಿ. ಭೂಸನೂರುಮಠ, ಮುರುಘಾಮಠ, ಧಾರವಾಡ, 1976 (2)
– ಚೆನ್ನವೀರಾರ್ಯನ ಶಿವಯೋಗ ಪ್ರದೀಪಿಕೆ
(ಸಂ.) ಡಾ। ವೀರಣ್ಣ ರಾಜೂರ, ಕ. ವಿ. ವಿ. ಧಾರವಾಡ, 1981
– ವೀರಶೈವ ಸಂಶೋಧನೆಗಳು
ಡಾ। ಬಿ. ಆರ್. ಹಿರೇಮಠ, ಧಾರವಾಡ, 1992
– ಶಿವದಾಸ ಗೀತಾಂಜಲಿ
(ಸಂ.) ಡಾ। ಎಲ್. ಬಸವರಾಜು, ಜ. ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ, ಮೈಸೂರು, 1963
– ಸೋದೆಯ ಸದಾಶಿವರಾಯನ ಕೃತಿಗಳು
(ಸಂ.) ಡಾ। ಬಿ. ಆರ್. ಹಿರೇಮಠ, ತೋಂಟದಾರ್ಯ ಸಂಸ್ಥಾನ ಮಠ, ಗದಗ, 1995.
– ಹಾಗಲವಾಡಿ ಮುದ್ವೀರಸ್ವಾಮಿಗಳ ಸ್ವರವಚನಗಳು
(ಸಂ.) ಡಾ। ವೀರಣ್ಣ ರಾಜೂರ, ತೋಂಟದಾರ್ಯ ಸಂಸ್ಥಾನ ಮಠ, ಗದಗ, 1986

# ಪರಿವಿಡಿ

೧

ನೀತವಲ್ಲ ಬಾರೆನ್ನ ಪ್ರಿಯ ಅಮರಕುಂಡಯ್ಯ
ನೀತವಲ್ಲ ಬಾರೆನ್ನ ಪ್ರಿಯ
ಸೋತವಳೊಳು ಪಂಥವೇತಕಯ್ಯ ದಯವಂತ
ನೀತವಲ್ಲ ಬಾರೆನ್ನ ಪ್ರಿಯ ಮಲ್ಲಿನಾಥಯ್ಯ ॥ ಪಲ್ಲ ॥

ಅತಿಹಿತವಾದಮೇಲೆ ಪಿತಮಾತೆಯರ ಬಿಟ್ಟು
ಗತಿ ನೀನೆಯೆಂದು ಬಂದೆನು ಬರುತ ಕೈಯಲಿ
ಮತಿಯಿಲ್ಲದ ಬದುಕ ತಂದೆನು ತಂದುದನೆಲ್ಲ
ಪತಿ ನಿಮಗೆ ಸಲ್ಲಲೆಂದೆನು ಎನ್ನ ಮೇಲೆ ನೀನು
ಖತಿಯನಿಡುವುದು ಕುಂದೇನು ॥ ೧ ॥

ಸಲೆ ಮೆಚ್ಚಿ ನಿನ್ನ ಹಿಂದೆವೊಲಿದು ಬಂದದಕೀಗ
ಕುಲಬಾಂಧವ[ರ]ನೆಲ್ಲ ತೊರೆದೆನು ನಿನ್ನ ಕೂಡಿ
ಹಲವು ಮಾತುಗಳ ಕಲಿತೆನು ಚಿಕ್ಕಂದು ಸಾಕಿ
ಸಲಹಿದವರ ಮರತೆನು ನಿನ್ನ ಮೇಗಿನ
ಒಲಿಮೆ ಚಿತ್ತವ ಬೆರೆದೆನು ॥ ೨ ॥

ಮಾಡಿದಂಥ ಲೇಸ ನನ್ನ ನಿನ್ನ ಮನವೆ ಬಲ್ಲುದ ಮರೆಸ
ಕೂಡಿಯಾಡುವದ[ಕ]ವಕಾಶವಿಲ್ಲ ಮನಸಿನ ನೋವ
ನೋಡಿಕೊಂಡರೆ ಇರಸಲ್ಲ ಮನ್ಮಥನ ಬಾಣ
ಮೂಡಿದವು ಮೈಯ್ಯೊಳಗೆಲ್ಲ ಸೆರಗನೊಡ್ಡಿ
ಬೇಡಿಕೊಂಡರ ಬರಲೊಲ್ಲ ॥ ೩ ॥

❑ ❑

೨

ಸರಸಿಜಪತ್ರದ ತೆರವಿರುವೀ ಸಂಸಾರ ಕನಸಿನ ಪರಿ ವಿಸ್ತಾರ ॥ ಪಲ್ಲ ॥

ಆರುಮಂದಿಯ ಹಿತವನು ಮಾಡಲಿಬ್ಯಾಡ ನೀ ತಿಳಿಯೋ ಗಾಢ
ಮೂರುಮಲವನು ಸೇರಿಯಿರುವರೆ ಮೂಢ ಮಾಡುವರೆ ಕ್ರೀಡ
ಪಾರಮಾರ್ಥ ಸುವಿಚಾರವನರಿದು ವಿಚಾರಿಸು
ಗುರುಪದವಾರಿಜಕಳೆಯೊಳ್ ॥ ೧ ॥

ಕಾಲ ಕಾಮರ ಗೆದ್ದು ಮೋಕ್ಷವ ಪಡಿಯೊ ಅಜ್ಞಾನವ ಹೊಡಿಯೊ
ಬಾಲೆ ಬಾಲಕ[ರ] ಮೂಲವೃಕ್ಷವ ಕಡಿಯೊ ಸುಜ್ಞಾನವ ಪಿಡಿಯೊ
ಜ್ವಾಲನಾಗೊ ದುರಿತಾದ್ರಿಗೆ ನಿತ್ಯ ನಿರಾಳ ನಿಜಾನಂದ
ಪದ ಭಾವಿಸು ॥ ೨ ॥

ಆರು ನಿನ್ನ ಸಂಗಾತ ಬಾಹವರಿಲ್ಲ ದುಃಖಿಸುತಿರೆ
ಮಾರಿ ನೋಡಿ ಹಿಂದಕ್ಕೆ ತಿರುಗುವರೆಲ್ಲ ಕೇಳರಿತರ ಸೊಲ್ಲ
ಧಾರಿಣಿಗಮ್ಮಿನಪುರಿಯ ಜನಕಚ್ಚರಿಯೆನಿಪ ಶಾಂತವೀರನೆ ಬಲ್ಲ ॥ ೩ ॥

❑ ❑

೩

ಶ್ರೀಕಂಠ ಶ್ರೀಕಂಠ ಶ್ರೀಗೌರೀ ಮನೋಹರ ॥ ಪಲ್ಲ ॥
ಎನ್ನೊಳಿಷ್ಟು ಕೋಪವೆ ನಾ
ಮುನ್ನ ಮಾಡಿದ [ಪಾಪ]ವೆ ಶ್ರೀಕಂಠ ॥ ೧ ॥

ನಿನ್ನಯ ದಯವ ಪರಿಪೂರ್ಣದಿ
ಎನ್ನೊಳು ನಿಲಿಸೈ ಬೇಗದಿ ಶ್ರೀಕಂಠ ॥ ೨ ॥

ಎನ್ನ ಬಯಕೆಯನು ತೀರಿಸೊ ನಿನ್ನ
ಚಿನ್ಮಯಪಾದವನು ತೋರಿಸೊ ಶ್ರೀಕಂಠ ॥ ೩ ॥

ಗಂಗೆ[ಯ] ಜಡೆಯೊಳು ತಾಳಿದೆ
ಅಂಗ[ಜ] ಭಸಿತದೊಳಾಡಿದೆ ಶ್ರೀಕಂಠ ॥ ೪ ॥

ಮಾರಮರ್ದನ ಧೀರನೆ
ಸೌರಕ ಸಂಹಾರನೆ ಶ್ರೀಕಂಠ ॥ ೫ ॥

ಪಾಪ ಸಂಹಾರ ದೇವನೆ
ಪಾರ್ವತಿ ಪ್ರಾಣೇಶನೆ ಶ್ರೀಕಂಠ ॥ ೬ ॥

ವೇದ ವಿನುತ ವಿನೋದನೆ
ಮಾಧವ ಸನ್ನುತಪಾದನೆ ಶ್ರೀಕಂಠ ॥ ೭ ॥

ನಿನ್ನ ನಾ ನೆರೆ ನಂಬಿದೆ
ಎನ್ನ ನೀ ಪರಿಪಾಲಿಸೊ ಶ್ರೀಕಂಠ ॥ ೮ ॥

ಬಾಲಚಂದ್ರನ ಸೂಡಿದೆ
ಬಾಲಭಕ್ತಿಯೊಳಾಡಿದೆ ಶ್ರೀಕಂಠ ॥ ೯ ॥

ಅವುದುಂಬಪುರ ನಿಲಯನೆ
ಪ್ರಸನ್ನ ನಂಜುಂಡೇಶನೆ
ಶ್ರೀಕಂಠ ಶ್ರೀಕಂಠ ॥ ೧೦ ॥

❑ ❑

೪

ಕಾಮಿಸಿ ಕರತಾರೆ ಪ್ರೀಯನ
ಕಾಮಿಸಿ ಕರತಾರೆ ಪ್ರೀಯನ ॥ ಪಲ್ಲ ॥

ಕಾಮನ ರೂಪನ ನೇಮಿಸಿ
ಕಾಮಿಸಿ ಮರಗುವೆ ಕರತಾರೆ ಪ್ರೀಯನ ॥ ೧ ॥

ಆಳಿಗಿಳಿಗಳ ರವಗಳ ಕೇಳುತ ಮನ
ಕಳವಳಿಸು[ತಿದೆ] ಕರತಾರೆ ಪ್ರೀಯನ ॥ ೨ ॥

ಧರೆಯೊಳು ಇಟ್ಟಿಗಿ ವರ ವೀರೇಶನ ಚರಣ–
[ಕೆ]ರಗಿ ಕರತಾರೆ ಪ್ರೀಯನ ॥ ೩ ॥

❑ ❑

೫

ಗುರುರಾಜಚಂದ್ರ ಮರಿ ಮುರಿಗೇಂದ್ರ
ಮರಿ ಮುರಿಗೇಂದ್ರ ಗುರು ಮುರಿಗೇಂದ್ರ ॥ ಪಲ್ಲ ॥

ಸುರುಚಿರಮಣಿಹಾರ ಸುರಸ ಭಸಿತಕರ
ಪರತರ ಸುಖಸಾರ ಸುರಭಿಶರೀರ ॥ ೧ ॥

ಕೃತಕ ಸೂತಕ ನೀಗಿ ಯತಿರಾಜಸುತ ಯೋಗಿ
ಸತಿಯುತ ಪಽಯೋಗಿ ಜಿತಕಾಮ ಭೋಗಿ || ೨ ||

ಅನುಪಮ ಮನಶೀಲ ಚಿನುಮಯ ಘನಲೀಲ
ಮನುಮುನಿಜನಜಾಲ ವಿನುತ ವಿಶಾಲ || ೩ ||

ಕಾಷಾಯಂಬರ[ಧರ] ಶೇಷಭೂಷಿತ ಹಾರ
ಈಷಣತ್ರಯದೂರ ಪೋಷಿತ ಸುಪೂರ || ೪ ||

ವರದ ಇಟ್ಟಿಗಿವಾಸ ಪುರದ ಸಂಗಮಧೀಶ
ಕರುಣಿಸೊ ಕರ ಲೇಸ ಕರುಣ ವಿಲಾಸ || ೫ ||

☐ ☐

೬

ಸೊಬಗಿನಸೋನೆ ವರ್ಣ

ಸತಿಕುಲರನ್ನೆ ನೋಡಮ್ಮ ಭಿಕ್ಷಕೆ ಬಂದ
ಯತಿರಾಯ ಕರಿಯ ಸಿದ್ಧೇಶ್ವರನು || ಪಲ್ಲ ||

ಒಪ್ಪುವ ವಜ್ರಮಾಣಿಕ ಕರ್ನಕೊಂಡಲು
ಸರ್ಪಭೂಷಣನವತಾರದಿ
ಸುಪ್ಪಾಣಿಮುತ್ತಿನ ಕಾಂತೆ ನೋಡೆಲೆಗೌವ್ವ
ಪುಷ್ಪಚಾಪನಗೆದ್ದನವ ಸಿದ್ಧ || ೧ ||

ಕನಕ ಕಮಂಡಲ ಕೈಯಲ್ಲಿ ಲಾಕುಳದಂಡ
ವಿನಯದ ಸೊಲ್ಲು ಸುಲಿಪಲ್ಲು
ಇಳೆಯೊಳಗೆ ಚರಿಸಬೇಕೆಂದು ಕಾಲಹರನು
ಇಳಿದು ಬಂದನು ನೋಡೆಲೆಗೌವ್ವ || ೨ ||

ಥಳಥಳಿಸುವ ನೇತ್ರ ಎಳೆಯಗಾವಿಯ ಧೋತ್ರ
ಪಳುಕಿನಿಂದೆಸೆವಾವುಗೆಯಿಂದ
ಚಿನುಮಯಮಣಿ ಜ್ಯೋತಿ ನೆನವ ಭಕ್ತರ ಪ್ರೀತಿ

ಸುಳಿದರೆ ಮನದರ್ತಿ ಪಾವನಮೂರ್ತಿ
ಧರೆಯೊಳಗೆ ಚರಿಸಬೇಕೆಂದು ಮಾರಹರನು
ಒಲಿದು ಬಂದನು ನೋಡಲೆಗೌವ್ವ || ೩ ||

ಗುರುಶಿರೋಮಣಿ ತಮ್ಮ ಮೆರವ ಕೆಂಜೆಡೆ ಸಹಿತ
ಪರಿಮಳಧರಿಸಿ ಕಾರ್ಗೋರಲವಳೆ
ಎರಗಿ ಝೇಂಕರಿಸಿ ಪರಿಪರಿದು ಮೇಲ್ವರಿದು
ಮರಿದುಂಬಿಗಳ ಪುಣ್ಯದಿರವೆಂದು || ೪ ||

ಸಡಗರದಿಂದ[ಲಿ] ಸತಿಯರು ನಡದು ಭಿಕ್ಷವ ತಂದು
ಎಡೆಮಾಡಿದೆ ಸ್ವಾಮಿ ಚಿತ್ತೈಸೆಂದು
ನುಡಿವವಿಮ್ಮಡಿಪ್ರಭು ದೇವರದೇವ ನೀ[ನೆಂ]ದೆಂಬ
ಮೃಡಮೂರ್ತಿ ಕರಿಯಸಿದ್ಧೇಶ್ವರನು || ೫ ||

❑ ❑

೭

ರಾಗ : ಶ್ರೀರಾಗ

ನೀರ ಮುನಿದು ಬಾರ ನೀರಜಮುಖಿ ಕರ–
ತಾರೆ ಎನ್ನಯ ಮನೋತೀತನ ಶುಕ
ವಾಣಿ ಎನ್ನಯ ಮನೋಪ್ರೀತನ || ಪಲ್ಲ ||

ಮೊನ್ನೆ ಮೊದಲು ಮೊಗದೋಱಿ ಮೋಹಿಸಿ ನಲ್ಲ
ಎನ್ನ ಹಂಬಲೇಕೆ ಮಱದನೆ ಬೇಱಿ
ಕನ್ನೆಯೊರ್ವಳ ತಾನು ನೆರದನೆ
ತನ್ನ ತಾನೇನೆಂದುದಿಲ್ಲ ತರುಣಿ ಕೇಳುಮರಿ–
ತೆನ್ನ ನೋಯಿಸುವುದು ವಿ[ಹಿ]ತವೆ ಮನ
ದನ್ನ ಮಾಡಿದದೀ ಘಾತವೆ || ೧ ||

ಎಂದೆಂದು ಎನ್ನ ತಕ್ಕೆಯನಗಲದ ನಲ್ಲ
ಈ ದೆಶೆ ಈ ಗುಣ ಸೇರಿತೋ ಮನ
ನೊಂದು ಮತ್ಸರಮೊಡಗೂಡಿತೊ

ಮಂದಗಮನೆ ಕೇಳು ಮಾಜಲಿನ್ನೇತಕೆ
ಮಂದಿರದೊಳು ಜೀವನಿಲ್ಲದು ಮೌಳಿ
ಸಿಂಧು ಪ್ರೀಯಗೆ ಇಷ್ಟು ಸಲ್ಲದು ॥ ೨ ॥

ನಲ್ಲನ ಕಾಣದೆ ನಿಲ್ಲದೆನ್ನ ಮನ–
ದೊಲ್ಲಭನಿದ್ದೆಡೆಗೆ ಹೋಗಲೆ ಬಹು
ಬಲ್ಲವಗಿದು ಗುಣಸಲ್ಲದು
ಸಲ್ಲದಿನಿತು ಕರದಲ್ಲಿ ತಾನಿರ್ದ ಬಳಿಕ
ಇಲ್ಲಿ ಕೂಡಿಸೊ ಇಷ್ಟಲಿಂಗನ ಮನ
ದಲ್ಲಿ ಬೆರಸೊ ಭವಭಂಗನ ॥ ೩ ॥

೮

ರಾಗ : ಮುಖಾರಿ

ಸಲಹೊ ಶಂಕರ ನಂಬಿದೆ ನಿನ್ನ ಪಾದ
ಜಲಜಾತಂಗಳನಾ[ನ]ನುದಿನ ದೇವ
ಸಲೀಲಾ ಶಾಂಭವಜಾತ ನುತಿಪಾತ್ರ
ಬಲಮಿಲಿತಾಂಧಕ ಜಲನಿಧಿ ಕಳಶಜ
ವಿಲಸಿತ ಮುಕ್ತಿಲಲನಾಕಾಂತ ॥ ಪಲ್ಲ ॥

ಮುನಿಜನ ಮಾನಸಾಂಬಕ ಸೂರಕಾರಿ
ದನುಜಾರಿ ವನಜಭವಾಂಡ ತಾರಾ
ದಿನಕರಕೋಟಿ ತೇಜೋಮಂಜುಳಾಂ
ಗನ ಮಹಿಮೋನ್ನತ ಧನದಸಖನಘ
ಅನುಪಮನಕ್ಷಯಜನನಾಹಾರ ॥ ೧ ॥

ಮುರರಿಪು ಲೋಚನ ಪಾದಕಂಜ ಹಿಮ
ಕರಭೂಷ ಕಮನೀಯ ಮೃಗಧರ
ಶರಣಜನಾನಂದವನಚಯಿತ್ರ
ಪುರಹರ ಗರಧರ ಸುರವರ ನತಪದ
ಸರಸಿರುಹೋನ್ನತ ಜನಮಂದಾರ ॥ ೨ ॥

ಶೃಂಗಿ ಕೋದಂಡಭಕ್ತ ಜನಸಂಗ ಕೃಪಾ
ಪಾಂಗ ಭುಜಂಗಭೂಷ ಪಂಚತುಂಡ
ಮಂಗಳಮಯಮೂರ್ತಿ ಇಷ್ಟಲಿಂಗ
ತುಂಗ ತರಂಗಿಣಿಸಂಗ ಸಮಸ್ತ ಪ–
ತಂಗಜಾಭಂಗ ನಿರಂಗ ॥ ೪ ॥

೯

ಜಯಮಂಗಳಂ ನಿತ್ಯ ಶುಭಮಂಗಳಂ
ಜಯಜಯತು ಅಲ್ಲಮಾಪ್ರಭುಸ್ವಾಮಿಗೆ ॥ ಪಲ್ಲ ॥

ಕೊಟ್ಟೂರ ಬಸವನಿಗೆ ಕೋಲಶಾಂತೇಶನಿಗೆ
ದಿಟ್ಟ ತೋಂಟದ ಸಿದ್ಧಲಿಂಗೇಶಗೆ
ಮುಟ್ಟಿ ರಕ್ಷಿಸುವ ಮಡಿವಾಳ ಮಾಚಿದೇವನಿಗೆ
ಶ್ರೇಷ್ಠ[ನಹ] ಗುರು ಚೆನ್ನಮಲ್ಲೇಶಗೆ ॥ ೧ ॥

ಅಕ್ಕ ಸತ್ಯಕ್ಕನಿಗೆ ಅಕ್ಕ ಚೋಳಕ್ಕನಿಗೆ
ಅಕ್ಕಮಹಾದೇವಿ ಸುಗ್ಗಳೆತಾಯಿಗೆ
ಅಕ್ಕ ನಂಬೆಕ್ಕನಿಗೆ ಅಕ್ಕ ಚಂಗಳಕ್ಕನಿಗೆ
ಅಕ್ಕರದ ನೀಲಲೋಚನೆ ತಾಯಿಗೆ ॥ ೨ ॥

ಮಂಗಳಾತ್ಮಕನಿಗೆ ಮದನಸಂಹಾರನಿಗೆ
ಕಂಗಳು ಮೂರುಳ್ಳ ಕರುಣನಿಧಿಗೆ
ತುಂಗ ಚರ್ಮಾಂಬರಗೆ ಗಂಗೆಯಾ ರಮಣನಿಗೆ
ಹಿಂಗದೆ ರಕ್ಷಿಸುವ ಶ್ರೀವಿಷ್ಟಲಿಂಗೇಶಗೆ
ಜಯಮಂಗಳಂ [ನಿತ್ಯ] ಶುಭಮಂಗಳಂ ॥ ೩ ॥

❑ ❑

೧೦

ಸುಮ್ಮನೆ ಶಿವನ ನೀ ನೋಡಲಾ ಮನ
ಸುಮ್ಮನೆ ಶಿವನ ನೀ ನೋಡಲಾ ॥ ಪಲ್ಲ ॥

ನಿಟಲ ಭ್ರೂಮಧ್ಯ ತ್ರಿಕೂಟಗಿರಿ ಊರ್ಧ್ವದಿ
ಸ್ಫಟಿಕವರ್ಣದ ಜ್ಯೋತಿ ನೋಡಲಾ ॥ ೧ ॥

ಚಿನ್ನವಕರಗಿದ ಬಣ್ಣವ [ತಾ]ಳಿದ
ಚಿನ್ಮಯ ಲಿಂಗನ ನೋಡಲಾ ॥ ೨ ॥

ಕಣ್ಣೀನ ನಡುವಿನ ಸಣ್ಣನ ಗೂಡಿನ
ಉನ್ಮನಿ ಶಾಂತನ ನೋಡಲಾ ॥ ೩ ॥

❑ ❑

೧೧

ಅಂಗಜಮದಕೃತಾಂತ ಅಧಿಕ ಶರಣರಂತ–
ರಂಗನೆ ಸಿದ್ಧಲಿಂಗನೆ ॥ ಪಲ್ಲ ॥

ಭಸಿತಭೂಷಣವಿಟ್ಟ ಭವಮಾಲೆಗಳ ಸುಟ್ಟ
ಸು ಶಿವನೆ ದಯವೆಸವನೆ
ದಿಸೆಭರಿತಯುದಾರ ಜನನಮರಣದೂರ
ಅಸಮನೆ ಮುಕ್ತಿಕುಸುಮನೆ ॥ ೧ ॥

ವೀರಶೈವದಿ ಸಂಪನ್ನ ವಿಮಲ ಸದ್ಗುಣ ರನ್ನ
ಹರನೆ ದಯಾಗಾರನೆ
ಸಾರ ಷಟ್ಸ್ಥಲಮೂರ್ತಿ ಸಕಲಲೋಕದಿ ಕೀರ್ತಿ
ಸೂರನೆ ಗಂಭೀರನೆ ॥ ೨ ॥

ಪೊಡವಿಗಧಿಕವಾದ ಪೊಸತು ದಿವ್ಯಾನಂದ
ಒಡೆಯನೆ ಘನ ಪಡೆಯನೆ
ಎಡೆಯೂರಪುರದಿನಿಂದ ಎನಗತಿ ಲೇಸ
ಕೊಡುವನೆ [ಮೋ]ಕ್ಷವಿಡುವನೆ ॥ ೩ ॥

❑ ❑

೧೨

ಏಕೆ ದಯವನು ಮಾಡೆ ಏ ಸಾಂಬಶಿವನೆ
ಲೋಕರಕ್ಷಕನೆಂಬ ಬಿರಿದ ಪೊಗಳಿಸಿಕೊಂಡೆ
ಈ ಪರಿಯೊಳೆನ್ನ ಮರೆತೆಯೊ ಮಹಾದೇ[ವ] ॥ ಪಲ್ಲ ॥

ವಾಸವೆ ಕೈಲಾಸ ವಸನವೆ ಗಜಚರ್ಮ
ವಾಸುದೇವನೆ ಮಿತ್ರ ವಧುವೆ ಗಿರಿಜೆ
ವಾಸುಕಿಯೆ ಆಭರಣ ವಸುಧೆಯೆ ರಥವೆಂದು
ಈಸು ಗರ್ವದೊಳೆಲ್ಲ ಮರೆತೆಯೊ ಮಹಾದೇವ ॥ ೧ ॥

ಸಾರಥಿಯೆ ಬ್ರಹ್ಮ ಮಹಂಮೇರುವೆ ಧನುವದಕೊ
ನಾರಾಯಣಾಸ್ತ್ರ ನಾಗೇಂದ್ರ ಸೂತ್ರ
ಈ ರೀತಿಯಲಿ ಮೂರುಪುರವ ಜೈಸಿದೆನೆಂಬ ಆಹಂ–
ಕಾರದಿಂದೆನ್ನ ಮರೆತೆಯೊ ಮಹಾದೇವ ॥ ೨ ॥

ಬಡವನೊಡನೊಡನಿನಿತು ಬಲುಹುದೋರ್ಪುದೆ ಶಿವನೆ
ಬಿಡದೆನ್ನ ಕಾಯೋವಿಷ್ವಾರ್ಥವೀಯೊ
ಮೃಡನೆ ನೀನಲ್ಲದಿನ್ನೊಡೆಯರಾರೀ ಜಗಕೆ
ಎಡೆಯೂರಪುರವಾಸ ಯತಿ ತೋಂಟಧೀಶ
ಏಕೆ ದಯವನು ಮಾಡೆ ಏ ಸಾಂಬಶಿವನೆ ॥ ೩ ॥

❑ ❑

೧೩

ಓಂ ನಮೋ ಹರಯೆನ್ನು ಮನದೊಳು
ಜ್ಞಾನವಿನಿತು ಪರವಶನಾಗದೆ
ಏನ ಬೇಡಿದಡೀವ ಎಲ್ಲ ದೇವರದೇವ
ದಾನಿ ದಯಾಳ ಸಿದ್ಧೇಶನ ಮನದೊಳು ॥ ಪಲ್ಲ ॥

ಕರಿಚರ್ಮಧರ ಹರಿನಯನಾರ್ಚಿತಪಾದ
ಸರಸಿಜಭವಸ್ತೋತ್ರಪಾತ್ರನ

ಸುರರಸುರರ ಕಿನ್ನರರ ಹೊರವ ದೇವ
ಧರೆ [ದೇ]ಹದಿಂದಿ[ಹ]ನಾಹ ಸ[ಲಹ]ಲರಸು ಸಿದ್ಧೇಶ ॥ ೧ ॥

ಶಶಿಭೂಷ ವಿಷಕಂಠ ಭಸಿತಾಂಗ ಪಶುಪತಿ
ಅಸಮಾಕ್ಷ ಅಂಬರಕೇಶನ
ವೃಷಭವಾಹನ ಊರ್ಧ್ವರೇತ ಸ್ವಯಂಭುವ
ಒಸೆದು ಭಜಿಸೆ ಭವಪಾಶವ ಪರಿವ ॥ ೨ ॥

ನೇತ್ರ ತ್ವಕ್ಕು ಜಿಹ್ವೆ ಶ್ರೋತ್ರ ಘ್ರಾಣದೊಳಿರ್ದು
ಧಾತ್ರಿಯೊಳಗೆ ಶಿವಶರಣರ
ಆತ್ಮಕ್ಕೆ ತಟ್ಟುವ ಸುಖವನು ಬಯಸುವ
ಸೂತ್ರದಮೃತದ ಸರ್ವೇಶನ ಮನದೊಳು ॥ ೩ ॥

ಪುರಹರ ಸ್ಮರಹರ ಸ್ಮರಿಪಭಕ್ತರ ಹೃ
ತ್ಸರಸಿಜದೆಸಳ ಮಧ್ಯದೊಳಿರ್ದು
ಪೊರೆವ ರಕ್ಷಾಮಣಿಯೆಂದು ಭಜಿಸು ಮುಕ್ತಿ
ಸರಧಿಯೊಳಗೆ ಓಲಾಡುವೆ ಮನವೆ ॥ ೪ ॥

ಕಾಶಿಗೆ ನೂರ್ಮಡಿ ಘನವಾದ ಎಡೆಯೂರವಾಸ
ವಿಶ್ವೇಶ ಸಿದ್ಧೇಶನ
ನೇಸರು ಶತಕೋಟಿ ಕಳೆಯುಳ್ಳ ಪಾದವ
ಈಸು ವಂಚನೆಯಿಲ್ಲದೆ ನೆನೆ ಮನವೆ ॥ ೫ ॥

□ □

೧೪

ರಾಗ : ನಾಟಿ

ಶರಣುಜನಸನ್ಮೋಹಿ ಶಾಶ್ವತ ಗುಣತ್ರಾಹಿ
ಪರಮಭಕ್ತರ ಪ್ರಿಯ ಪುಣ್ಯ ವಿದೇಹ
ಸ್ಮರರೂಪ ಕುಲ ಶೀಲ ಸದ್ಭಕ್ತನೋಪಾಲ
ಪರಿಪೂರ್ಣ ಸುಜ್ಞಾನಿ ಪರಮ ಶಿವಧ್ಯಾನಿ ಶರಣು ॥ ಪಲ್ಲ ॥

ಶರಣು ಪಾವನ ಗಾತ್ರ ಶಶಿ ಭಾನುಶಿಖಿನೇತ್ರ
ಸುರಗಣಾರ್ಚಿತಪಾದ ಸೂರ್ಯಾದಿಭರಣ
ಕರಣಗುಣ ನಿರ್ಮುಕ್ತ ಕಾಂತೆಯುಳಿದ ವಿರಕ್ತ
ಉರುತರಾಂಬುಜಭೃಂಗ ಗುರುಸಿದ್ಧಲಿಂಗ ॥ ೧ ॥

ಅಸುರತತಿ ನಿರುಹರಣ ಅಕ್ಷಮಾಲಾಭರಣ
ಪಸುಪತಿಯನವತಾರ ಪಾವನಶರೀರ
ಕುಸುಮಜ್ಯಾಮದಭಂಗ ಕುಟಿಲದೇವೋತ್ತುಂಗ
ಭಸಿತಭೂಷಣ ಕಾಯ ಭಕ್ತರ ದೇಹ ॥ ೨ ॥

ಆಱುಮೂಱನೆ ಗೆಲಿದು ಅಷ್ಟಮದಗಳ ಜರಿದು
ವೀರಶೈವೋದ್ಧಾರ ವಿತರಣ ವಿಚಾರ
ಧಾರುಣಿಗೆ ಪ್ರತ್ಯಕ್ಷ ಧರ್ಮ ಚತುರ್ವಿಧಮೋಕ್ಷ
ಸಾರ ಎಡೆಯೂರವಾಸ ಸ್ವಾಮಿ ಸಿದ್ಧೇಶ ॥ ೩ ॥

❑ ❑

೧೫

ಶ್ರೀಗುರುxxxxx ತು ರಾಜಿಪ
ಭೋಗಿಭೂಷಣನನು ತೂಗೀರೆಯಮ್ಮ ತೂಗೀರೆ ॥ ಪಲ್ಲ ॥

ಪೊಗಳುವ ನಿಗಮ xxxನ
ನಗೆಮೊಗದಬಲೆಯರು ತೂಗೀರೆ
ಅಗಜೆಯರಸನನರ್ಚಿಪರೀ ಗರುವ
xxxತೂಗೀರೆಯಮ್ಮ ತೂಗೀರೆ
ಜಗದ ಸುಜನರನು ಪೊರೆವ ಮಹಾತ್ಮನ
ಮೃಗಮದಗಂಧಿಯರು [ತೂಗೀರೆ]
ಮಘಮಘಿಸುವ ಮಲ್ಲಿಗೆಯ ಮಂಟಪದೊಳು
ಸೊಗಸು ವಂದಿಸಿ ಪಾಡಿ ತೂಗೀರೆಯಮ್ಮ ತೂಗೀರೆ ॥ ೧ ॥

[ರಂಜಿ]ಪ ಕಂಜೆಡೆಯಭವನ ಬಣ್ಣಿಸಿ
ಮಂಜುಳ ನೇತ್ರನ ತೂಗೀರೆ

ಬಂಜೆಯರರ್ಥಿಪುತ್ರರನಿತ್ತ [ಧ]
ನಂಜಯಪಾಣಿಯ ತೂಗೀರೆಯಮ್ಮ ತೂಗೀರೆ
ಕಂಜಬಾಣನಸುಟ್ಟ ಭಸಿತವಿಟ್ಟ[ನ] ಯಮ
ಭಂಜ[ಕ]ನ ಪಾಡುತ ತೂಗೀರೆ
ಕುಂಜರಗಮನೆಯರು ಕುಶಲದಿ ಸ್ವರಗೂಡಿ
ಕಂಜಾರಿಜೂಟನ ತೂಗೀ[ರೆ] ॥ ೨ ॥

ಪಂಚಾಕ್ಷರಿತ ಸುಮನವೇಕಲಿಂಗದಿ
ಸಂಚಿತ ಶರಣರ ತೂಗೀರೆ
ಕಾಂಚನಾದ್ರೀಶನ ಹೃದಯದೊ[ಳಿಂ]ಬಿಟ್ಟ
ಲಾಂಛನಪ್ರಿಯನ ತೂಗೀರೆಯಮ್ಮ ತೂಗೀರೆ
ಮುಂಚುವ ಮೋಹಪ್ರಪಂಚುವಳಿದ ನಿಃಪ್ರ-
ಪಂಚನ ಮನಮುಟ್ಟ ತೂಗೀರೆ
ಮಿಂಚುವ ಸುಲಿಪಲ್ಲು ನಗೆಮುಖದೈಯ್ಯನ
ಅಂಚೆಗಮನೆಯರು ತೂಗೀರೆಯಮ್ಮ ತೂಗೀರೆ ॥ ೩ ॥

ತಳಿರಡಿ ಸುಳಿನಾಭಿ ತೆಳುವಸುರ ತನುಕಾಂತಿ
ನಳಿತೋಳ ನಾರಿಯರು ತೂಗೀರೆ
ಬಳಕುವ ಬಡನಡುವಿನ ಭಾವಕಿಯರು ಕೂಡಿ
ಎಳೆವೆರೆಧರನನು ತೂಗೀರೆಯಮ್ಮ ತೂಗೀರೆ
ಬೆಳತಿಗೆಗಂಗಳ ಕಳೆವೆತ್ತ ಕಾಂತಿಯ
ಅಳಿಕಾಂಬಕನನು ತೂಗೀರೆ
ಥಳಥಳಿಸುವ [ತ]ನುವೆಳಗಿನ ಮಹಿಮನ
ನಳನವದನೆಯರು ತೂಗೀರೆಯಮ್ಮ ತೂಗೀರೆ ॥ ೪ ॥

ಆಸೆಯಾಮಿಷ[ಗ]ಳ ನಾಶವ ಮಾಡಿದ
ಭಾಷೆಪಾಲಿಕನನು ತೂಗೀರೆ
ಮೀಸಲ ಭಕ್ತಿಪದಾರ್ಥವ ಸವಿ[ವ ವಿ]
ಲಾಸನ ಪಾಡುತ ತೂಗೀರೆಯಮ್ಮ ತೂಗೀರೆ
ದೇಶದೇಶಗಳಲ್ಲಿ ಮಹಿಮೆಯ ಮೆರವ ಮ-
ಹೇಶನ ಪೊಗಳುತ ತೂಗೀರೆ
ಗೋಸಲಬಗೆ ಚೆನ್ನಬಸವ ಸದ್ಗುರು ಕರಜಾತ ವಿ
ಖ್ಯಾತನ ತೂಗೀರೆಯಮ್ಮ ತೂಗೀರೆ ॥ ೫ ॥

ಬಚ್ಚಬರಿಯ ಪರಬ್ರಹ್ಮರೂಪನ
ಸಚ್ಚಿದಾನಂದನ ತೂಗೀರೆ
ನಿಚ್ಚ ಪಾದೋದಕ ಪ್ರಸಾದಕ್ಕೆ ಮನವುಬ್ಬಿ
ಮೆಚ್ಚಿದ ಮಹಿಮನ ತೂಗೀರೆಯಮ್ಮ ತೂಗೀರೆ
ತುಚ್ಛ ನುಡಿವ ಧೂಷಕರ ಸದೆಬಡಿವಾತ್ಮ
ನಿಶ್ಚಲ[ಗೆ] ಜಯವೆಂದು ತೂಗೀರೆ
ಉತ್ಸಾಹದಿಂದಲಿ ನಿಚ್ಚ ಪೂಜೆಯ ಕೊಂಬ
ಚಿನ್ಮಯನ ಬೇಗ ತೂಗೀರೆಯಮ್ಮ ತೂಗೀರೆ ॥ ೬ ॥

ನಿಷ್ಠೆಯುಳ್ಳವರಿಗೆ ಇಷ್ಟಾರ್ಥವನೀವ
ದಿಟ್ಟಮೂರುಳ್ಳನ ತೂಗೀರೆ
ಇಟ್ಟಣಿಸುವ ಇಹಪರಗತಿಗಭಯವ
ಕೊಟ್ಟು ರಕ್ಷಿಸುವ[ವ]ನ ತೂಗೀರೆಯಮ್ಮ ತೂಗೀರೆ
ಹುಟ್ಟು ಹೊಂದಿಲ್ಲದ ಶ್ರೇಷ್ಠ ವಿರಕ್ತನ
ಕಟ್ಟಾಣಿವೆಣ್ಣುಗಳೆಲ್ಲ ತೂಗೀರೆ
ಸೃಷ್ಟಿಗಧಿಕ ಎಡೆಯೂರೊಳು ನಿಂದಘ–
ರಟ್ಟ ಸಿದ್ಧೇಶ್ವರನ ತೂಗೀರೆಯಮ್ಮ ತೂಗೀರೆ ॥ ೭ ॥

❑ ❑

೧೬

ರಾಗ : ಶಂಕರಾಭರಣ

ಮಾತಾಡದಂಥ ಮುನಿಸೇನೆ ನೀ ಕೇಳೆ
ಕಾಂತನ ನೀ ಕೇಳೆ ಪ್ರೀಯನ ॥ ಪಲ್ಲ ॥

ಬರೆ ಮೋಹದಿಂದ ಮಾತಾಡಿ ಬೋಧಿಸಿದನೆಲೆಯೆನ್ನ
ಸ್ಮರನಾಟದಲ್ಲಿ ಸುಖದೋರಿ ನೆರೆ ನಂಬಿದೇನೆ ತನ್ನ
ಮರವಗೆ ಬೇಡು ತನ್ನ ಮಾನಿನಿ ಪ್ರಿಯನ ॥ ೧ ॥

ಎನಗಾಗದಳ ಮನೆ ಸೇರಿ ಎರವಾದನಲ್ಲೆ ತಾನು
ಜನರಾಡುವಂತ ಮಾತಿಗೆ ಜರಿದೆನ್ನ ಬಿಡುವರೇನು

ಅನುಕೂಲವಾದ ಪುರುಷನು ಆಗಲೆ ನಾ ಮಾಡಲೇನು
ವನಿತೆ ಕೇ[ಳೆಲೆ] ನೀನು ಒಲಿದ್ಯಾಕೆ ಬಾರನೇನೆ ॥ ೨ ॥

ಸೋತವಳ ಕೂಡೆ ಕಾಡುವದು ಸೊಗಸೇನೆ ನೀರೆ ತನಗೆ?
ಪ್ರೀತಿಯಿಲ್ಲದನ್ಯಳ ಕೂಡಿ ಬರಲಿಲ್ಲ ಎನ್ನ ಮನಿಗೆ
ಧಾತ್ರ್ಯನುಲಿ ಗುರುಲಿಂಗ ದಯವಾಗನೇನೆ ಎನಗೆ?
ದೂತೆ ಕೇಳೆಲೆ ನೀನು ದೂರಾದ ಕಾಂತಗೆ ॥ ೩ ॥

## ೧೭

ಯಾತಕ್ಕವಿವೇಕಿಯಾದಿ ನಿನ್ನೊಳಗೆ
ನೀ ತಿಳಿಯದಕಟ ಬರಿದೆ ಮನವೇ ? ॥ ಪಲ್ಲ ॥

ಗುರು ಕೊಟ್ಟ ಬೋಧೆ ಮರದು ಲಿಂಗದಾ–
ಚರಣೆ ನೇಮಗಳ ಜರಿದು ದಿವ್ಯ
ಚರಪಾದಸೇವೆ ತೊರದು ದುರ್ಜನರ
ನೆರ[ವಿ]ಯೊಳು ಕೂಡಿ ಬೆರದು ॥ ೧ ॥

ಸುಹಿತರುಕ್ತಿಗಳ ಬಿಟ್ಟು ಪ್ರೀತಿಯಲಿ
ಕುಹಕರಿಗೆ ಕಿವಿಯ ಕೊಟ್ಟ ಮಾಯಾ
ರಹಿತನಾಗದಲಿ ಕೆಟ್ಟ ಕೊಬ್ಬಿ ನೀ–
ನಿಹಪರಕಯಾದಿ ಖೊಟ್ಟ ॥ ೨ ॥

ನಾರಿಯರ ಬ್ಯಾಟ[ಕೆ] ಮೆಚ್ಚಿ ನಿನ್ನ ನೀ
ಮೀರಿ ತಿರಗುತಲಿ ಹೆಚ್ಚಿ ಜ್ಞಾನಾ–
ಗಾರಕೆ ಬೆಂಕಿ ಹಚ್ಚಿ ಮದವು ತಲಿ–
ಗೇರಿ ನೀ ಕಣ್ಣ ಮುಚ್ಚಿ ॥ ೩ ॥

ಹಿರಿಯರಂಜಿಕೆಯನುಳಿದು ಸಂಸಾರ
ಹಿರಿದೆಂದು ಮದದಿ ತಿಳಿದು ನಿತ್ಯ
ಪರಿತೋಷದಿಂದ ಬಳದುಯಿರ್ದಡೇನು
ಉರುಪುವನು ನಿನ್ನ ಮುಳಿದು ॥ ೪ ॥

ಉಪಮೆ ಶಾಸ್ತ್ರಗಳ ಬಲ್ಲಿ ಬಂದಡಸಿ
ದಪಕೀರ್ತಿಗಳು ಋಗಹಗಸತ್ಯ
ತಪನೈಷ್ಕರ್ಮ್ಯೋಗದಲ್ಲಿ ಹೊಂದಿ ನೀ
ಸುಪಥದೊಳ್ಚರಿಸಲೊಲ್ಲಿ ॥ ೫ ॥

ಬಾಳೆವನ ಕಡಿದು ಬರದಿ ಬೊಬ್ಬುಲಿಗೆ
ಬೇಲಿ ಹಚ್ಚುವನ ತೆರದಿ ಸುಗುಣ
ಜಾಲಮೂಲವನೆ ತರದಿ ಕಂಡುದಕೆ
ಮೇಳೈಸಿ ಬಾಯದೆರದಿ ॥ ೬ ॥

ಪರಮೈನೆಲೆಯನೋಡಿ ವರದ ಸ
ದ್ಗುರುಲಿಂಗನೊಳಗೆ ಕೂಡಿ ಸೌಖ್ಯ
ಸರಧಿಯೋಳ್ಮಿಗೆಯೋಲಾಡಿ ಚಿದ್ಬ್ರಹ್ಮ
ದಿರವನರಿಯದತಿ ಖೋಡಿ ॥ ೭ ॥

❑ ❑

೧೮

ಹೊಸಪರಿಯಲಿವೊಂದು ಸಸಿವನವನು ಕಂಡೆ ಚಂದಮಾಮ ಅಲ್ಲಿ
ಮುಸುಕಿ ಬೆಳವುತದೆವೀರೇಳುಲೋಕವು ಚಂದಮಾಮ ॥ ಪಲ್ಲ ॥

ತುದಿಯಿಲ್ಲ ಮೊದಲಿಲ್ಲ ಪದುಳದಿಂದ ಮರ ಚಂದಮಾಮ
ಪದುಳದಿ ಎಲೆ ಹೂವು ಹಣ್ಣು ಕಾಯಿಗಳಿಲ್ಲ ಚಂದಮಾಮ
ಬೆದುರೆದ್ದು ನೋಡಲು ಎಲೆ ಹೂವು ಹಣ್ಣು ಕಾಯಿಗಳುಂಟು ಚಂದಮಾಮ
ಮಧುರದ ಹಣ್ಣುಂಟು ಮಾಯದ ಮರದಲ್ಲಿ ಚಂದಮಾಮ ॥ ೧ ॥

ಹಣ್ಣಿನ ಪರಿಯೊಂದು ಬಣ್ಣವೈದಾರು ಬಗೆ ರುಚಿ ಚಂದಮಾಮ
ಹಣ್ಣಿನ ಪರಿಯೊಂದು ಹಲವು ಪರಿಯಲುಂಟು ಚಂದಮಾಮ
ಹಣ್ಣುಮೆಲ್ಲುವಂಥ ಅಣ್ಣಗಳೈವರು ಚಂದಮಾಮ
ಹಣ್ಣುಮೆದ್ದಣ್ಣಗೆ ಹೆಸರಿಲ್ಲ ಕುಱುಹಿಲ್ಲ ಚಂದಮಾಮ ॥ ೨ ॥

ಮರದ ಕುಱುಹ ಬಲ್ಲ ಕರುಣೆ ನಿಶ್ಚಿಂತನು ಚಂದಮಾಮ
ಮರದ ಮರ ಹೋಗಿ ಬಯಲಾದೀತು ಚಂದಮಾಮ

ಮರದಲಿದ್ದ ಹಣ್ಣ ಮರವೆ ನುಂಗೀತು ಚಂದಮಾಮ
ಕರದು ಕಾಯುತಲೀವ ಕರುಣಿ ಕಟ್ಟಿಗೆಸಂಗ ಚಂದಮಾಮ ॥ ೩ ॥

 

೧೯

ರಾಗ : ಮುಖಾರಿ

ಭಿಕ್ಷ ಮೋಹನ ದಯಾಧರ್ಮ ಭಿಕ್ಷಾ
ಭಿಕ್ಷರತಿ ಮೋಹವಡದಿಹ ಕಾಮದೇಶಾಂತ್ರಿಗೆ ॥ ಪಲ್ಲ ॥

ಕಣ್ಣೆಂಬ ನೈದಿಲೆಯ ಕಪ್ಪುರದೊಳಗೆ ಲಾ-
ವಣ್ಯವೆಂದೆಂಬ ಪಂಚಾಮೃತವನೆಡೆಮಾಡೊ
ಪುಣ್ಯಾಂಗನೆಯರುಂಟೆ ಈಯಂಗದೇಶದೊಳು ಎಳೆ
ವೆಣ್ಣುಗಳನೊಲಿಪ ಮದನಾರಿ ಕಾಣೆ ॥ ೧ ॥

ಎದೆದಾXXX ಶಿಯೆಂಬ ಬಟ್ಟಬಲ್ಮೊಲೆಯೊಳಗೆ
ಹೃದಯಸೋಂಕಿನ ಬೋನವ
ಅಧರಾಮೃತದಿ ರಚಿಸಿದ ಪದಾರ್ಥಗಳಿಂದ
ಒದಗಿ ನೀಡುವರುಂಟೆ ವಿಟ ಪರದೇಸಿಗೆ ॥ ೨ ॥

ಹರೆಯದ ಗುಣದ ಚತುರತೆಯ ಬಲಗೊಂಡು
ಚಾಪಲಾಕ್ಷಿಯರ ಚೆಲ್ವಿನ ಭಿಕ್ಷವ
ತಾಪ [ಸ] ಸಿದ್ಧರುಗೂಡಿ ಸವಿದುಂಡ ಅಷ್ಟಮದ
ರೂಪ ಕಪ್ಪಿನಿಪತಿ ನಂಜುಂಡಗೆ ॥ ೩ ॥

 

೨೦

ರಾಗ : ಮುಖಾರಿ

ಹೆಂಗಳರಸಿ ತನ್ನಿನಿಯನ ಸಮ[ಖ]ದಿರ[ಲಾಗ]
ಅಂಗಜನ ಬಲವ. ಅಂಗನೆ ಗೆದ್ದಳಂತೆ ॥ ಪಲ್ಲ ॥

ತುಂಬಿ ಝೇಂಕಾರವನು ಮಾಡೆ ಬಿಜ್ಜಣಿಗೆಯಿಂ–
ದಂಬುಜಾನನೆ ಬೀಸಿಕೊಂಡಳಂತೆ
ಬೆಂಬಿಡದೆ ಮಂದಮಾರುತ ತೀಡೆ ಪೊದ್ದ ಪೀ–
ತಾಂಬರದ ಸೆರಗ ಜಾಱುಸಿದಳಂತೆ ॥ ೧ ॥

ಸಸಿ ಮೂಡಲೊಡನೆ ರಾಗವನು ಪಾಡಿದಳಂತೆ
ನಸುನಗುತ ಗಿಣಿಯೋದಲಿಕೆ ತನ್ನ
ಮಿಸುನಿಯೊಳ್ಪುದುಗಿದುಂಗುರವ ಬೆರಳಿಗೆ ತಾ–
ಮಸವಿಲ್ಲದಿಟ್ಟು ಕಂಪಿಸಿದಳಂತೆ ॥ ೨ ॥

ಚಿತ್ತಜನು ಮುಂಕೊಂಡು ಬರಲು ಕೊರಲೊಳು ದಿವ್ಯ
ಕಸ್ತುರಿಯ ಲೇಪನಗೈದಳಂತೆ
ಮತ್ತೆಯನಿತರೊಳು ಕಪ್ಪಿನಿಪತಿ ನಂಜುಂಡ
ವೃತ್ತ ಕುಚೆಯಳ ನೆರದು ಮನ್ನಿಸಿದನಂತೆ ॥ ೩ ॥

೨೧

ರಾಗ : ಶ್ರೀರಾಗ

ಓಲೆ ಬಂದಿದೆ ಕಾವರಾಯ ಕಟ್ಟಾಳು ತಂಬೆರಲನಟ್ಟಿದನೆಂದು ॥ ಪಲ್ಲ ॥

ಬಂದು ತಂಬೆಲರು ಹರಿ ಚಂದ್ರನೋಲೆಯ
ತಂದು ವಸಂತಗೀಯಲು ಕೂಡೆ
ಚಂದ್ರಿಕೆದೆಱದರಗಿಳಿ ಮೆಲ್ಲನೋದಲು ಅದ
ರಂದವನೇನ ಬಣ್ಣಿಪೆನಮ್ಮ ॥ ೧ ॥

ಶ್ರೀಮನ್ಮಹಾಮನ್ಮಥರಾಯ ಮಧುಮಾಸ–
ದಾ ಮಹಾ ಶುದ್ಧ ಪೌರ್ಣಮೆಯಲ್ಲಿ
ಪ್ರೇಮ ವಸಂತಗಿಕ್ಕಿದ ಕಾಯಮೋಹಿ
ಕೋಮಲೆಯ ಕರ ಕೊಟ್ಟು ಕಳುಹೆಂದು ॥ ೨ ॥

ಈವೊಕ್ಕಣಗೇಳುತ ಶುಕ ಪಿಕ ಹಂಸ
ಕಾನನ ಬಳಗವೆಲ್ಲವ ಕೂಡಿಯೆ

ವೇ ವೇವೆನುತ ಕಪ್ಪಿನಿಪತಿ ನಂಜುಂಡ
ದೇವನ ಬಿಗಿಯಪ್ಪಿದರಮ್ಮ ॥ ೩ ॥

೨೨

ರಾಗ : ಪಹಡಿ

ಆಗಲೊಲ್ಲದೆ ನೀಯೆನ್ನ ಕೊಂಡಾಡೆ ಮತ್ತೊರ್ವಳ
ಯೋಗನಿನಗೆಯೋಗಡಿಕೆಯಾಗಿ ಪೊರೆ
ದಾಗಲಲ್ಲದೆ ನೀಯೆನ್ನ ಕೊಂಡಾಡೆ ॥ ಪಲ್ಲ ॥

ಇನಿವಾತವಾದಾಗ ಇಚ್ಛೆಯಱಿದಾಗ
ನೆನಹಿನ ಕಲೆಗಳನೀಯದಾಗ
ಮುನಿಸ ತಿಳುಹದಾಗ ಮೋಹ ಜಿದ್ದು ಮಾ[ಡುವಾ]ಗ
ಅನುಕೂಲವಿಲ್ಲದಾಗ ಆತಂಕವನಿಕ್ಕುವಾಗ ॥ ೧ ॥

ಕಾಲವಱಿತಿರದಾಗ ಕಲೆಯ ಹೆಚ್ಚಿನದಾಗ
ಕಾಲೋಚಿತವನಱಿಯದಾಗ
ಸೋಲಗೆಲವಿಲ್ಲದಾಗ ಸುಮ್ಮನೆ ಮುನಿಸುವಾಗ
ಲಾಲಿಸಿ ರತಿಕೇಳಿಯಲ್ಲಿ ಲವಲವಿಕೆಯಿಲ್ಲದಾಗ ॥ ೨ ॥

ಬಾಯತಪ್ಪತಾಳದಾಗ ಬಂಧವಱಿತಿರದಾಗ
ನಾಯಕ ವಿಶೇಷವೆಂದು ನಲಿಯದಾಗ
ಕಾಯಜಮರ್ದನ ಕಪ್ಪಿನಿಪತಿ ನಂಜುಂಡ
ರಾಯ ನಿನ್ನಪರಾಧವರರ್ಚೆಯೊಳಗಿಕ್ಕುವಾಗ ॥ ೩ ॥

೨೩

ರಾಗ : ಏರಕಲಕಾಂಬೋದಿ

ಎಂತು ತಾಳುವಳೊ ಎದೆವಿಡಿದು ತನ್ನವನನ್ಯ
ಕಾಂತೆಯೊಳ್ಸನ್ನೆಗೈದುದನು ಸಖಿಯುಸುರೆ ಕೋಪಿಸದೆ ॥ ಪಲ್ಲ ॥

ಸೆಜ್ಜಗಬೀಸಲು ಶಾವಂತಿಗೆಯ ಮಾಲೆಯ ತೋಱೆ
ತುಱುಬ ತೋಱಿಸಲು ಪೆಱೆನೊಸಲ ತೋಱೆ

ಶಿರವ ಬಾಗಿಸಲು ಕರ್ಪೂರವ ತೋಱಿಸಿದ ಈ
ಪರಿಯನೆಲ್ಲವ ಸಖಿಯುಸುರೆ ಕೋಪಿಸದೆ ॥ ೧ ॥

ಕೆಱುನಗೆ ಸೂಸಿ ಕಿತ್ತಳೆಗಾವಿ ಮುಸುಕಿಟ್ಟ
ಮುಱಿದು ನಿಟ್ಟಿಸಲು ಮೊನೆ ಉಗುರ ತೋಱಿ
ಕರವ ಬಾಗಿಸಲು ಕರತಳವಲುಗಿಸಿದ ಈ
ಪರಿಯನೆಲ್ಲವ ಸಖಿಯುಸುರೆ ಕೋಪಿಸದೆ ॥ ೨ ॥

ಮುಂಗೈಯ್ಯಗಿಳಿಯ ಮುದ್ದಿಸಿ ಕರೆಯಲು ಬೆರ
ಲುಂಗರ ತೋಱಿಸಿ ಮಾನವ ತಾಳಿದ
ಶೃಂಗಾರಹರ ಕಪ್ಪಿನಿಪತಿ ನಂಜುಂಡ
ಲಿಂಗನೊಳ್ಸನ್ನೆಗೈದುದ ಸಖಿಯುಸುರೆ ಕೋಪಿಸದೆ ॥ ೩ ॥

೨೪

ರಾಗ : ಮುಖಾರಿ

ಮುಂದುಗಾಣದೊಲುಮೆಯೆಂಬುದನಂಬಿ ಮನ
ನೊಂದ ನೋವ ಕಂಡು ಕಂಡು ತನುವೇಕೆ ನಾಚದೋ ॥ ಪಲ್ಲ ॥

ಸಾಸವೆಯ ಸರಿಭಾಗದೊಳಗರ್ಧಮೋಹಕೆ ವಿ-
ಶೇಷ ಮೇಲುಗಿರಿಗೆಣೆಯಾದು ದುಃಖ
ಮೋಸ ಹೋಗಿ ಎದೆಗೆಟ್ಟು ಸಲೆ ಎಡೆಯಾದ ಮೇಲೆ
ಹೇಸಿಮನ ಹೆಚ್ಚು ಕುಂದ ನೋಡದು ನೋಡಿರಯ್ಯ ॥ ೧ ॥

ಬೆಲ್ಲವನೆ ಮೆದ್ದು ಬೇವ ಸವಿದಂತೆ ಮೋಹವಯ್ಯ
ಅಲ್ಲಿ ಸುಖವಿಲ್ಲವೆಂಬುದನಱಿದಱಿದು
ಕಲ್ಲಿಯೊಳಗಣ ತನಿವಣ್ಣಿನಂತೆ ಕಂದಿ ಕಂದಿ
ಹುಲ್ಗೆಣೆಯಾಗಿ ಮನ ನೋಡಿರಯ್ಯ ॥ ೨ ॥

ಅಂಧಕಾರದೊಳಗಣ ಚಂದ್ರನಂತೆ ತೋಱಿ ತೋಱಿ
ಮಂದಗಮನೆಯರ ಗಾಡಿಗೆ ನಿಲುಕದೆ
ಕಂದುಗೊರಳ ಕಪ್ಪಿನಿಪತಿ ನಂಜುಂಡಲಿಂಗನನೆಂ
ದೆಂದು ಬಿಡದೆ ನೆನೆಯಲು ಮುಕ್ತಿ ಮನವೆ ॥ ೩ ॥

೨೫

ರಾಗ : ಮುಖಾರಿ

ಒಂದನಾಡಲೊಂದ ತಾವೊಲಿದ ಮಾನಿನಿಯರೊಲು
ಕಂದರ್ಪಶಾಸ್ತ್ರದ ಕ್ರಮ[ವು] ಬಲ್ಲರಿಗೆ ‖ ಪಲ್ಲ ‖

ನಕ್ಕರೆವೊಂದು ಸವಿ ಮಮತೆ ಬೆಡಗೊಂದು ಸವಿ
ನಿಂತ ಭಾವವೊಂದು ಸವಿ ನೀಟೊಂದು ಸವಿಯು
ಚೆಂದುಟಿಯದೊಂದು ಸವಿ ಚಿಕ್ಕಮುನಿಸೊಂದು ಸವಿ–
ದಂದದಿ ಬೈಯ್ಯಲೊಂದು ಸವಿ ಛಲವೊಂದು ಸವಿಯು ‖ ೧ ‖

ಮೊಲೆ ಸೋಂಕಲೊಂದು ಸವಿ ಮುದ್ದುನುಡಿವೊಂದು ಸವಿ
ಎಳೆನಗೆಯದೊಂದು ಸವಿ ಇನಿವಾತು ಸವಿಯು
ಸಲೆ ಚನ್ನ ಬಿಂದು ಸವಿ ಸವಿಗಲೆಯದೊಂದು ಸವಿ
ಕಳೆಯೆಂಬುದೊಂದು ಸವಿ ಸರಸವಾಡಲೊಂದು ಸವಿಯು ‖ ೨ ‖

ಸನ್ನೆಮಾಡಲೊಂದು ಸವಿ ಸರಸವಾಡಲೊಂದು ಸವಿ
ಮಚ್ಛರವೊಂದು ಸವಿಯು
ಭಿನ್ನದೋರದೊಂದು ಸವಿ ಬಿಗಿಯಪ್ಪುದೊಂದು ಸವಿ
ಚೆನ್ನ ಕಪ್ಪಿನಿಯರಸ ನಂಜುಂಡಗೆ ‖ ೩ ‖

೨೬

ರಾಗ : ಮುಖಾರಿ

ಮೋಹಗನ್ನವನಿಕ್ಕಿದರೆನ್ನ ಮಗಳೆದೆಗೆ
ಬೇಹನಡಸಿದರಾರೆಂ[ದು ತಿಳಿ]ಯ[ದ]ಮ್ಮ ‖ ಪಲ್ಲ ‖

ಕುಂಕುಮದ ಬೇಳುವೆಯನುಳಿದು ಕಾಮಗೃಹಕೆ
ಮುಂಕೊಳಿಸಿ ತರುಣಿ ಮೈಮಱದೊಱಗಿರೆ
ಭೋಂಕನೆಚ್ಚತ್ತು ಆಲಂಗಿಸಲು ಆಗವನ
ಸೋ[ಂ]ಕಿಯೆ ಮಗಳು ಮೂರ್ಛಿತೆಯಾದಳಮ್ಮ ‖ ೧ ‖

ಕೂರುಗುರ ಕನ್ನಗತ್ತಿಯ ಮಾಡಿ ಬಲ್ಮೊಲೆಗೆ
ಓರೆನೋಟದಲ್ಲಿ ಕನ್ನವನೆ ಸವೆದು
ಸೂಜಿಗೊಂಡವಳ ಚೆಂದುಟಿಯಧರಾಮೃತವ
ಹೀಜಿ ಹಿಪ್ಪೆಯ ಮಾಡಿ ಬಿಸುಟನಮ್ಮ ॥ ೨ ॥

ಹೇಳಲೇನೆರಡೆಜ್ಜೆವಿಡಿದಱಸಿಬರೆ ನಿನ್ನ
ಮೇಲೆ ಬಿದ್ದಡೆ ಕಳಹು ಎನ್ನ ಮಗಳ
ಸೋಲವನು ತಿದ್ದು ಕಪ್ಪಿನಿಯರಸ ನಂಜುಂಡ
ಏಳು ಮನ್ಮಥರಾಯನಾಣೆ ನಿನಗೆ ॥ ೩ ॥

೨೭

ರಾಗ : ಮುಖಾರಿ

ಅಂಗನೆಯರ ಚಿತ್ತವನು ಆರು ಕಂಡವರಿಲ್ಲ
ಮಂಗಳ ಮೂರುತಿ ಪರಶಿವನೊಬ್ಬನಿಗಲ್ಲದೆ ॥ ಪಲ್ಲ ॥

ಕಂಗಳನೋಟವೊಬ್ಬನಲ್ಲಿ ಕಡುಕಾತರವೊಬ್ಬನಲ್ಲಿ
ಸಂಗಸುಖವೊಬ್ಬನಲ್ಲಿ ಸರಸವೊಬ್ಬನಲ್ಲಿ
ಸಿಂಗರ ಸೊಬಗೊಬ್ಬನಲ್ಲಿ ಸಂಗೀತವೊಬ್ಬನಲ್ಲಿ ಜಾಣ್ಮೆವೊಬ್ಬನಲ್ಲಿ ॥ ೧ ॥

ಲಲ್ಲೆವಾತುವೊಬ್ಬನಲ್ಲಿ ಲಾಲಿಪದೈನ್ಯವೊಬ್ಬನಲ್ಲಿ
ಬುಲ್ಲ[ವಣೆ]ವೊಬ್ಬನಲ್ಲಿ ಬಿನ್ನಣವೊಬ್ಬನಲ್ಲಿ
ತಲ್ಲಣಗೊಂಬುದೊಬ್ಬನಲ್ಲಿ ತಕ್ಕೆಚುಂಬನವೊಬ್ಬನಲ್ಲಿ
ಇಲ್ಲದಮೋಹವೊಬ್ಬನಲ್ಲಿ ಇಂಗಿತವೊಬ್ಬನಲ್ಲಿ ॥ ೨ ॥

ಏಣಾಕ್ಷಿಯರ ಮೋಹವೆರವೆಂದು ಸಲೆ ವಿಟರು
ಕಾಣಲರಿಯದೆ ಕಂಡು ಮರುಳಾಗುತಿಹರು
ಪ್ರಾಣರಕ್ಷಿಪ ಸ್ವಾಮಿ ನಂಜುಂಡೇಶನೊಳು
ಜಾಣ ಕವಿಲಿಂಗನೋರ್ವನೀಗಿಳೆಯೊಳಲ್ಲದೆ ॥ ೩ ॥

### ೨೮

[ಎಂ]ತು ಕಳೆವರೊ ಮೋಹಿಗಳು ದಿವರಾತ್ರೆಯನು
ಕಂತುಕಲೆಯಱಿತ ಹೆಂಗಳ ಕುಚವಿಲ್ಲದೆ ? ॥ ಪಲ್ಲ ॥

ಚಿತ್ತದೊಳಗನುಭವದ ಹೊತ್ತನಱಿದೊಂದೊಂದು
ಅರ್ಥಿಮಾತ[ದ]ನಾಡಿ ಮನವನೊ[ಲಿ]ಯಿಸುವ
ಮತ್ತೆ ರತಿಗಲೆಗೀಡಮಾಡಿ ಮುದ್ದಿಸಿ ಕರೆವ
ಮತ್ತಗಜಗಮನೆಯಿಲ್ಲದೆ ಒಂದು ಘಳಿಗೆ ? ॥ ೧ ॥

ಲೀಲೆಯಿಂದೊಂದು ತಪ್ಪಹೊಱಿಸಿ ಪ್ರಿಯನೆಡೆಗೆ
ಬಾಲೆ ತಾ ಮುನಿವಂತೆ ಮುನಿದು [ತಾನು]
ಸೋಲುನೆಲೆಗೊಳಲು ಇನ್ನೇನಮಾಡುವೆನೆನುತ
ಮೇಲಪ್ಪಿ ಚುಂಬಿಸುವ ಲೋಲಾಕ್ಷಿಯಿಲ್ಲದೆ ? ॥ ೨ ॥

ಇನಿತಱಿತು ನಡೆಯಬಲ್ಲೊಡೆ ಹೆಂ:ಗಳೊಳು ಸ್ನೇಹ
XXರಿಗೊಮ್ಮೆ ಅಗಲಿರಬೇಡ ಅಗಲಿದರೆ
ತನುವಿಡಿಯಬೇಡ ಕವಿ ಲಿಂಗನ[ನು]ಮತದಿಂದ ॥ ೩ ॥

### ೨೯

ರಾಗ : ಭೈರವಿ

ಎಂತು ಸೈರಿಸಲು ಬಹುದು ಮೋಹವೆಂಬ
ಚಿಂತೆಯನೆ ಬಿಡಿಸು ಕಂಡ ಶಿವನೆ ॥ ಪಲ್ಲ ॥

ಮಾತುಮಾತಿಗೆ ಶಪಥವನಾಡುವರು
ಸೋತಂತೆ ವಿಟರ ಕೂಡೆ
ಧಾತುಗೆಡಿಸಿ ತೊಲಗುತಿಹರು ಈ
ಪಾತಕಿಯನೇಕೆ ಪುಟ್ಟಿಸಿದೆಯಕಟ ಶಿವನೆ ॥ ೧ ॥

ನಲ್ಲಳೆಂಬ ಪಾಪಿಯ ನಚ್ಚಿ ಈ ಮನಸು
ಹುಲ್ಲೆಯಂತಾಯಿತಲ್ಲ

ಕಲ್ಲೆದೆನಾರಿಯ ಸ್ನೇಹವು ನೀರ
ಮೇಲಣಗುಳ್ಳೆಯಂತಾಯಿತಲ್ಲ ॥ ೨ ॥

ಸಾಕು ಸತಿಯರ ಸಂಗವು ನೊಂದೆ ಮೂ–
ಲೋಕರಕ್ಷಣ್ಯದೊಡೆಯ
ಯಾಕೆ ನಿನ್ನಂತೆ ಮಾಡೆ ಕವಿ ಲಿಂಗಗೆ
ಬೇಕು ಬೇಕು ನಂಜುಂಡಲಿಂಗ ॥ ೩ ॥

## ೩೦

ರಾಗ : ಆಹಿರಿ

ಏನು ಕಾರಣ ಕೋಮಲೆ ಚೆಲ್ವ
ಮಾನಿನಿ ಪರರ್ಗೆ ಚಿಂತಿಸಿದಳು ॥ ಪಲ್ಲ ॥

ಸಸಿಜೊನ್ನ ಮೈ ಸೋಂಕಲು ತಾವರೆ
ಎಸಳ ಹಾಸಿನ ಮೇಲೆ ಒಱಗಿದಳು
ಅಸಿಯಳುನ್ನತ ತಾಪದಿ ಮನ ನೊಂದು
ವಿಷಕಂಠ[ಧರ]ಗೆ ಚಿಂತಿಸಿದಳು ರಮಣಿ ॥ ೧ ॥

ಇಂದುವದನೆಯಂಗದಿ ಚೆಲ್ವ
ಗಂಧಾನುಲೇಪಗ್ಗೆಯ್ಯಳು
ಮಂದಮಾರುತ ತೀಡಲು ನೊಂದಹಿ
ಮಂದರಧರರ್ಗೆ ಚಿಂತಿಸಿದಳು ॥ ೨ ॥

ತನಗೆ ಸತ್ಕವಿ ಲಿಂಗನು ಮುಡಿಸಿದ
ನನೆಗಂಪಿಗಾಱಿಡಿ ಮುಸುಕಲು
ವನವ ಪೊಗಿಸೆ ಕನಲ್ದು ವನಜಾಕ್ಷಿ
ವನದ ವಸಂತಗೆ ಚಿಂತಿಸಿದಳು ॥ ೩ ॥

೩೧

ರಾಗ : ಆಹಿರಿ

ಕಾಯಜ ಮೋಹನ ರಾಜ್ಯವ ಕವಿಲಿಂಗ–
ರಾಯಗೆ ಮಾಗಣೆಯಾಗಿ ಕೊಟ್ಟನಂತೆ ರಮಣಿ || ಪಲ್ಲ ||

ವನಿತೆಯರೊಲುಮೆ ದೇಶಕೆ ನೆಲೆವನೆಯೆಂಬ
ಮನದ ಪಟ್ಟಣಕೆ ಸಲುವ ಪಂಚೇಂದ್ರಿಯದ
ತನುಸೊಬಗಿನ ಹೋಬಳಿಯ ಸವಿಗಲೆಯೂ–
ರನೆ [ಸೇ]ರಿಸಿದನೆಂತಲೆ ಕೋಮಲಾಂಗಿ || ೧ ||

ಹರೆಯದೇಳಿಗೆಯ ಸೊಗಸಿನ ಸುಂಕವ ರತಿ
ದೊರೆವೆಣ್ಣು ಜಾರೆಗಾಣಿಕೆಯೊಳಾಗ
ಹೊರೆ ಮುನಿಸಳಿಯಾಸೆಯೆಂಬ ದಾನ ಮಾನ್ಯವ
ಹೊರತಾಗಿ ಪಟ್ಟಿಗೊಂಬನಂತಲೆ ಮೃಗಾಕ್ಷಿ || ೨ ||

ಕಾವನಾಜ್ಞೆಗೊಳಗಾದ ಭಾವೆಯ ಕಾವನ ಮೈ
ಗಾವಲಾಳುಗಳಾಗಿವೋಲೈಸುತಿರಲು
ಕೋವಿದನು ಕವಿ ಲಿಂಗ ಒಲುಮೆ ಕಪ್ಪವನಿತ್ತು
ಜೀವಿಸುವ ಬಗೆಯ ಭಾವಿಸು ಕಂಡ ರಮಣಿ || ೩ ||

೩೨

ರಾಗ : ಗುಂಟಕಾಂಬೋದಿ

ಗಿಣಿಯು ಪಂಜರದೊಳಿಲ್ಲ ಶಿವಶಿವಾ || ಪಲ್ಲ ||

ಅಕ್ಕ ನಿನ್ನ ಮಾತ ಕೇಳಿ
ಚಿಕ್ಕದೊಂದು ಗಿಣಿಯ ಸಾಕೆ
ಅಕ್ಕನಿಲ್ಲದ ವ್ಯಾಳ್ಯೆಯಲ್ಲಿ
ಬೆಕ್ಕು ಕೊಂಡು ಹೋಯಿತಮ್ಮ || ೧ ||

ಒಂಬತ್ತು ಬಾಗಿಲ ನಡುವೆ
ಇಂಬನಚಿತು ಗೂಡಮಾಡೆ

ನಂಬಿದ ಐವರ ಕೂಡೆ
ಅಂಬರಕ್ಕೆ ಹಾರಿತಮ್ಮ ॥ ೨ ॥

ಕೆಂಡದ ಬೆಟ್ಟದ ಮೇಲೆ
ಅರಗಿನ ಕುಂಭವ ನಟ್ಟುವ ?
ಕಂಬ ಕರಗಿದ ಬಗೆಯ ॥ ೩ ॥

ಅರ್ತಿಗೊಂದು ಗಿಣಿಯ ತಂದು
ಮುತ್ತಿನ ಪಂಜರವ ಹಾಕೆ
ಮುತ್ತು ಕೊಂಡು ಗಿಣಿಯು ತಾನು
ಎತ್ತಲಾಡ ಹೋಯಿತಮ್ಮ ॥ ೪ ॥

ಅಂಗೈಯೊಳಾಡುವ ಗಿಣಿ
ಮುಂಗೈಯ್ಯಲೋದುವ ಗಿಣಿ
ಜಂಗಮರೂಪಿನ ಕವಿ ಲಿಂಗನು ಹೇಳಿದ ಪದ ॥ ೫ ॥

೩೩

ರಾಗ : ಮುಖಾರಿ

ಪಂಚಭೂತಕಾಯವನು ಪಡದುದಕೆ ಫಲವೇನು
ಚಂಚಲಾಕ್ಷಿಯರ ಸಂಗಸುಖವಱಿಯದವಗೆ ॥ ಪಲ್ಲ ॥

ದಿಟ್ಟವೆಳಗಿಂದ ಚೆಲ್ವೆಯರ ಮುಖವನು ನೋಡಿ
ಕಟ್ಟುಮಾಡಿ ನಿಲಿಸಿ ಸಂಚರಿಪ ಮನವ
ಘಟ್ಟಿಗೊಳಿಸಿ ಏಣಾಕ್ಷಿಯರ ನೋಡದ ಸವಿಯ
ಬಿಟ್ಟ ದೇಹಿಗಳಿಗೆ ಇಹಪರವಿಲ್ಲವಯ್ಯೋ ॥ ೧ ॥

ಕೋಮಲಾಂಗಿಯರ ಮೊಗ್ಗೆಮೊಲೆಯೊಳಾಲಿಂಗನದಿ
ಸೋಮ ಸೂರ್ಯನ ತೇಜಕಿಂದ ಮಿಗಿಲು
ಭೂಮಿ ಭಾರಕರಾಗಿ ಹುಟ್ಟಿ ನೀವು ಕೆಡಬೇಡ
ಕೋಮಲೆಯ[ರ]ನುಸೋಂಕೆ ಕೈವಲ್ಯವಹುದು ॥ ೨ ॥

ಜಾತಿನಾಯಕಿಯ ಗಳೆರವದ ಮಂತ್ರವ ಕೇಳಿ
ಪಾತಕವ ಕಳೆದು ಶುಚಿರ್ಭೂತರಾಗಿ
ಸೋತು ಚವುರಾಸಿತಿ ಬಂಧದಲಿವೊಡಗೂಡಿ
ನೀತಿಶಾಸ್ತ್ರವ ಕೇಳಿ [ಕವಿ ಲಿಂಗನ] ಮತವಿಡಿದು ॥ ೩ ॥

೩೪

ರಾಗ : ಮುಖಾರಿ

ಮನಸನೋಯಿಸಿ ಮೋಹವಱಿಸುವರೆ ಬಲ್ಲವರು
ಕನಸಿನೊಳಗಣ ಗಂಟು ಕನ್ನಡಿಯ ಗಂಟು ॥ ಪಲ್ಲ ॥

ಇಂದ್ರಜಾಲವನು ತೋಱಿದರೆ ಮನ ತಿರುಗುವದೆ
ಚಂದ್ರನೊಳಗಿನ ಎರಳೆ ಇಳಿದುಬಹುದೆ ಸಂಜೆ
ಯಾದಮೇಲೆ ಸೂರ್ಯನ ಪ್ರಭೆಯನಱಿಸುವರೆ
ವೃಂದಾವನವುದಯಿಸದೆ ಶುಕ ಪಿಕಗಳಿಹವೆ ? ॥ ೧ ॥

ಮಲ್ಲಿಗೆಯ ಪುಷ್ಪ ಕಂದಿದರೆ ಪರಿಮಳವುಂಟೆ
ಚೆಲ್ವ ಕ್ಷೀರದೊಳಾಮ್ರವೆಱೆಯೆ ಸವಿಯೆ
ಸಲುವ ಪರಿಮಳಕೆ ಹರಳೆಣ್ಣೆ ಬೆರೆಯಲು ಸೊಗಸೆ
ಝಲ್ಲಿ ಉರಿಯೊಲು ಬಿದ್ದತೆಱನಂತೆ ಕಾಂತೆ ॥ ೨ ॥

ಸಾಣೆಯೊಳು ಮುತ್ತ ಕೊಯ್ದರೆ ಮುನ್ನಿನಂತಿಹುದೆ ?
ವೀಣೆಕಸ್ತುರಿಯಗ್ನಿ ಸೋಂಕಲುಂಟೆ
ಕ್ಷೀಣದೈವದ ಗಂಡ ನಂಜುಂಡೇಶನ ಕೃಪೆಯಿಂದ
ಜಾಣ ಕವಿ ಲಿಂಗ ಪೇಳಿದನು ಚಿತ್ತದಕಳಂಕ ॥ ೩ ॥

೩೫

ರಾಗ : ಮುಖಾರಿ

ಮೋಹಾಗಮವನಱಿದು ನಡದರಿಹಪರದೊಳಗೆ
ಮೋಹಿರಾಣುವೆಗೊಡೆಯರಾಗಬಹುದೈಯ್ಯ ॥ ಪಲ್ಲ ॥

ನೋಡಿದರೆ ಎವೆಯು ಮಿಡುಕುವೋಗುವುದು ಸವಿಮಾತ
ನಾಡಿದರೆ [ತೀಡಿ] ಕಿಡಿ ಮಸ[ಗಿ] ಹರವುದು
ಪಾಡಱಿದು ಪೊಂಬೊಗರಿಮೊಲೆಯೊಳಾಲಿಂಗನವ
ಮಾಡಿದರೆ ಮೈಯ್ಯ ಬಳಲಿಕೆ ಪೋಪುದಯ್ಯ ॥ ೧ ॥

ಮೂಡುವೆಱೆದುಟಿಯನುಣಲು ನಾಲಗೆಯ ಜಡ
ವೋಡುವುದು ಸಮರತಿಯ ಲೀಲೆಯಿಂದ
ಕೂಡುವಾ ಸಮಯದಲಿ ನಸುಗಂಪು ಮೈಯ್ಯ
ನೀಡದೆ ನಾಸಿಕದ ಸೊಗಡಿಕೆ ಪೋಪದಯ್ಯ ॥ ೨ ॥

ಎದೆದಾವರೆಯಲ್ಲಿ ಮುಳುಗಿದ್ದ ಜವ್ವನವ ತಂ
ದಿದಿರಿನಲ್ಲಿ ಪಂಚೇಂದ್ರಿಯದ ನೇಮಕೆ
ಮುದವನುಣಿಸುವ ಮದನಮೋಹನ ಕಳಾಲೋಲ
ಚದುರ ಕವಿ ಲಿಂಗರಾಯನು ಬಲ್ಲನೈಸೆ ॥ ೩ ॥

೩೬

ರಸಭರಿತದ ಕಾಯಿ
ರಮಣಿಯರ ಕಾಯಿ
ಶಿಶುಗಳೂಟದ ಕಾಯಿ ಶೃಂಗಾರದ ಕಾಯಿ ॥ ಪಲ್ಲ ॥

ಬಿಡದಿಹದು ಜೋಡಾಗಿ ಬೀಜವಿಲ್ಲದ ಕಾಯಿ
ಬಡನಡುವು ಬಳುಕುತಿರೆ ಬೆಳವ ಕಾಯಿ
ಎಡೆಯೆಡೆಗೆ ರಮ್ಯದೊಳು ಎಲೆ ಹುಟ್ಟಿಲ್ಲದ ಕಾಯಿ
ಪಿಡಿಯಲಡಗುವುದು ಬೆಲೆ ಹೆಚ್ಚಾದ ಕಾಯಿ ॥ ೧ ॥

ಕಪ್ಪುದೊಟ್ಟಿನ ಕಾಯಿ ಕಾಮವೃಕ್ಷದ ಕಾಯಿ
ಕುಪ್ಪಸದೊಳೆಸೆವ ಕೋಮಲದ ಕಾಯಿ
ತಪ್ಪದೆ ವಿಟರೆದೆಗೆ ತಾಳಲಾರದ ಕಾಯಿ
ಅಪ್ಪಿಕೊಂಬುವರಿಗನುವಾದ ಕಾಯಿ ॥ ೨ ॥

ಅಂಗದೊಟ್ಟಿನ ಕಾಯಿ ಅಂತರಂಗದ ಕಾಯಿ
ಅಂಗಜನ ಕೇಳಿಗನುವಾದ ಕಾಯಿ
ಸಂಗೀತಲೋಲ ಕವಿ ಲಿಂಗನಾಡುವ ಕಾಯಿ
ಅಂಗನೆಯರೆದೆಯ ಮೇಲಿರುವ ಕಾಯಿ ॥ ೩ ॥

೩೭

ಲಿಂಗಪೂಜೆಯ ಮಾಡದೆ ನೊಂದೆ ನೊಂದೆ
ಹೆಂಗಳೊಳಗತಿ ಸ್ನೇಹದಿ ಶಿವನೆ ॥ ಪಲ್ಲ ॥

ಹತ್ತು ಹನ್ನೊಂದೊರುಷಕೆ ನಾನಿರ್ದೆ
ಚಿತ್ತ ಪಲ್ಲಟವಾಗದೆ ಶಿವನೆ
ಮತ್ತೆ ಹದಿನಾರೊರುಷಕೆ
ಮನ್ಮಥನ ಕತ್ತಲೆಗೊಳಗಾದೆನೊ ಶಿವನೆ ॥ ೧ ॥

ಕಲೆನೆಲೆಗೆ ಮೈಯ್ಯಾಂತೆನೊ ಕಾಮಿನಿಯರ
ಕಡೆಗಣ್ಣಬಲೆಗೆ ಸಿಲ್ಕಿ ಶಿವನೆ
ಬಲುಸ್ತನವು ಮೈಸೋಂಕಲು ಲಲನೆಯರ
ಹಲವು ಸವಿಮಾತಿಗಾಗ ಶಿವನೆ ॥ ೨ ॥

ರತಿಗಲೆಗೆ ಮತಿಗೆಟ್ಟನೊ ಚಂದುಟಿಯರ
ಹಿತವು ತಲೆಗೇಱಿ ಬಿಡದೊ ಶಿವನೆ
ಅತಿಶಯದಿ ಸಲಹೆನ್ನನು ಕವಿ ಲಿಂಗಗೆ
ಕ್ಷಿತಿಯೊಳಗೆ ಗತಿಯ ತೋಱೋ ಶಿವನೆ ॥ ೩ ॥

೩೮

ರಾಗ : ದೇಶಿ

ವ್ರತಗೆಟ್ಟು ಬಹಳ ದಿನವಾಗಿ ತರಳೆಯು ಪೋಗಿ
ರತಿಯೊಳಗೆ ಆತ್ಮನಿಗೆ ಹಿತವಾದುದಿಲ್ಲ ॥ ಪಲ್ಲ ॥

ಚುಂಬನದ ಸೈಯಿರಣೆಯುಯೆಂಬ ನುಡಿಯಿನಿತಿಲ್ಲ
ಸಂಭ್ರಮದ ಕಲೆ ನೆಲೆಯು ಸರಸವಿಲ್ಲ
ಮುಂಬರಿದ ಮೋಹವಿಲ್ಲ ಮೋಹಿಸುವ ಗುಣವಿಲ್ಲ
ವಿಂಪಾದ ದೈನ್ಯ ಲಲ್ಲೆರಸಗಳಿಲ್ಲದವಳ ॥ ೧ ॥

ನಸುಮುನಿವ ಬೆಡಗಿಲ್ಲ ನಂಬಿಸುವ ಹದನಿಲ್ಲ
ಪೊಸಬಗೆಯ ಉಪಚರಣೆ ಶ್ರುತಗಳಿಲ್ಲ
ಪಸರಿಸುವ ನೋಟದಲೆಸೆವ ಸನ್ನೆಗಳಿಲ್ಲ
ಹಸಗೆಟ್ಟ ಗುಣದವಳ ನೀ ಹಾರುವರೆ ಆತ್ಮ ॥ ೨ ॥

ಗರಿಗರಿಕೆಯುಳ್ಳ ಗಳರವದ ಗಲಭೆಗಳಿಲ್ಲ
ಹೊರಳು ನುಡಿಯು ತೊದಲು ನುಡಿಯು ಮೃದುಗಳಿಲ್ಲ
ಸರಸ ಸವಿಗಾರ ನಂಜುಂಡೇಶಗೆಣೆಯಿಲ್ಲ ಇಂತು
ಅರೆಮೋಹದವಳು ಕವಿ ಲಿಂಗಗೆಣೆಯಿಲ್ಲ ॥ ೩ ॥

೩೯

ರಾಗ : ದೇಶಿ

ಸತಿಯರೆಲ್ಲರು ಬಲು ಜಾತ್ರೆಯ ನೆರದರು ನೋಡಿರಮ್ಮ
ರತಿದೇವತೆಗೆ ಪರಕೆಗೊಡಲನುವಾಗಿ ಬಂದರಮ್ಮ ॥ ಪಲ್ಲ ॥

ಕಂದದ ಮಾಂದಳಿರಿನ ಬೇವಿನುಡಿಗೆಯನುಟ್ಟರಮ್ಮ
ಕೆಂದಾವರೆ ಪೂವಿನ ಪಡಲಿಗೆಗಳ ಪೊತ್ತರಮ್ಮ
ಅಂದವಾದ ನೈದಿಲ ದೀವಟಿಗೆಗಳೆಂದರಮ್ಮ
[ಚಂದ]ದಂದದ ಪರಿಮಳ ಕುಂಕುಮಧೂಳಿ ತುಂಬಿತಮ್ಮ ॥ ೧ ॥

ಮೊಗ್ಗೆ ಮಲ್ಲಿಗೆ ಶಂಖದಮಣಿ ತೊಡಿಗೆಯ ತೊಟ್ಟರಮ್ಮ
ಲಗ್ಗೆಗೊxxx ಚೆಳ್ಳುಗುರಿ[ನ] ಸಿಡಿಗೆ ಬೆನ್ನಿತ್ತರಮ್ಮ
ಸುಗ್ಗಿಯ ಮುಡಿವಾಳದ ಹಗ್ಗ ಹುರಿನೇಣಾಯಿತಮ್ಮ ॥ ೨ ॥

ನೆರದಿರ್ದ ನಿರ್ಮೋಹಿಗಳೆಂಬ ಕುಱಿವಿಂಡ ತಗ್ಗ[ಡಿ]ದರಮ್ಮ
ಥರಥರದಲಿ ಕಾವದೇವ ಝಂಕಡಿದರಮ್ಮ
ಸುರತ[ಕಿ]ಮ್ಮಡಿ ಕವಿ ಲಿಂಗನೊಲುಗಳಾದವಮ್ಮ
ಪರಕೆಗೊಟ್ಟೆಱಗಿದರಂಗನೆಯರು ರತಿದೇವಿಗಮ್ಮ ॥ ೩ ॥

೪೦

ರಾಗ : ಮುಖಾರಿ

ಸಾಕು ಸಾಕು ಮೋಹವಿನ್ನೇಕೆ ಬಱಿದೆ ಜೀವಿಪುದು
ರೇಖೆಗೂಡಿದವಳನಗಲಿದ ಬಳಿಕ ಶಿವನೆ ॥ ಪಲ್ಲ ॥

ಆವಳದೊಂದು ಗುಣವನು ತನ್ನ ಮನದೊಳಗೆ
ಸವಿಮಾಡಿ ನೆನನೆನದು ಬೆಂದು ಬೇಗೆವೊರಿದು
ಕವಿದೆಸುವ ಮದನಬಾಣಕೀಡಾಗಿ ಬಾಳ್ವುದೆಱಿಂದ
ತವೆ ಮುನ್ನ ತಾನೆಯಳಿವುದು ಲೇಸು ಶಿವನೆ ॥ ೧ ॥

ಆವಾವಪರಿಯಲಾದರು ತನುವನೆಡೆಗೊಂಬ
ಸಾವನಾದರು ಒಮ್ಮೆ ನಿಲಿಸಬಹುದು
ಕೋವಿದಳ ಮೊಗವ ಕಾಣದೆ ದೆಸೆಗೆ ಬಾಯ್ಬಿಡುವ ಈ
ನೋವನೆಂತು ಸೈರಿಸಬಹುದೊ ಶಿವನೆ ॥ ೨ ॥

ಇನಿತಱಿತು ನಡೆಯಬಲ್ಲರೆ ಹೆಂಗಳೊಳು ಸ್ನೇಹ
ವ[ನ]ನುಗೂಳಿಸಬಹುದು ಸಲೆ ಬೇಕಾದರವಳ
ಕನಸಿನೊಳಗೊಮ್ಮೆ ಅಗಲಿರಬಹುದೆ ಅಗಲಿದರೆ
ತನುವಿಡಿಯಬಹುದೆ ಕವಿ ಲಿಂಗನ ಮನವಿಡಿದು ॥ ೩ ॥

೪೧

ರಾಗ : ಮುಖಾರಿ

ಮದನತಿಲಕವನಱಿವ ಚದಿರ ಚಂದಿರಮುಖಿಯ-
ಳೆದೆಯ ಮಧ್ಯದಲಿ ಅರಮನೆಯಾಗಬೇಕು ॥ ಪಲ್ಲ ॥

ತರಳ ಮೃಗನೇತ್ರೆ ಮದಗಜಗಮನೆ ಬೆಡಗಿನಲಿ
ಅರಳ ಕೆಂದಾವರೆಯ ಮುಖದಕಾಂತೆ
ಹರಿಣ ಹೆಜ್ಜೆಯ ಪೋಲ್ವ ಮದನಮಂ–
ದಿರದವಳ ಇರುಳು ಹ[ಗ]ಲೆನ್ನದಿರಬೇಕು ಕುಚವಿಡಿದು ॥ ೧ ॥

ಬಡನಡುವು ಕುಂಭಸ್ಥಳವ ಪೋಲ್ವ ಪೊಜವಾಜ
ನುಡಿಗಿಳಿಯ ಪೋಲ್ವ ನುಣ್ಗದಪಿನವಳ
ಜಡೆವಿಡಿದು ಮುಖನೋಡಿ ಉಭಯ ಚುಂಬನವಿತ್ತು
ಕಡುಮನದ ಗಳರವದಿಂದ ॥ ೨ ॥

ಕಾಸಿ ಬೆಚ್ಚಂತೆ ಬಿಗಿಯಪ್ಪಿ ಚಂದುಟಿಯೂಡಿ
ಪೂಸರನ ಆಗಮದ ಸುಖದೊಳರಿಸಿ ವಿ–
ಲಾಸದಿಂದಿರುವ ಸುಖ[ವದ] ಪೇಳೆ ಕವಿ ಲಿಂಗ
ಈಶ ನಂಜುಂಡೇಶನೊಲಿದಡಿರಬಹುದು ॥ ೩ ॥

೪೨

ರಾಗ : ಮುಖಾರಿ

ಎಲ್ಲಿಯ ಮೋಹವಯ್ಯೋ ॥ ಪಲ್ಲ ॥

ಬೇಲದ ಮರದಲ್ಲಿ ಬಿಲ್ಲಮಾಡಿದರುಂಟೇ
ಜಲ್ಲಿದುಂಬಿಯ ಹೆದೆಗೆಯ್ದುದುರುಂಟೆ
ಮಲ್ಲಿಗೆಯರಳಲಿಟ್ಟರೆ ಸತ್ತವರುಂಟೆಯಿಂತು
ಪೊಲ್ಲಮನುಜರ ಮಾತು ನಿಜವುಂಟೆ ರಮಣಿ ॥ ೧ ॥

ಕತ್ತಲೆಯನು ತುಂಬಿ ಹೊತ್ತು ನಡಸಿದರುಂಟೆ
ಸುತ್ತುವ ಸೂರ್ಯನ ಕುಲುಹಿಟ್ಟರುಂಟೆ
ಸತ್ತ ಹೆಣನ ಕೈಯ್ಯ ಕಥೆಯ ಕೇಳಿದರುಂಟೆ
ಅತ್ತ ಕಣ್ಣೀರಲ್ಲಿ ಕೆರೆ ತುಂಬಲುಂಟೆ ॥ ೨ ॥

ಹರಿವಾಣ ಹಸಿಯಿತೆಂದುಣಲಿಕ್ಕಿದವರುಂಟೆ
ಪರಿಪರಿಯ ವೃಕ್ಷಕ್ಕೆ ನೆರಳುಂಟೆ

ತರಳಾಕ್ಷಿಯರ ಮೋಹ ನಿಜವುಂಟೆ ಕವಿ ಲಿಂಗ–
ನರಸು ನಂಜುಂಡನಿಗೆ ಲಯವುಂಟೆ ರಮಣಿ ? ॥ ೩ ॥

೪೩

ರಾಗ : ಮುಖಾರಿ

ಕಾಯ ಕಾಣದಿಹ ತಂಗಾಳಿ [ಸಾ]ರಿ ಬಂದೀ
ಗಾಯತಾಕ್ಷಿಯನಪ್ಪಿಕೊಳ್ಳೆ ॥ ಪಲ್ಲ ॥

ಕಳುವೆಳ್ ಕೂಗಲೊಂದು ತಾವರೆ–
ಯೊಳು ಮಲಗಿರಲೊಲ್ಲದೆ
ಎಳೆದುಂಬಿಗಳ ಧ್ವನಿಯ ಕೂಡಿಕೊಂ–
ಡಳುತ ಬಂದಿತು ಮನೆಗೆ ॥ ೧ ॥

ಅಲರಡಿಯೊ[ಳು] ಪೊರಳೆ ಮಕರಂದ
ಜಲಧಿಕಂಬನಿ ಬಟ್ಟಾಡೆ
ಹೊಲಬುಗಾಣದೆ ಕಸ್ತೂರಿ ಕೆಸ
ರೊಳು ನಿಲುನಿಲುತ ಬಂದಿತು ॥ ೨ ॥

ಮಡದಿರನ್ನಳೆ ಮುಂಡಾಡೆ ಕವಿಲಿಂಗ
ನೊಡೆಯ ಕಪ್ಪಿನಿಪತಿಯ
ಒಡಗೂಡಿದಂತ್ಯದಲ್ಲಿ ಬಳಲ್ದಪೊಂ–
ಗೊಡಮೊಲೆಗಳ ಮೇಲಿಟ್ಟು ॥ ೩ ॥

೪೪

ರಾಗ : ಆಹಿರಿ ಆಟತಾಳ

ಪ್ರಿಯವಿಲ್ಲದ ಹೆಂಗಳ ಸೋಂಕಲು ಚೆಲ್ವ
ಮಾಯದ ಲೆಪ್ಪದಬೊಂಬೆಯಪ್ಪಿದಂತೆ ರಮಣಿ ॥ ಪಲ್ಲ ॥

ಮುಂಚುವ ಕಾತರದಿಂದ ಮುಂದುವರಿವನ ಕಂಡು
ಮಿಂಚುವ ಚಂದುಟಿಯ ಸವಿಯನುಣಿಸದೆ

ವಂಚಿಸಿ ಮೈಗೊಡದ ಹೆಂಗಳಕೂಟ ಹಸಿದೊಡೆ
ಕಂಚಿಯ ಕಗ್ಗಾಯ ಗಿಳಿ ಕಚ್ಚಿದಂತೆ ರಮಣಿ ॥ ೧ ॥

ಸಾರಿದ ನಲ್ಲನ ಕಂಡು ಸವಿ ನುಡಿಯಿಂದ ತನ್ನ
ತೋರಮೊಲೆಗಳೊಳೆದೆಯನಿಱಿದು
ಓರೆಮೊಗವನಿಟ್ಟು ವಂಚಿಸೆ ಹೆಂಗಳ ಕೂಟ
ನೀರಿನಲ್ಲಿ ಕೈಯ್ಯನದ್ದಿ ಸವಿದಂತೆ ರಮಣಿ ॥ ೨ ॥

ಸಸಿಮುಖಿಯರ ಬೇಟ ಹಸನಾಗಿ ದೊರಕೊಂಡು
ಬೆಸುಗೆಗೊಂಬುದು ಪೂರ್ವಸುಕೃತವೈಸೆ
ಅಸಮ ಸತ್ಕವಿ ಲಿಂಗನೊಡೆಯ ಕಪ್ಪಿನಿಪತಿ
ವಿಷಕಂಠನೊಲ್ಲದಲ್ಲದಿಲ್ಲ ರಮಣಿ ॥ ೩ ॥

೪೫

ರಾಗ : ಮುಖಾರಿ

ಹಾ ಹಾ ಹಾಗೆ ಹಾಗೆ ಹೇಗೆ
ನೀ ಹೀಗೆಂದುಸುರೆಲೆ ರಮಣಿ ॥ ಪಲ್ಲ ॥

ಕಿವಿಯಲ್ಲಿ ಕೇಳದೆ ಕಣ್ಣಲ್ಲಿ ಕಾಣದೆ
ತವಕದ ರತಿ ವಿರತಿಗಳಿಲ್ಲದೆ
ಇವಳ ವಿರಹದುರಿಯೊಳಗಾಳಿ ಮುಳಿಗಿಸಿ-
ದವರಾರೆಲೆ ಸಖಿಯೆ ಸಖಿಯ ಸಖಿಯೆ ॥ ೧ ॥

ಮೋಹವಿಲ್ಲದೆ ಮುನಿಸಿಲ್ಲದೆ ಬಲು ಸಂ-
ದೇಹಾಸ್ಪದವಿನಿತಿದಿರದೆ ಹೋ ಹೋ
ಇವಳಿಗೆ ಪ್ರಳಯ ಬಂದಿದೇಕೋ
ಈ ಸಾಹಸ ತಾನದು ಕನಸೋ ಮನಸೋ ॥ ೨ ॥

ಮಾಣದೆ ಕವಿ ಲಿಂಗನೊಡೆಯ ಕಪ್ಪಿನಿಪತಿ
ತಾನವಳೊಂದಾದ ತರಹರವ
ಏನೆಂಬೆ ಮೈಯಿಲ್ಲದವನಿಂದ್ರಜಾಲದೊಳೀ
ನೇಹವದವರಿಗೆ ಮೊದಲೋ ಕಡೆಯೋ ॥ ೩ ॥

೪೬

ರಾಗ : ದೇಶಿ

ಅವಳವಗೆ ಸಂಧಾನವದು ಎನಗೆ ಕಾಣಿಸದು
ಹವಣ ನೀನೆನಗುಸುರೆ ಹರಿಣಾಯತಾಕ್ಷಿ || ಪಲ್ಲ ||

ಕರವಣೆಯ ಸನ್ನೆಯಲಿ ಬೆರಳಮುದ್ರಿಕೆಯ
ತರುಣಿ ತನ್ನವನೆಡೆಗೆ ಕಳುಹಲದನು
ಕರಪುಟ[ದೊಳಿರಿಸಿ] ಅರಳಕೊಟ್ಟು ಕೆಳದಿಯ ಕೈಯ್ಯ
ಮರಳಿ ಕಳುಹಿದ ಪರಿಯ ಮಡದಿ ನೀನಱುಹೆ || ೧ ||

ನೀಲಕುಂತಳೆ ಪತಿಗೆ ನೀಲದಸರವ ಕಳುಹೆ
ಕಾಲೋಚಿತವುಯೆಂದು ಕಡೆಯಲ್ಲಿಹುದೊ
ಬಾಲೆಗೀ ಸರವೆಂದುಯಿತ್ತು ಕಳುಹಿದ ಪರಿಯ
ಸೋಲ ಗೆಲವೆಂದು ನೀ ಸೂಚಿಸೆಲೆ ರಮಣಿ || ೨ ||

ಭಾವೆ ಮುತ್ತಿನಸರವ ಭಾವದಿಂದಲಿ ಕಳುಹೆ
ಭಾವದಿರವಱಿತೊಡನೆ ನಗುತ ಬಂದು
ಕೋವಿದ ಸು ಕವಿ ಲಿಂಗನೊಡೆಯ ಕಪ್ಪಿನಿಯರಸ
ದೇವ ನಂಜುಂಡ ತನ್ನಿನೆಯಳನು ನೆರದ || ೩ ||

೪೭

ಆವ ಭೋಗವು ಸಟೆ ಮತ್ತಾವ ಯೋಗದ ಹವಣು
ನಾರಿಯರ ಕೂಡೆ ಸುರತದೊಳಿರ್ಪ ಸುಖಕೆ ? || ಪಲ್ಲ ||

ಅಚ್ಚಕೆಂಪಾಗಿ ತನುಲತೆ ಮೋಹದವಳಾಗಿ
ಇಚ್ಛೆಯುಳ್ಳವಳಾಗಿ ಇನಿದುಟಿಯಳಾಗಿ
ಮೆಚ್ಚಿ ಬರುವಂಥ ಪ್ರಾಯದ ಗಲ್ಲವ ಪಿಡಿದು
ಕಚ್ಚುಗೊಂಡಿರ್ದುವೊಚ್ಚೊತ್ತಿರ್ಪ ಸುಖಕೆ || ೧ ||

ಕಂಕಣ ನಳಿತೋಳ ತೆಗತೆಗದು ಕಡೆಗೊತ್ತಿ ತ.
ನ್ನಂಕದೊಳು ಬಿಗಿಬಿಗಿದು ಅಪ್ಪುಗೊಂಡು
ಬಿಂಕದಿಂದಲಿ ಚಂದುಟಿಯ ಸವಿದು ಸಂತಸಗೊಂಡು
ಮನತಾಗಿ ಮನಸೋತು ಮರುಳಾಗುವದಕೆ ॥ ೨ ॥

ಅಡಕೆ ಕಪ್ಪುರದೆಲೆಯ ಮಡಿಕೆಯನು ಕೈಗಿತ್ತು
ಕಡಿದು ಮಿಕ್ಕುದನಾಗ ಕೂಡೆ ಸವಿದು
ಮಡದಿಯನೊಡಗೂಡಿ ಮನ್ನಿಸಿದ ಕವಿ ಲಿಂಗ
ನೊಡೆಯ ಕಪ್ಪಿನಿಯರಸ ಕಡುಜಾಣನಲ್ಲವೆ ? ॥ ೩ ॥

೪೮

ರಾಗ : ಮುಖಾರಿ ಆದಿತಾಳ

ಎವೆಯಲುಗದೆ ನೋಡುವಾಗಲೊಳ್ಳಿತೊ ಮೋಹ
ಸವಿಯಿಂದ ಲಲ್ಲೆಗರೆವಾಗಲೊಳ್ಳಿತೊ
ಹವಣಅಿತು ಹತ್ತೆ ಸಾರಿ ಬಂದಾಗಲೊಳ್ಳಿತೊ
ಮೋಹವುಳ್ಳವರು ಪೇಳಿ ಬಲ್ಲವರು
ಸಹಜದಲಿ ರಮಣಿಯರ ನೆರದ ಕೋವಿದರು ॥ ಪಲ್ಲ ॥

ಒಡವೆರಸಿ ಕುಳಿತಿದ್ದಾಗಲೊಳ್ಳಿತೊ
xxxxವಾಗಲೊಳ್ಳಿತೊ
ಮಡದಿಯರ ಕುಚವ ಪಿಡಿದಲುಗುವಾಗಲೊಳ್ಳಿತೊ
ಕಡುಸೊಬಗಿನಿಂದ ಬಿಗಿದಪ್ಪುವಾಗಲೊಳ್ಳಿತೊ ॥ ೧ ॥

ಸೊಕ್ಕಿದಕ್ಕೆಯ[ನಿನಿ]ಯ[ಳ]ಧರಾಮೃತವನುಂಬಾಗಲೊಳ್ಳಿತೊ
ಕಕ್ಕಸ ಕುಚಗಳುರಕೆವೊತ್ತುವಾಗಲೊಳ್ಳಿತೊ
ಉಕ್ಕುವಾತುರವುಬ್ಬಿ ನಲಿವಾಗಲೊಳ್ಳಿತೊ ॥ ೨ ॥

ಘನಸುಖವಡೆದ ಮಧ್ಯದಲೊಳ್ಳಿತೊ
xxxಯದೇನು [ಬ]ಳಿಕೆಯಾವುದು ?

ಮುಯ್ಗೆ ಮುಯ್ಯಾವುದು ಸುಲಭ ಸತ್ಕವಿ ಲಿಂಗನೊಡೆಯ
ಕಪ್ಪಿನಿಯರಸ ಲಲನೆಯರಿಗಾನಂದ ರೂಪಾದನಮ್ಮ ॥ ೩ ॥

೪೯

ರಾಗ : ದೇಶಿ

ಕೋಮಲೆಯರ ಮೋಹ ಮೂಱಿತೆಱನೆಂಬುದನು
ಕಾಮಕಲೆಯನು ಬಲ್ಲ ಕೋವಿದರು ಕೇಳಿ ॥ ಪಲ್ಲ ॥

ಕಮಠ ತಾನುಂಡು ನೆನಹಿನ ಕುಟುಕ ಮಱಿಗಳಿಗೆ
ಕ್ರಮದಿಂದಲೀವಂತೆ ಪ್ರಾಣೇಶನ
ಮಮತೆಯೊಳು ನೆನೆದು ಮೂರ್ಛಿತಭಾವ ರಸವಾಗಲು
ರಮಣಿಯರಿಗಿದು ತಾನೆ ಉತ್ತಮದ ಮೋಹ ॥ ೧ ॥

ಜಲದೊಳಗೆ ಮತ್ಸ್ಯವಾಹರಗೊಂಡು ಮಱಿಗಳಿಗೆ
ಚೆಲುವ ನೋಟದಿ ಕುಟುಕನೀವನ ತೆಱದಿ
ಲಲನೆ ತಾನಿನಿಯನಂಗವ ಕಾಣುತಾಕ್ಷಣದಿ
ನಲಿವುತಿಹುದೀಗ ಮಧ್ಯಮದ ಮೋಹ ॥ ೨ ॥

ಕೞುಮೊಲೆಯನುರೆಸುತ್ತಿರಲು ಪಶು ತೋಱಿದೀವ
ತೆಱದಂತೆ ಎಱಗಿ ಕೂಟಾಡುವಲ್ಲಿ ಅಧಮ ಮೋಹ
ನೆಱಿ ಜಾಣ ಕವಿ ಲಿಂಗನೊಡೆಯ ಕಪ್ಪಿನಿಯರಸ
ತರುಣಿಯರ ಮೋಹವನು ಪೇಳ್ದ ಕ್ರಮದಿಂದ ॥ ೩ ॥

೫೦

ರಾಗ : ಪಹಡಿ

ನೀ ಮುನಿದವೇಳೆಯನಱಿದು ಬಲು ಬೇಹು ಸಂದು
ಕಾವ ನನೆಗೋಲ ಪರಸ್ಥಾನವ ಮಾಡಿದನಂತೆ ॥ ಪಲ್ಲ ॥

ಮಾವಿನ ಕೆಂದಳಿರ ಗುಡಾರ ಹೊಯಿದು ಹೊಂಗೇದಗೆ
ಹೂವಿನ ಗೆರೆಯ ಬೇಲಿಯ ಹಾಕಿ ಉಕ್ಕಡಕೆ

ಕಾವಲಾಗಿ ಕೋಗಿಲಂಚೆಗಳನಿಟ್ಟು ನಿನ್ನ ಬೆಳಗ
ಜಾವದಲ್ಲಿ ಹೊರಬೀಡ ಬಿಟ್ಟನಂತೆ ರಮಣೀ ॥ ೧ ॥

ಗಿಲಿ ವಾಜಿಗಳಿಗಶೋಕೆಯ ತಳಿರ್ವಕ್ಕರಿಕೆ
ಎಳೆವಾಳೆ ಸುಳಿಯೆಲೆ ಜಯವತ್ತಿ ಮುಂದೆ
ದಳವಾಯಿ ವಸಂತ ಚೆಂದಿರನ ಬೆಳುಕಿನಲ್ಲಿ
ಇಳೆಗೆ ಮನ್ಮಥನು ಬಂದಿಹನಂತೆ ರಮಣಿ ॥ ೨ ॥

ತರುಣಿ ನೀ ಪೋಗಿ ಮುನಿಸ ಬಿಟ್ಟು ನಿನ್ನವನ
ಚರಣಕೆಱಗಿ ದೈನ್ಯವ ಮಾಡು ಬೇಗ
ಸ್ಮರರೂಪ ಕವಿ ಲಿಂಗನೊಡೆಯ ನಂಜುಂಡೇಶನ
ಇರುಳು ಹಗಲು ನೆರೆ ಹಿಂಗದಿರು ರಮಣಿ ॥ ೩ ॥

೫೧

ರಾಗ : ಆಹಿರಿ

ಸುರಗಿಯನೊಡ್ಡಿ ಬೀಳಲುಬಹುದಂಜದೆ
ಅರೆ ಸಿರಿಯವರ ನುಡಿಸಬಾರದು ಶಿವನೆ ॥ ಪಲ್ಲ ॥

ಹಸಿದ ಹುಲಿಯ ಕೆಣಕಲುಬಹುದಂಜದೆ
ವಿಷವನು ತೆಗೆದುಕೊಳ್ಳಲು ಬಹುದು ॥ ೧ ॥

ಮುಸುಕು ತೆಗೆಯಬಹುದಂಜದೆ ಮಾರಿಯ
ಪೊಸ ಸಿರಿಯವರ ನುಡಿಸಲು ಬಾರ[ದು] ಶಿವನೆ ॥ ೨ ॥

ಕರವೆರಡನು ಒಡ್ಡಿ ಕೆಱುನಾಲಿಗೆಯಿಂದ ಪ-
ಲ್ಗಿರಿದು ಹೊರೆಯಲಾ ಶರೀರವ
ಕರುಣದಿ ಕವಿ ಲಿಂಗನೊಡೆಯ ನಂಜುಂಡೇಶ
ತಿರಿಯದಂತೆನ್ನ ನಡಸು ಕಂಡ ಶಿವನೆ ॥ ೩ ॥

೫೨

ರಾಗ : ಮುಖಾರಿ

ದಂಡಿಗೆಯನಿಕ್ಕಿದಳು ರಮಣಿ ತನ್ನಿನಿಯನಿಗೆ ಅ-
ಖಂಡಿತದ ಮೋಹಸಾಮ್ರಾಜ್ಯ ವೈಭವದಿ ॥ ಪಲ್ಲ ॥

ತೆಳುವಸುಖ ಪೊಡವಿ ನಳಿತೋಳು ನುಣ್ಗೊಂಬು ನಿ
ರ್ಮಳವಾದ ಕಟಿಸೂತ್ರ ಹಾರ ರಂಜಿಸಲು
ನೆಲಮೊಲೆಯುಮಲಗು ಜೆಡೆ ಚಾರು ಹರಿಗೆ ಮುಂ
ದಲೆಗುರುಳ ನೋಡೆ ಹಿಡಿ ಕಬ್ಬಾಗಲಚ್ಚಿದು ॥ ೧ ॥

ಭೋಗಗಳೆಂಬೆಸದವರು ಧಮ್ಮಿಲ್ಲದಿಂ-
ಬಾಗಿ ರಂಜಿಸುವ ಸತ್ತಿಗೆ ನಯನರುಚಿಯು
ಬೀಗಿ ಬೀಸುವ ಚಮರ ಸವಿನುಡಿಯೆ ವಾದ್ಯವತಿ
ರಾಗವೆ ಪರಿಪೂರ್ಣವಾದಳಕ್ಕಟಲಿ ॥ ೨ ॥

ಸುರತಕೇಳಿಯಲಿ ಚೆಂದುಟಿಯನುಂಬಳಿಯಿತ್ತು
ನಖ ದಂತ ಕ್ಷತಗಳ ತೊಡರ ತೊಡಿಸಿ
ಗರುವ ಸತ್ಕವಿ ಲಿಂಗನೊಡೆಯನೆನಿಸುವ ವೇಲಾ
ಪುರದ ಚೆನ್ನಗೆ ಪುಳಕದೂವಟಮಾಡಿಸಿ ॥ ೩ ॥

೫೩

ನಿನಗೇನ ಕೊಡಬೇಕು ನೀ ಎನ್ನ ತಡಹುದಕೆ
ಮನಸಿಜನಾಣೆ ಲೆಕ್ಕವ ಮಾಡೊ ರಮಣ ॥ ಪಲ್ಲ ॥

ಹದಿನಾರು ಕೊಡುವಲ್ಲಿ ಹನ್ನೆರಡನೆ ಕೊಟ್ಟೆ
ಅದು ನಾಲ್ಕು ಉಳಿದೆಷ್ಟು ದಿನವಾಯಿತು
ಚದುರ ಹನ್ನೆರಡನ್ನು ಕೊಡುವರೆಂಟನೆ ಕೊಟ್ಟೆ
ಅದು ನಾಲ್ಕು ಇದು ನಾಲ್ಕು ಸಮನಾದ ಬಳಕ ॥ ೧ ॥

ಹನ್ನೆರಡು ಬಣ್ಣದ ಚೆನ್ನದ ವಂಕಿಯಿತ್ತುದಕೆ
ಹೊನ್ನಕರಡಿಗೆಯೆರಡ ಅಡವ ಪಿಡಿದೆ

ಮುನ್ನೊಂದು ಪವಳಯಿತ್ತುದಕೆ ನೀಲವನಿತ್ತ
ನಮ್ಮ ನಿಮ್ಮ ವ್ಯಾ[ಪಾ]ರ ಸಮನಾದ ಬಳಿಕ ॥ ೨ ॥

ಹತ್ತು ಕೊಟ್ಟೆನೆಂದು ಹರದ ತಾ ಪೇಳುತಿರೆ
ಅತ್ತಿತ್ತ ತಿರಗಲೊಂಬತ್ತಾಯಿತು
ಚಿತ್ತಜಾಂತಕ ಪ್ರೇಮಿ ಕವಿಲಿಂಗಯೆನ್ನೊಡೆಯ
ಕಪಿನಿಪತಿ ಹತ್ತಕೊಟ್ಟಮೇಲೆ ಹವಣಾಯ್ತು ರಮಣ ॥ ೩ ॥

## ೫೪

ದೈನ್ಯಬಡಬಹುದು ದೈನ್ಯಕ್ಕೆ ದೈನ್ಯ ಬಡಬಹುದು
ತನ್ನ ಮಯಿಭೋಗಕ್ಕೆ ತಕ್ಕ ಹೆಣ್ಣಾದೊಡೆ ॥ ಪಲ್ಲ ॥

ನೀಟು ಜವ್ವನೆಯಾಗಿ ನೋಡ[ಲಿ]ಕೆ ತಕ್ಕವಳಾಗಿ
ನೀಟುಗಾರ್ತಿಯಳಾಗಿ ನಿಪುಣೆಯಾಗಿ
ಪಾಟಲಗಂಧಿನಿಯಾಗಿ ಪದ್ಮಜಾತದವಳಾಗಿ
ಕೋಟಿ ದಯವುಳ್ಳಂಥ ಕೋವಿದ ಹೆಣ್ಣಾದರೆ ॥ ೧ ॥

ಬಣ್ಣಗಾರ್ತಿಯಳಾಗಿ ಬಹಳ ಮೋಹಿನಿಯಾಗಿ
ಹೆಣ್ಣರೂಪಿಲಿ ಬಾಳ ಚೆಲ್ವೆಯಾಗಿ
ಕಣ್ಣು ಮೂಗಿಲಿ ಕಾಂತೆ ಪದ್ಮದೋರುವಳಾಗಿ
ಎಣ್ಣೆಗಂಟು ಬೆನ್ನಿ[ನೊ]ಳಲೆವ ಏಣಾಕ್ಷಿಯಾದರೆ ॥ ೨ ॥

ಬಲುಮೆಚ್ಚಿನವಳಾಗಿ ಭಾಸ್ಕರನ ಪೋಲ್ವವಳಾಗಿ
ಸಲೆ ಮೋಹಿನಿಯಾಗಿ ಸುಧೆಯಾಗಿ
ಸಲಹು ಸತ್ಕವಿ ಲಿಂಗಯೆನ್ನೊಡೆಯ ಕಪಿನಿಯರಸನ
ನೆರೆ[ವ] ಮೋಹಿಗಲ್ಲದನ್ಯರಿಗುಂಟೆ ರಮಣ ॥ ೩ ॥

## ೫೫

ಅಂಗಜನೆ ಬಾರೊ ಚದುರಂಗವಾಡುವರೆ
ಶೃಂಗಾರ ಮದನಮಂಟಪದೊಳಗೆ ರಮಣ ॥ ಪಲ್ಲ ॥
ಚದುರನಲ್ಲನೆ ಬಾರೊ ಒದಗಿ ತೇಜಿಯನೇರೊ
ಇದಿರಾದ ಮಾರ್ಬಲನ ಮುರಿಯಲಿರಿಯೊ

ಹೆದರದಿರು ಹಿಮ್ಮೆಟ್ಟದಿರು ಕೈದ ಮರೆಯದಿರು
ಚದುರಂಗದಾಟವನು ಕಂಡಾಡೊ ರಮಣ ॥ ೧ ॥

ಹಾಕೊ ನಿನ್ನಾಳ ಮುಂದಕ್ಕೆ ನಿನ್ನ ಮಾರ್ಬಲವ
ಜೋಕೆಯಿಂದಾನೆಯನು ಜೋಡುಗೂಡೋ
ಏಕಾಂತಸ್ಥಲತಿಳಿದು ನೂಕು ನಿನ್ನಯರಥವ
ಏಕಾಂಗಿಯಂ ಕಂಡು ಲೋಲಾಡೋ ರಮಣ ॥ ೨ ॥

ಮಾಗಿ ಮಳೆಗಾಲ ಬೇಸಗಿ ಮೂರುಮಾಸದೊಳು
ಆಗೀಗವೆಂಬ ಸಂದೇಹ ಬೇಡ
ನಾಗಲೀಕರು ಪೀಠವರ್ಧನರು ಆಡುವರು ವೈ-
ಭೋಗದ ಚದುರಂಗವನು ಕಾಣೊ ರಮಣ ॥ ೩ ॥

ಅರಳುಮಲ್ಲಿಗೆ ಜಾಜಿ ಸುರಹೊನ್ನೆ ಸಂಪಗೆಯ
ತುರುಬಿಂಗೆ ತುಂಬಿ ಮೇಲ್ಕಟ್ಟ ಕಟ್ಟಿ
ಅರೆದು ಶ್ರೀಗಂಧ ಕಸ್ತೂರಿ ಪುಣುಗು ಜವ್ವಾದಿ
ಹರುಷದಿಂದಲಿ ಕುಚಕೆತುಂಬಿಯಾಡೊ ರಮಣ ॥ ೪ ॥

ಕರಿ ತುರಗ ಕಾಲಾಳು ಅರಸು ಮಂತ್ರಿಯು ಕೂಡಿ
ಹರುಷದಿಂ ಮಾತಾಡಿ ರಥವನೇರೊ
ಸರಸ ಸತ್ಕವಿ ಲಿಂಗಯೆನ್ನೊಡಯ ನಂಜುಂಡೇಶ
ಅರಸು ಕಟ್ಟಿದಮೇಲೆ ಆಟುಂಟೆ ರಮಣ ॥ ೫ ॥

೫೬:

ಲಲನೆಯರು ನಾಲ್ಕುತೆಱದಲ್ಲಿ ಮೋಹ ಮಾಡುವರು
ಸಲೆ ಮೋಹಿಗಳು ಪೇಳೆ ಸವಿಗಲೆಯನು ॥ ಪಲ್ಲ ॥

ಕಾಣುತಿನಿಯನ ಮೊಗವ ನೋಡಿ ಲಜ್ಜಿತರಾಗಿ
ಏಣಲೋಚನೆ ತನುವ ತ[ವ]ಕದಿಂದ
ಪ್ರಾಣನಾಯಕನ ಮೈ ಹೊಂದಿ ಕಾತುರದಿಂದ
ಮಾಣದೆ ಸುರತಕೆಳಸುವಳವಳು ಬಾಲೆ ॥ ೧ ॥

ಮುನಿದಂತವಿನಿಯನೊಳು ತನುವಿನೆರಕವ ಬಿಸುಟು
ಮೊನೆದೋಱಿ ನಯದಿ ಮೇಲ್ವಾಯವಿಡಿದು
ಸೊನೆ ಬೆವರುದೋಱಿ ಕೂಟದೊಳೊದಱಿ ದಣಿವವಳ
ಸನುಮಾನದಿಂ ಕೂಡುವವಳೆವ್ವನೆಯು ॥ ೨ ॥

ರೂಪುಳ್ಳ ಪುರುಷನಿಗೆ ತಾ ಮೈಯಿಕ್ಕಿ
ಆಯತವಱಿತವನ ಧನವನು ಬಯಸದೆ
ಕಾಯ ಸುಖದುಃಖವನು ಪ್ರಿಯದಿಂ ನೆಲೆಗೊಳಿಸಿ
ನಾಯಕನೆಂದು ಕೂಡುವಳವಳು ಲೋಲೆ ॥ ೩ ॥

ಸುರತದೊಳು ಲಲ್ಲೆನುಡಿಗಳ ನುಡಿದು ಪುರುಷನಿಗೆ
ಹರುಷವನೆ ತೋಱಿ ಸಮರತಿಯ ಬಯಸಿ
ಹರಣದಾಸೆಯನುಳಿದು ಕಾಂತನಿಗೆ ಸ್ನೇಹವನು
ಇರುಳು ಹಗಲೆನ್ನದೊಡ್ಡಗುವಳವಳು ಪ್ರೌಢೆ ॥ ೪ ॥

ಬಾಲೆ ಯೌವ್ವನೆ ಲೋಲೆ ಪ್ರೌಢೆಯರ ಕೂಡಿರ್ದು
ಲೋಲ ಕೊನಬುಗಳವರ ಬಗೆಯನಱಿತು
ಸೋಲುವರನನವರತವು ಸೊಬಗಿನಲಿ ಕವಿಲಿಂಗ
ರಾಯ ನಂಜುಂಡನ ಪಾದದಾಣೆ ಪುಸಿಯಿಲ್ಲ ॥ ೫ ॥

೫೭

ರಾಗ : ವರಾಳಿ

ಚಂಚಲಾಕ್ಷಿಯನ್ನು ನೋಡಿ ಸಖಿಯು ಪ[ದುಳ]ದಿ
ಮಂಚದೆಡೆಯೊಳಿರಿಸಿ ಒಲಿದು ಮಾಡುವ ಮಾಟವ ॥ ಪಲ್ಲ ॥

ಸಾಲಿಯ ಮುಸುಕನಿಟ್ಟು ಸಂಚಲಿ ನೋಡುವರಿರ್ವರು
ಕಾಲು ಕೈಗಳ ಸೋಂಕಿಸಿಯೆ ಸಾರ್ವರಿರ್ವರು
ಮೇಲೆ ನಿದ್ರೆ ಮಱವೆಯಂತೆ ಕರವರಿರ್ವರು
ಸೋಲವ ಸೈರಿಸಲಾರದೆ ಬೆದಱಿ ಸುಯ್ವರಿರ್ವರು ॥ ೧ ॥

ಮಱುಗಿ ಸುರಿವ ಕಣ್ಣನೀರ ಮಿಡಿವರಿರ್ವರು
ವಿರಹದುರಿಗೆ ಸಿಡಿದು ವಿಧಿಯ ಬೈವರಿರ್ವರು

ಬೆರಳ ಮೂಗಿನೊಳಿಟ್ಟು ಶಿರವ ತೂಗುವರಿರ್ವರು
ಅರರೆ ಕಿವಿಯನೊಡ್ಡಿ ದನಿಯ ಲಾಲಿಪರಿರ್ವರು ॥ ೨ ॥

ಹರನ ಶಿರವನೇಱೆ ಧೈರ್ಯವ ಹಿಡಿವರಿರ್ವರು
ಮಱೆದು ಮೂರ್ಛೆಗೆ ಸಂದು ಮನದೊಳೆಸೆವರಿರ್ವರು
ಕೊಱಗಿ ಗಿಳಿಯ ಬೊಬ್ಬೆಗೆ ಬೆಚ್ಚಿ ಕೂಡುವರಿರ್ವರು ನಮ್ಮ
ನರಸನೊಡೆಯ ನಂಜುಂಡನೊಮ್ಮೆ ಸವಿವರಿರ್ವರು ॥ ೩ ॥

೫೮

ರಾಗ : ಆಹರಿ

ಏನು ಮೋಹವೋ ಮದನ ಸಮಾನ ಸಾಳುವ ನರಸಿಂಗಗೆ ॥ ಪಲ್ಲ ॥

ಬಾಲೆಯರಕ್ಕಱೊಳಿರುಳಿವನನೆಯ್ದುವ ಭಾವ
ಲೀಲೆಯಿಂದಲಿ ಹಲವು ಕಾಲವು
ಕಾಲಿಗೆ ಕಣ್ಣು ಕಣ್ಣಿಗೆ ನೇಮ ನೇಮಕೆ
ನಾಲಿಗೆ ಇರೆ ಕಂಡೆನಮ್ಮ ॥ ೧ ॥

ತವಕಿಪ ಮನವ ಮುಂಚುವ ತನು ತ-
ನುವ ಮುಂಚುವ ತಕ್ಕ ತಕ್ಕಿಯ ಮುಂಚುವ
ನವರತಿಕಲೆಯ ಮುಂಚುವ ಮೂರ್ಛೆ ಅವಧಾನ-
ವವರೊಳಿರಲು ಕಂಡೆನಮ್ಮ ॥ ೨ ॥

ಕಂಗೊನೆಯ ಕೊನೆಯಲಿ ನೋಡಿ ಮನದ ಕೊನೆಯಲಿ
ರಂಗನೊಯ್ಯನೆ ಭಾವಿಪ
ಹೆಂಗಳಿಗೀಪರಿವೊಲುಮೆಯಿರಲು ನರ-
ಸಿಂಗನ ಮಹಿಮೆ ತಾನೆ ತುಂಬ ॥ ೩ ॥

೫೯

ರಾಗ : ಶ್ರೀರಾಗ

ಹೇಳಿ ಕಳುಹಿದಳು ರತಿಕಾಳಗಕ್ಕೆ ಮಾಸಾಳಿಗೆಂದು ॥ ಪಲ್ಲ ॥

ಆಲರಧೂಳಿನ ವಿಭೂತಿಯ ಪೂಸಿ ಕಸ್ತುರಿ
ತಿಲಕವ ತಿದ್ದಿ ಕೆಂಜಾಜಿಯ
ತಲೆಮುಡಿಗೆಟ್ಟಿಸಿದೊಡವನೆ ತೊಟ್ಟು
ಲಲನೆ ಮಾಂದಳಿರ ಕಾಸಿಯನುಟ್ಟು ॥ ೧ ॥

ತರಿಸಿ ಕರ್ಪೂರವೀಳೆಯ[ವ] ಪರಿಮಳವನು
ಸರಸಿಜವದನೆ ಕೈಕೊಂಡದ
ಹರುಷದಿಂದಲಿ ವರ ಶಕುನಿಯಮಂಚವನೇಱಿ
ವರ ಚಂದ್ರೋದಯದ ವೇಳೆಯೊಳು ॥ ೨ ॥

ನಸು ಮುನಿಸಿರೆ ಧೀರೆ ಸಾರಿದೆ ಕೂರುಗುರಿಂದ
ಅಸಿಯಳ ಹೊಕ್ಕುಯಿಱಿವೆನೆಂದು
ರಸಿಕ ನಂಜನಗೂಡ ನಂಜುಂಡಲಿಂಗಗೆ
ಬಿಸರುಹವದನೆ ದೂತೆಯರೊಳು ॥ ೩ ॥

೬೦

ಇರಬಹುದೆಯರೆಘಳಿಗೆ ತನುವಿನೊಳಗೆ ಪ್ರಾಣ
ಹರಹರಾ ಮಚ್ಚುಗಾತಿಯನಗಲಿ ? ॥ ಪಲ್ಲ ॥

ಇನಿಯಬರಲಿದಿರೆದ್ದು ರೋಮಾಂಚನ ಗುಡಿಗಟ್ಟಿ
ತನು ಪುಳಕದಿಂದ ತಕ್ಕೈಸಿ
ಮನವುಬ್ಬಿ ರಸವುಕ್ಕಿ ಮಂಚದೆಡೆಗೆಳದೊಯ್ದು
ಮನವೊಲಿದು ನೆರೆವ ರಮಣಿಯನಗಲಿ ॥ ೧ ॥

ಮಡದಿ ಕೊರಲೊಳಗೆ ತೋಳ ತಳುಕಿಕ್ಕಿ ಸವಿಮಾತ
ನುಡಿನುಡಿದು ನೇಮಗಲೆಯ ಮುಟ್ಟಿ
ಒಡನೊಡನೆ ಮೊಗ ನೋಡಿ ಚುಂಬಿಸಿ ತಂಬುಲವಿತ್ತು
ಅಡಿಗಡಿಗೆ ರತಿಯನೀವಳನಗಲಿ ॥ ೨ ॥

ಭಾವರತಿ ಹರುಷದಲಿ ಮೊದ[ಲೆ] ಮೈಮಱೆದಿಪ್ಪ
ಕೋವಿದಳ ತಕ್ಕೆಯ ಹಿಂಗದೆ

ಕಾವನೈಗೋಲಿಗೆ ಗುಱಿಯಾಗದೀ ನರರು
ದೇವ ನಂಜುಂಡನ[ನು]ಮತದಿಂದ ॥ ೩ ॥

೬೧

ರಾಗ : ಭೈರವಿ

ಏಕೆ ಪೊ[ರೆ]ದೆಯೊ ಜಗದೊಳು ಹೆಂಗಳಂಗವ
ಸೋಂಕದಿಹ ಪಾಮರ[ರು]ಗಳ ॥ ಪಲ್ಲ ॥

ಪೊಂಬೊಗರಿಮೊಲೆಯ ಕರದಿ ಪಿಡಿದಲುಗಿ
ಚುಂಬಿಸುತ ಅಧರಸುಧೆಯ ಸವಿವ
ಅಂಬುಜಾಕ್ಷಿಯೊಳುವೆರಸಿ ಸವಿಗಲೆಗ—
ಳಿಂಬಱಿಯದಿಹ ಜಡರನು ಶಿವನೆ ॥ ೧ ॥

ಕಾಣುತಿನಯನ ತವಕದಿ ಬಿಗಿಯಪ್ಪಿ
ನಾಣೊಸರಿ ಮೋಹದಿ ಮೊಗವ
ಮಾಣದಿಡುವಳ ಲೇಸಿನ ಸವುಖ್ಯವನು
ಕೇಣಿಗೊಳಲಱಿಯದವರ ಶಿವನೆ ॥ ೨ ॥

ಲಲ್ಲೆನುಡಿ ಸವಿಮೊಳ[ಗು]ಗಳು ಸೂಸುವ
ಚೆಲ್ಲೆಗಂಗಳುಮುಗಿಯೆ ಮದನಜಲವು
ಚೆಲ್ಲುವಾನಂದದೊಳಗೆ ನಂಜುಂಡನ
ಮೆಲ್ಲಡಿಯ ನೆನೆಯದವರ ಶಿವನೆ ॥ ೩ ॥

೬೨

ತರಹರಿಸಲಾರೆ ತಾವರೆಮುಖಿಯೆ ಮೊಕದೋಱ
ಕರುಣರಸವನು ಬೀರೆ ಕಾಣದಿರಲಾರೆ ॥ ಪಲ್ಲ ॥

ಅಡಿಯಿಡಲು ಎಡೆಎಡೆಗೆ ಕುಡುವರಿವುತಿದೆ ಸೊಬಗು
ನಡುನೋಟ ಭಾವರ[ಸ] ಬೀಡುವರಿವುತಿದೆ ಸೊಬಗು
ಕಡುಜಾಣೆ ಕಾವನರಗಿಣಿಯೆ ಮೋಹದಕಣಿಯೆ
ಮಡದಿ ಮಾನಿನಿರನ್ನೆ ಮೋಹನದ ಚೆನ್ನೆ ॥ ೧ ॥

ಸಲುವ ನಾಣ್ಯಗಳೆಂಬ ಸವಿಗಲೆಯ ಹದಿನಾರು
ಗೆಲವಿಂದ ಮುಟ್ಟಿ ಪರಿಣಾಮಿಸಿ
ನಿಲುಕಡೆಗಳೆಂದೆಂಬ ನಿಧಾನರಸೆಯ ಸುರಿದು
ಚೆಲುವ ಚಂದುಟಿಯ ವೆಹರವನಾಡಿದನೆ ರಮಣಿ ॥ ೨ ॥

ಸರಿರವೆಂಬ ಚಿನ್ನಕ್ಕೆ ಸಲೆ ಮಚ್ಚ ನ[ಖ ನಖ]ಕೊನೆ
ಉರವೆಂಬ ಒಱೆಗಲ್ಲಮೇಲೆಯೊರದು
ಹಿರಿ ಕುಚಗಳೆಂದೆಂಬ ಮೇಣದುಂಡೆಯನೊತ್ತಿಹ
ಹರನು ನಂಜುಂಡ ವೆಹರವನಾಡಿದನೆ ರಮಣಿ ॥ ೩ ॥

೬೩

ನಂಜುಂಡ ನಂಜುಂಡ ನಂಜುಂಡಲಿಂಗ
ಮಾಂ ಪಾಹಿ ನವಮೋಹನಾಂಗ ನಂಜುಂ[ಡ] ॥ ಪಲ್ಲ ॥

ಶ್ರೀನಗಜಾರಮಣ ಕರುಣಾಕರ
ಮೀನಧ್ವಜಧ್ವಂಸಿ ಮೃಡ ನಂಜುಂಡ ॥ ೧ ॥

ಫಣಿಮಣಿಭೂಷಣ ಪಾಲನಲಕ್ಷಣ
ಅಣುರೇಣುಪರಿಪೂರ್ಣ ನಿಲಯ ನಂಜುಂಡ ॥ ೨ ॥

ಜಂಬಾರಿ ಮುಂಬಜ[?] ಗೌತಮ ಸನ್ನುತ
ಗಂಭೀರ ಸಿಂಧು ಸಮಾನ ನಂಜುಂಡ ॥ ೩ ॥

ತುಂಬುರ ನಾರದ ಗೀತ ವಿನೋದ ತ್ರಿ-
ಯಂಬಕ ಮಾಂ ಪಾಹಿ ದೇವ ನಂಜುಂಡ ॥ ೪ ॥

ಪುರಹರ ನಗಧರ ಮೃಗಧರ ಹರಿಶರ
ಶರದಭ್ರ ಶುಭ್ರ ಶರೀರ ನಂಜುಂಡ ॥ ೫ ॥

ಇಂದುಕಲಾಧರ ಇಭಚರ್ಮಾಂಬರ
ಕಂದರ್ಪಕೋಟಿಲಾವಣ್ಯ ನಂಜುಂಡ ॥ ೬ ॥

ಕುಂಕುಮಗಂಧ ಸುಗಂಧ ವಿಲಾಸ
ಶಂಕರ ಪಂಕಜನಯನ ನಂಜುಂಡ ॥ ೭ ॥

ಕನಕಾದ್ರಿಕೋದಂಡ ಘನಬಾಹು ಉದ್ದಂಡ
ದಿನಕರ ಶತಕೋಟಿತೇಜ ನಂಜುಂಡ ॥ ೮ ॥

ದಕ್ಷಿಣಕೈಲಾಸ ಕಪಿಲನಿವಾಸ
ರಕ್ಷ ಮಾಂ ಕಲ್ಯಾಣ ಪಾದರೇಖ ನಂಜುಂಡ ॥ ೯ ॥

೩೪

ರಾಗ : ಮುಖಾರಿ

ನೀನಱಿಯದೊಂದುಂಟೆ ಪೇಳೆನಗೆ ರಮಣಿ
ಮಾನಿನಿಯರಾವಂಗಕೊಲಿವರಿನೆಯರಿಗೆ ॥ ಪಲ್ಲ ॥

ರೂಪಿಗೊಲಿವರೊ ಪ್ರೌಢಿಗೊಲಿವರೊ ಎಳೆನಗೆಯ
ಚಾಪಲಾಕ್ಷಿಯರು ಯೌವ್ವನಕೊಲಿವರೊ
ಐಪೋತ್ತು ಬಿಡದಿಷ್ಟವನೀವಗೊಲಿವರೊ ಆ-
ಪತ್ತಿಗಾದಯಿನೆಯರಿಗೊಲಿವರೊ ॥ ೧ ॥

ಮನದ ದೀಪನವಱಿತು ಕೂಡುವವಗೊಲಿವರೊ
ಮನಸಿಜನ ಕಲೆಯ ಬಲ್ಲವಗೊಲಿವರೊ
ಕನಸಿನೊಳಗೊಮ್ಮೆ ಅಗಲಿದ ಪುರುಷಗೊಲಿವರೊ
ಮೊನೆಗಾರನೆನಿಸಿಗೊಂಬವಗೊಲಿವರೊ ॥ ೨ ॥

ಮೌನವೇಕೀಮಾತು ಮಾನನಿಧಿ ಕರದೀವ
ದಾನಿಯೆಂದೆನಿಪ ಮೀನಾಂಕಗೊಲಿವರೊ
ನೀನು ತಾನಾದ ನಂಜುಂಡದೇವನಿಗಲ್ಲದೆ
ನೀನು ಮೋಹದ ಹದನ ಬಲ್ಲೆಯದಱಿಂದ ॥ ೩ ॥

೬೫

ರಮಣಿ ನೋಡಿವಳಂಗದೇಶದೆಡೆಯೊಳು ಕಣ್ಗೆ
ರಮಣೀಯವೆನಿಸಿ ಪೊಸಜಾಣ್ಮೆ ವಿಡಿದು
ಕಮಲಭವ ಶಿಲ್ಪಿಸಿ[ದ] ಕೌತುಕದ ನೆಲೆ
ಹಿಮಕಿರಣವದನೆ ಸೌಂದರ್ಯ ಸದನೆ ॥ ಪಲ್ಲ ॥

xxxxನ ಪೆಱೆಯನನಂಗನಪನ
ಕಱಿಯಕಬ್ಬಿನ ಬಿಲ್ಲ ಕಳೆಗೊಂಡರಲ್ಲ ಶಶಿ
ಕಿರಣಗಳನುಗುಳ್ವ ತಾವರೆ ತಾವರೆಯ
ಧರಿಸುತಿಳೆಯುರೆ ಸೂಸುವ ಸಂಪಗೆಯ ಚೆಲ್ವ ॥ ೧ ॥

ಬಿರಿ ಮುಗುಳು ಮೃದುವೆತ್ತ ನವವಿದ್ರುಮ
ತರುಣಿಯಳೆ[ಳೆ]ಸಿಲಲ್ಲಿ ಪೊಳೆxxxx
xxxಗವನು ಪಾಡುತಿಹ ಶಂಖ ಸಂಪಿಗೆಯ
xxxಪೊಸ ಮೊಲೆಯನು ಪಡೆದ ಕೆಂದಾವರೆಗಳು
ನಸುದುದಿಯಲೊಗೆದ ಕೇತಕಿಯೆಸಳ ಲತೆಯದಳ
ಲತೆಯ ಮೇ[ಲೆ]ಸೆವ ಕನಕಾದ್ರಿಯುಗ ತೆರೆ ಮೂರರ
ಬೆಸುಗೆವಡೆದಿ[ಹ] xxx ಳೆಗಳು
ಗಂಬಗಳು ಕಾಣಿಸುತಿವೆ ಮೃಗಾಕ್ಷಿ
ಮೃಗಮದ ಸುಗಂಧಿ ॥ ೨ ॥

ಎಳೆಯ ಕೂರ್ಮನಮೇಲೆ ಸಲೆ ನೆಲಸಿ ನಿ
ಶ್ಚಲಮಾದನಂಗನಿಷಂಗವೆ xxx
ಗರಳಪುರವಾಸ ಭಕ್ತ ಜನ ಸುಲಭ ನಂಜುಂಡದೇವನ
ಮಚ್ಚಿನ ಲಲನಾಮಣಿಗೆ ಮಧುರ ಚಿಂತಾಮಣಿಗೆ
ರತ್ನಕಳೆ ಕಿರಣ ವಾಣಿ ಪಲ್ಲವ ಸು ಪಾಣಿ

೬೬

ರಾಗ : ಮುಖಾರಿ

ಕಾಲ ಕಾಲೋಚಿತವ ಕಳೆದ ಬಳಿಕ
ಮೇಲೆ ಹೆಂಗ[ಸರನ]ಱಿಯಬಹುದು ॥ ಪಲ್ಲ ॥

ನಡೆಯಲ್ಲಿ ಲಜ್ಜಾಭಿಮಾನವನಱಿಯಬಹುದು
ನುಡಿಯಲ್ಲಿ ಜಾಣ್ಮೆಯೊಂದಱಿಯಬಹುದು
ಕಡು ಸರಸದಿಂದ ಕೈಯಾಸೆಯಱಿಯಲು ಬಹುದು
ಒಡಲಧರ್ಮವ ಸೋಂಕಿನಿಂದಱಿಯಬಹುದು ॥ ೧ ॥

ಸರಿಗೂಟದಿಂದ ಸಂತಸವ ಕಾಣಲಿಬಹುದು
ತವಕದಿಂ ತನುಸೊಗವಱಿಯಬಹುದು
ನವರತಿಯೊಳಾತ್ಮನಾನಂದವಱಿಯಬಹುದು
ಎವೆಯಿಕ್ಕಲೆದೆಯಾಟದೊಳಗಱಿಯಬಹುದು ॥ ೨ ॥

ಪಕ್ಕೆಯಲಿ ಮನಮುಳುಗಿದಾಸೆಯಱಿಯಬಹುದು
ಸೊಕ್ಕಿನಲಿ ಮೈಮಱೆದುದಱಿಯಬಹುದು
ಅಕ್ಕಱೊಳಗಾದ ನಂಜುಂಡಲಿಂಗನನೊಲವ
ಮಿಕ್ಕ ಸುಮ್ಮಾನದೊಸಗೆಯ ಕಾಣಬಹುದು ॥ ೩ ॥

೬೭

ರಾಗ : ತಿಲಕ ಕಾಂಬೋದಿ

ತರುಣಿ ತನ್ನಿನೆಯನಿಚ್ಚೆಯ ಮಚ್ಚಿನಂಗವನಱಿತಳಮ್ಮ
ಪುರುಷಾಯತದ ರತಿಯ ನಾಟ್ಯವನಾಡಿ ನೆರದಳಮ್ಮ ॥ ಪಲ್ಲ ॥

ಸುಗುಣನ ಥಳಥಳಿಸುವ ಲಾವಣ್ಯ ತರಂಗವಮ್ಮ ನಿನ್ನ
ಒಗುಮಿಗೆಯೊಗುವ ಕಂಬನಿಯೆ ಪುಷ್ಪಾಂಜಲಿಯದಮ್ಮ
ಮಿಗೆಯುಟ್ಟ ದುಕೂಲವು ಬಗೆ ಮುಟ್ಟ ಜವನಿಕೆದೆಱದಳಮ್ಮ
ಸೊಗಯಿಪ ಗಳರವದೊಳುಪಚರಿಯ ಕಂಡಳಮ್ಮ ॥ ೧ ॥

ಧಿಮ್ಮಿಧಿಮ್ಮನೆ ಬೆನ್ನ ಪೊಯ್ದಣ್ಣಗಂಟು ಮದ್ದಳೆಗಳಮ್ಮ
ಪೊಣ್ಮಿದ ಕುಚವಿನಿಯನ ಕೈಗಳವಟ್ಟ ತಾಳವಮ್ಮ
ಜುಮ್ಮನೆ ಸವಿವ ಚೆಂದುಟಿಯ ಚೀತ್ಕಾರವುಪಾಂಗವಮ್ಮ
ಕೆಮ್ಮಕೆಮ್ಮನೆ ಬಿಳ್ವ ಪುಳಕವು ಸಮ್ಮೇಳಗಾಱನಮ್ಮ ॥ ೨ ॥

ತಾವರೆ ಮುಗಿದು ಬೆಂಡೇಳ್ವ ಕಪ್ಪಾವಕೆ ರೂಪದಮ್ಮ
ತ್ರಿವಿಧತನು ಮೂರ್ಛೆಯ ವಿಲಾಸಕೆ ಠಾವಿದಮ್ಮ

ದೇವ ನಂಜುಡಲ್ಲಿಂಗನ ಕೃಪೆಯಿಂದಿನೊಳಾದುದಮ್ಮ
ಭಾವವು ಶಿವಸದ್ಭಾವವುಮಲ್ಲಿಯೊಳ[ಗಾ]ದುದಮ್ಮ ॥ ೩ ॥

೩೮

ರಾಗ : ಶ್ರೀರಾಗ

ಬಲ್ಲರೆ ಯೋಗಿಯಾಗು ಇನಿತಿಲ್ಲದಿರೆ ಮೋಹಿಯಾಗಿರ್ಬೈಯ್ಯ
ಎವೆಯಲುಗದೆ ಲಿಂಗವ ನೋಡಿ ನೋಡದಿರೆ ॥ ಪಲ್ಲ ॥

ನವಯವ್ವನೆಯ ಭಾವವಿರಲಿ
ತವೆಯದೆ ಶಿವಮಂತ್ರವ ಕೇಳಿ ಕೇಳದಿರೆ
ನವರಸ ಲಲ್ಲೆ ದೈನ್ಯವ ಕೇಳಿರಯ್ಯ ॥ ೧ ॥

ಅಲಸದೆ ಲಿಂಗಪೂಜೆಯ ಮಾಡಿಯಲ್ಲದಿರೆ
ಮೊಲೆಯ ಮೇಲಣ ಕೈಯ್ಯ ತೆಗೆಯದಿರಿ
ಒಲಿದೊಲಿದು ಲಿಂಗಪ್ರಸಾದವಕೊಳ್ಳಿ ಕೊಳ್ಳದಡೆ
ಚಲ್ವೆ ಚೆಂದುಟಿಯಮೃತವನುಣ್ಣಿರ್ಬೈಯ್ಯ ॥ ೨ ॥

ಅಂಗ ಘ್ರಾಣೇಂದ್ರಿಯಗಳನೆಲ್ಲ ನಂಜುಂಡ
ಲಿಂಗನೊಳಿರಿಸಿ ನೀವು ಸುಖಿಯಾಗಿರಿ
ಅಂಗಸಂಗ ದೊರಕೊಂಡಿರಲು ಲಲಿ–
ತಾಂಗಿಯರ ಹಿಂಗದಪ್ಪಿ ನೀವು ಸುಖಿಯಾಗಿರಯ್ಯ ॥ ೩ ॥

೩೯

ಬೇಡ ಬೇಡ ಪಂಥ ಎನ್ನೊಳು ಗಾಡಿಕಾಱ ಆದರೆ ನಿನ್ನ
ಬೇಡಿಕೊಂಬೆ ಎಲೆ ಮೋಹನ್ನ
ಬೇಡ ಬೇಡ ಪಂಥ ಎನ್ನೊಳು ॥ ಪಲ್ಲ ॥

ತರಳೆ ಪ್ರಾಯದಿಂದ ಎನ್ನ ಕುರುಳುತಿದ್ದಿ ಕುಂಕುಮ
ಪೆಱೆಯೊಳೆಸೆವ ನೊಸಲ ಕಸ್ತುರಿ ತಿಲಕವನ್ನು ರಂಜಿಸಿ
ಮರುಗ ಮಲ್ಲಿಗೆ ಜಾಜಿ ಸಂಪಿಗೆ
ಸರವ ಲೇಪನ ಅಂಬರಪೊದಿಸಿ ಆಗಲುವದೊಳ್ಳಿತೆ

ಕರುಣನಿಧಿ ನಂಜುಂಡೇಶನೆ
ಬೇಡ ಬೇಡ .................. ‖ ೧ ‖

ನಂಬಿಸಿ ಲಾಲಿಸಿ ಪಾಲಿಸಿ ಎನ್ನ
ಕುಂಭಕುಚವ ಅಲುಗಿ ಮುದ್ದಿಸಿ
ರಂಭೆ ಸವಿದುಂಬೆ ಚೆನ್ನದ
ಬೊಂಬೆಯನ್ನಪ್ಪಿ ಚುಂಬಿಸಿ
ಕೆಂಬಲ್ಲಧರ ನಖದಿ ಕಡಿದು
ಶಂಬರಾರಿಯ ಪೊದ್ದಿಸಿ ನೀನು
ಹಂಬಲಿಗೊಳಗುಮಾಡುವದೊಳ್ಳಿತೆ
ಶಂಭು ಶಂಕರ ನಂಜುಂ[ಡ]ನೆ
ಬೇಡ ಬೇಡ .................. ‖ ೨ ‖

ಸೊಕ್ಕು ಜವ್ವನೆ ಸೊಬಗೆ ಬಾರೆಂದು
ಅಕ್ಕರಿಂದ ಕರದು ಮುದ್ದಿಸಿ
ಸಕ್ಕರೆ ಚಂದುಟಿ ಅಮೃತವನ್ನು
ಸೊಕ್ಕಿಸಿ ಸೋಲಿಸಿ ಸುರತದಿ
ದಿಕ್ಕಿಗೆ ದಕ್ಷಿಣಕಾಶಿಯಾದ
ಉಕ್ಕಿ ಹರಿವ ಕಪ್ಪಿನಿತೀರದ
ಮುಕ್ಕಣ್ಣ ಚೆನ್ನ ನಂಜುಂಡಲಿಂಗನೆ
ಲಾಲಿಸಿ ಎನ್ನ ಪಾಲಿಸೊ ಪಾಲಿಸಿ ಎನ್ನ ಲಾಲಿಸೊ
ಬೇಡ ಬೇಡ ....................... ‖ ೩ ‖

೭೦

ರಾಗ : ಮುಖಾರಿ

ರಾಜಮುಖಿಯಳೆ ಕೇಳು ಮಂಜುಳವಲ್ಲವೆ ನಾನು
ಓಜೆವುಳ್ಳ ಚೆನ್ನ ವರದನಾದರೆನೆನ್ನಿನಿಯ ‖ ಪಲ್ಲ ‖

ವಂಚನೆಯಿಲ್ಲದ ಒಲಹು ಬಲುಹನೆ ಕಂಡು
ಹಿಂಚು ಮುಂಚೆಂಬ ಎಡೆವಟ್ಟ ಕಳೆದು
ಪಂಚೇಂದ್ರಿಯಗಳೆಂಬ ಪಡಿಗಟ್ಟ ಕಟ್ಟಲೆಯ
ಸಂಚಿಲ್ಲದ ತ್ರಾಸಿನೊಲು ತೂಗಿದನು ರಮಣಿ ‖ ೧ ‖

ಸಲುವ ನಾಣ್ಯಗಳೆಂಬ ಸವಿಗಲೆಯ ಹದಿನಾಱ
ಗೆಲವಿಂದ ತಾ ಮುಟ್ಟಿ ಪರಿಣಾಮಿಸಿ
ನಿಲುಕಡೆಗಳೆಂಬ ನಿಧಾನ ರಾಸಿಯ ಮಾಡಿ ಸುಱಿದು
ಚೆಲುವ ಚೆಂದುಟಿ ಬೇಹ[ರ]ದ ಆಟವಾಡಿದನು ॥ ೨ ॥

ಶರೀರವೆಂಬ ಚಿನ್ನಕ್ಕೆ ಮಚ್ಚ ನಖದ ಕೊನೆ
ಉರವೆಂಬ ಒರೆಗಲ್ಲ ಮೇಲೆ ಒರೆದು
ಗುರುಕುಚಗಳೆಂದೆಂಬ ಮೇಣದುಂಡೆಯನೊತ್ತಿ
ಹರನು ನಂಜುಂಡಲಿಂಗ ನೋಡಿದನು ರಮಣಿ ॥ ೩ ॥

೭೧

ರಾಗ : ಶ್ರೀರಾಗ ಆಟತಾಳ

ಶ್ರೀಗಿರಿಗಿನ್ನು ಶ್ರೀಗಿರಿಗಿನ್ನುಪರಿಯಾದ ಗಿರಿಯುಂಟೆ ? ॥ ಪಲ್ಲ ॥

ಹೃದಯಕಮಲ ಗಿರಿ ಮೃದುವಾಗಿರುವ ಗಿರಿ
ತುದಿಸಣ್ಣನಾಗಿ ಬೆಳವ ಗಿರಿ
ಎದೆಯುದಯ ಗಿರಿ ಮದನಮೋಹನ ಗಿರಿ
ಚದುರದ ಗಿರಿಗಿನ್ನು ಸರಿಯುಂಟೆ? ॥ ೧ ॥

ಹೆಣ್ಣುರೂಪಿನ ಗಿರಿ ಕಣ್ಣಿಗೆ ಪ್ರಿಯದ ಗಿರಿ
ಹಣ್ಣಾಗಿ ನೆಲಕೆ ಬೀಳದ ಗಿರಿ
ಅಣ್ಣಗಳಾಟದ ಗಿರಿ ಸಣ್ಣವರೂಟದ ಗಿರಿ
ಬಣ್ಣದ ಗಿರಿಗಿನ್ನು ಸರಿಯುಂಟೆ ? ॥ ೨ ॥

ಮುಸುಕು ಮರೆಯ ಗಿರಿ ಸಸಿಯ ಸೂಡಿದ ಗಿರಿ
ಹಸನಾಗಿ ಕ್ಷೀರವಿರುವ ಗಿರಿ
ಕುಸುಮಶಿರನ ವೈರಿಯ ನಂಜುಂಡಲಿಂಗನ ಕೈ
ವಸವಾದ ಗಿರಿಗಿನ್ನು ಸರಿಯುಂಟೆ ? ॥ ೩ ॥

೭೨

ರಾಗ : ಶ್ರೀರಾಗ

ಶ್ರೀನೀರೆ ನೀರೆಗಿನ್ನು ಸರಿ[ಯುಂಟೆಯೆ]ಲೊದೇವ ? ॥ ಪಲ್ಲ ॥

ಹೃದಯಕಮಲ ನೀರೆ ಮಿದxxxx ನೀರೆ
ಚದುರರ ನೀರೆಗಿನ್ನು ಸರಿಯುಂಟೆಯೆಲೊದೇವ ॥ ೧ ॥

xಣ್ಣಗಳಾಟದ ನೀರೆ ಸಣ್ಣವರೂಟದ ನೀರೆ
ಬಣ್ಣದ [ನೀರೆಗಿ]ನ್ನು ಸರಿಯುಂಟೆಯೆಲೊದೇವ ॥ ೨ ॥

ಹೆಣ್ಣುರೂಪದ ನೀರೆ ಕಣ್ಣಿಗೆ ಛಾಯದ ನೀರೆ
ಅಣ್ಣವಾಲದ ನೀರೆ[ಗಿನ್ನು] ಸರಿಯುಂಟೆಯೆಲೊದೇವ ॥ ೩ ॥

ಕುಸಲ ರೂಪಿನ ನೀರೆ ಶಶಿಗೆ ವಸವಾದ ನೀರೆ
ಹಸನಾದ xxರಸಾಗರ ನೀರೆಯೆಲೊದೇವ ॥ ೪ ॥

ಕುಸಲಪ್ರಿಯ ನಂಜುಂಡಲಿಂಗನ ತಾವಿಗೆ
ವಸನಾದ ನೀರೆಗಿನ್ನು ಸರಿಯುಂಟೆಯೆಲೊದೇವ ॥ ೫ ॥

೭೩

ಏಳಯ್ಯ ಬೆಳಗಾಯಿತು ಏಳು ಬೆಳಗಾಯ್ತು
ಎನ್ನೊಡೆಯ ದೇವರದೇವ ಭಾಳಲೋಚನನೆ
ಭಾಗೀರಥಿಯ ಪ್ರಾಣೇಶ ನೀ[ಲ]ಕಂಠ ನಿಟಿಲಾಕ್ಷ
ನಿಮ್ಮ ನಂಬಿದೆನೀಶ ಪಾಲಿಸೈ ಪರಮೇಶನೆ
ಏಳಯ್ಯ ಬೆಳಗಾಯಿತು........... ॥ ಪಲ್ಲ ॥

ಉರಗಕುಂಡಲ ಧರಿಸು ಉಮೆಯ ತೊಡೆಯೊಳಗಿರಿಸು
ಶಿರಮಾಲೆ ಅಳವಡಿಸು ಶಿವಶರಣರನುಕರಿಸು
ಕುರಿದೈತ್ಯರನುಧರಿಸು ಕಾರುಣ್ಯಮೂರ್ತಿಯೆನಿಸು
ಏಳಯ್ಯ ಬೆಳಗಾಯಿತು............ ॥ ೧ ॥

ವಿಷವಕಂಠಕೆ ನೀಡು ಈರೇಳುಲೋಕಗಳಾಡು
ಮನ ದುಃಖ ಮರೆಮಾಡು ಖರಿತು ತ್ರಿಪುರವ ಸುಡು
ಹಸಿದು ಭಿಕ್ಷವ ಬೇಡು ಸತಿಯ ಜಡೆಯೊಳಗಾಡು
ಭಸಿತ ಭಾಳದಿ ತೀಡು ಭಕ್ತರ್ಗೆ ಅಭಯ ನೀಡು ದೇವ ॥ ೨ ॥

ಗರಳಪುರಧೀಶ ಕಪಿನಿತೀರ ನಿವಾಸ
ಪರಮ ಮುನಿಜನ ಪೋಷ ಪಾರ್ವತೀಪ್ರಾಣೇಶ
ನೆರೆ ನಂಬಿದೆನೀಶ ಕಾಯಿ ಕರುಣೆಗಳರಸ
ಪ್ರೀತಿಯ ನಂಜುಂಡೇಶದೇವ ॥ ೩ ॥

೭೪.

ರಾಗ : ಮುಖಾರಿ

ಬಾಲೆ ಬದುಕುವಳೆಂತು ನಲ್ಲನಗಲಿದ ಕ್ಷಾಮ
ಗಾಲವಡಱಿತು ಪಾಪ ಮನ್ಮಥನೆ ಬಲ್ಲ ॥ ಪಲ್ಲ ॥

ಸುರತಸುಖದಾನದ ಜಲದ ಹದಮಳೆ ತಪ್ಪಿ
ಗುರುಕುಚದ ಕಾಂತಿXಡ ತಗ್ಗಿ
ವಿರಹದುರಿಗೊಂಡು ರೋಮಾಂಚನದ ಬೆಳೆ ನಲುಗಿ
ತೊಱಿದ ಚಂದುಟಿಯ ಅಮೃತಾನ್ನ ಬಱಿನಾಯ್ತು ॥ ೧ ॥

ಸವಿಗಲೆಯ ದಾರಿದ್ರ್ಯದಲಿ ನೊಂದು ಬಡವಾಗಿ
xxx ಲಿಂಗನದ ಹೊದಕೆಗೆಟ್ಟು
ತವೆ ತಳಿರನುಟ್ಟು ಹುಡಿಗರ್ಪೂರವನದ ತಿಂದು
ಭವಬಂಧ ಮುನಿಸಿನಾಪತ್ತಿಗೊಳಗಾಗಿ ॥ ೨ ॥

ಅಲರ್ವಿಲ್ಲರಾಜನ ಬಲದ ಚೂ[ಣಿ]

೭೫

ರಾಗ : ದೇಶಿ

ಸಲ್ಲದಯ್ಯ ಮೋಹವೆಲ್ಲೆಡೆಯು ಮನುಜನಿಗೆ
ತಳ್ಳಂಕಗೊಳಿಸಿ ಕಾಡದೆ ಮಾಣದಯ್ಯೋ ॥ ಪಲ್ಲ ॥

ನೀರಡಿ ಕಿ[ಚ್ಚುಯಿ]ದ್ದಲ್ಲಿ ಇವರಲ್ಲಿ ದಿಟ್ಟ-
ಸುವುದೆ ಕೂಡಿ ಬಲುಧೈರ್ಯವ
ಭದ್ರಗಜ ಸವಿದುಂಡ ಬೇಲವಣ್ಣಿನಂತೆ ಮೋಹ
ಅದ್ವಾನಗೊಳಿಸಿ ಕಾಡದೆ ಮಾಣದೈಯ್ಯೊ || ೧ ||

ಸಂತೋಷವಿನಿತಿಲ್ಲ ಕಾಂತೆಯರವುಪಟಳದಿ
ಭ್ರಾಂತಿಗೊಳಿಸುವರು ವಿಭ್ರಾಂತಿಯಿಂದ
ಸಂತತವು ಅವಳ ಸತ್ಕಲೆಗಳನೆ ನೆನದು ನೆಲನ
ಚಿಂತಿಸಿಯೆ ಬರಸಿದxxx || ೨ ||

xxxxxxxxx
xx ಭಾಷಭೂಷಣವ ರಚಿಸಿ
ಮಡದಿ ನೀಲವತಿಯೆನಿಸಿ ಮೆಱದಿಹರು || ೩ ||

❑ ❑

೭೩

ರಾಗ : ಮಾಳಿ

ರಾಜೀವಾಂಬಕಿ ಬೇಗ ಕರೆತಾರೆ ತನ್ನ
ಪೋಜಿವೊಳಿತಾದುದೀಗ ಒಲುಮೆಯುಳ್ಳ ಠಾವಿಗೆ || ಪಲ್ಲ ||

ಈರೈದು ಬಗೆಯನಱಿದು ವಸವಾಗಿ ತನ್ನ
ಸೀರೆ ಸೆಱಗವಿಡಿಯಲಾಗಿ
ಮೀಱಿ ಬಂದ ಕೈಗೆ ಬಾಯ್ಗೆ
ಮೇಱೆಯ ಮಱದು ಸವಿಗಲೆದೋಱಿ ಇಂದು
ವಾರದಿರವುದೋಱಿ ಮುನಿಯೆ ಮನಸು ನಿಲ್ಲದಿನ್ನೇವೆ || ೧ ||

ವಿನಯವ ತಿಳಿದು ಭಕ್ತಿರತಿಗೂಡಿ ಎನ್ನ
ಮನಕ ಮುದ್ದು ಮಂತ್ರವೆಂಬ ಬಲೆಯಬೀಸಿಯಾಸೆದೋಱಿ
ಚಿನುಮಯಸುಖವನೆಲ್ಲ ಭೋಗಿಸಿ ಕೇಳೆ
ತನುವನಿತ್ತ ಬಳಕ ಬೆರಳ ಬೇಡಲುಂಟೆ ಭಾಮಿನಿ || ೨ ||

ಕರಕಂಜಪುರ ನಿವಾಸ ಪುರನಾಶ ಇಷ್ಟ
ಪರಮಲಿಂಗ ಪಾವನಾಂಗ
ದುರಿತಭಂಗ ಭಕ್ತಸಂಗ
ಕರುಣಾಸಾಗರ ಶರಣಮಂದಾರಗೊ[ಲಿ]ವ
ಹರಿ ವಿರಿಂಚಿ ನಮಿತ ಚರಣ ಕಾಮಭಂಜನ || ೩ ||

❑ ❑

## ೭೬೮

ನಾನೆಂತು ಪಡೆದಿರ್ದೆನೆ ಇವನಿಂದ–
ಲೇನು ಸುಖವೆನಗಾಯಿತೆ ಸಖಿಯೇ || ಪಲ್ಲ ||

ಮುನ್ನ ಮಾಡಿದ ಸುಕೃತವು ತಪ್ಪದೆನ–
ಗಿನ್ಯಾಕೆ ಹಲವು ಚಿಂತೆ ಸಖಿಯೇ
ಬೆನ್ನಬಂದವರ್ಕೈವರ ಕಳೆದೆ ನಾ
ನಿನ್ನೆಂಥ ಭವಗೇಡಿಯೆ ಸಖಿಯೇ || ೧ ||

ತರಳತನದಲಿ ಮೋಹಿಸಿ ತದ್ಗತದಿ
ಮರುಳಾದೆನಿವನ ಕೂಡಿ ಸಖಿಯೇ
ತೊರದೆ ಬಂಧುಗಳನೆಲ್ಲ ಎನ್ನ ಫಣೆ
ಬರಹವನು ತೊಡೆದನಲ್ಲೆ ಸಖಿಯೇ || ೨ ||

ಬಂಗಾರ ಬಳೆಗಾಣೆನಿವನಿಂದ
ಅಂಗಭೋಗವ ತೊರೆದನೆ ಸಖಿಯೇ
ಹಿಂಗನೊಂದರಗಳಿಗೆಯು ನೋಡಿವನ
ಸಂಗವೆನಗೆಂತಾಯಿತೆ ಸಖಿಯೇ || ೩ ||

ಕೂಡುಂಡು ನುಡಿಯದಿಹನೆ ಅರ್ತಿಯನು
ನೋಡುವರೆ ಸಾರಯೆನಗೆ ಸಖಿಯೇ
ಜೋಡಾಗಿ ಕಾದಿರುವನೆ ಇವಗೆಂತು
ಕೇಡು ಬಾಹದನು ಕಾಣೆ ಸಖಿಯೇ || ೪ ||

ಚುನ್ನ ಚುಂಬನ ವಿರಹ[ವೀ ಸಖಿಯೆ] ಸೀತ
ವಣ್ಣಿನೊಲು ಎನಗಾಯಿತೆ ಸಖಿಯೇ
ತನ್ನೊಳೆನ್ನನು ಬೆರಸಿದ ಕರರುಹದ
ಚೆನ್ನ ಸದ್ಗುರುಶಾಂತನು ಸಖಿಯೇ ॥ ೫ ॥

❑ ❑

೭೭

ರಾಗ : ಶಂಕರಾಭರಣ

ನಿರುಪಾಧಿಯಲಿ ಬಂದ ಪರಮ ಸುಭೋಗ ಎನ್ನಿರವ ತುಂಬಿ
ಗುರುಕಲ್ಪಿತದಲ್ಲೊದಗಿದ ಭಿಕ್ಷ ಎನ್ನ ಕರವ ತುಂಬಿ ॥ ಪಲ್ಲ ॥

ನರರನಾಶ್ರೈಸಿ ಪಲ್ಗಿರಿಯದ[ನ್ನವೆ] ಎನ್ನ ಜಿಹ್ವೆ ತುಂಬಿ
ತ್ವರಿತ ಭಕ್ತಿಯಲ್ಲೊದಗಿದ ಪದಾರ್ಥಗಳೆನ್ನ ಸ್ನೇಹ ತುಂಬಿ
ನೆರಹಿ ಮಾಡುವ ಮಾಟಕೆರಗಲಾಗದ ಜ್ಞಾನ ಚರಣ ತುಂಬಿ
ನೆರೆ ವೀರಶೈವಾಚಾರದ ಸಮರಸ ಎನ್ನ ಕರಣ ತುಂಬಿ ॥ ೧ ॥

ಶೀತವೊದಗದಂತೆ ಹೊತ್ತುಕೊಂಡ ರಗಟೆಯ ಕಂಥೆ ತುಂಬಿ
ಯಾತಕ್ಕೆ ನಿಲುಕದ ನೀತಿ ನಿರ್ವಾಣ ನಿಶ್ಚಿಂತೆ ತುಂಬಿ
[ಪಾತ್ರೆ ಕರದೊ]ಳಾಂತು ಲಿಂಗಕೆ ಸಲಿಸುವ ಸದಾ ಸುಮನ ತುಂಬಿ॥ ೨ ॥

ದಿನ ದೋಷ ಹಮ್ಮುಗ ದೀನಪಂಕ್ತಿಗೈದಾಚರಣೆ ತುಂಬಿ
ಜಿನಗುವ ಮಾಯಾಪಾಶಕೆ ನಿಲುಕದ ನಿಜಸ್ಮರಣೆ ತುಂಬಿ
ಘನ ಗುರುವಿನ ಚರಣಾಂಬು ಸುಪ್ರಸಾದ ತನುವ ತುಂಬಿ
ಚಿನುಮಯ ಕರರುಹದಭವ ಸದ್ಗುರುಶಾಂತನ ನೆನಹು ತುಂಬಿ ॥ ೩ ॥

❑ ❑

೭೮

ರಾಗ : ಶಂಕರಾಭರಣ

ಗುರುವಿನ ಕಾರುಣ್ಯ ಶರಧಿ ಮೇಲ್ವಿರಿದೆನ್ನ ಹರಣ ತುಂಬಿ
ಮರಣ ಜರೆಯು ಜಲ್ಮ ದುರಿತಂಗಳರತವು ಕರಣ ತುಂಬಿ ॥ ಪಲ್ಲ ॥

ಹಸ್ತಸಂಯೋಗದೊಳಿತ್ತ ಚಿನ್ಮಯನೆನ್ನ ಕರವ ತುಂಬಿ
ಸೂತ್ರದೊಳೊಲಿದಿತ್ತ ಮಂತ್ರಮೂರುತಿ ಎನ್ನ ಶಿರವ ತುಂಬಿ
ತತ್ತ್ವ[ವ]ನೊಳಕೊಂಡ ತಾರಕಬ್ರಹ್ಮವೆನ್ನಿರವ ತುಂಬಿ
ಪೃಥ್ವಿಜಲಾಗ್ನಿವಾಯುವಾಕಾಶವಳಿದವು ಕರಣ ತುಂಬಿ ॥ ೧ ॥

ಚರಣ ಹೃದಯಾಂಭೋಜವಾನನದೊಳು ಷಡುಪ್ರಣಮ ತುಂಬಿ
ಕರಣವರತು ನಾದ ಬಿಂದು ಕಳೆಗಳೊಳು ಕರಣ ತುಂಬಿ
ವಿರಚಿಸಲಾರದ ಬಸವತ್ರಯಾಕ್ಷರ ಪ್ರಣಮ ತುಂಬಿ
ತೆರಹಿಲ್ಲದೀ ದೇಹಚಕ್ರಂಗಳೊಳಗೆಲ್ಲ ಪ್ರಣಮ ತುಂಬಿ ॥ ೨ ॥

ಶ್ರೋತೃ ಘ್ರಾಣ ತ್ವಕ್ಕು ನೇತ್ರ ಜಿಹ್ವೆಯೊಳಲ್ಲಿ ಪ್ರಣಮ ತುಂಬಿ
ಜ್ಞಾತೃ ಜ್ಞಾನ ಜ್ಞೇಯ ತ್ರಿಪುಟಿಯನೊಳಕೊಂಡು ಪ್ರಣಮ ತುಂಬಿ
ಕೋಟಿಪ್ರಕಾಶದ ಬೆಳಗುದೋರುತಲದೆ ಪ್ರಣಮ ತುಂಬಿ
ಗಾತ್ರ ನೇತ್ರ ಕರರುಹದ ಸದ್ಗುರುವರ ಶಾಂತ ತುಂಬಿ ॥ ೩ ॥

❑ ❑

೭೯

ಎಂತು ಮಾಡಲಿ ದೇವರೆ ಗಂಡನ ಕೂಡೆ
ಚಿಂತೆಗೊಳಗಾದೆ ದೇವರೆ
ತಂತ್ರದೊಳೆನ್ನ ಬಂಗಾರವ ಸೆಳಕೊಂಡ ॥ ಪಲ್ಲ ॥

ಮೂರುಮುತ್ತಿನ ಸರವು ಮುನ್ನವೆ ಪಂಚಹಾರ ಹೀರಾವಳಿಯು
ಆರನಗವ ಸೆಳಕೊಂಡು ನೋಡಿವ ಎನ್ನ ಪುಯ ಮಾಡಿದ
ಬ್ಯಾರೇಳು ತೊಲೆ ಬಂಗಾರ ಹೆಸರ ಹೇಳಬ್ಯಾರದಂತೆ ಮೋದವೋ
ಮೀರಿದ ಮಂತ್ರಗಾರಗೆ ಸಿಲ್ಕಿ ಮರುಳಾದೆ ದೂರು ಮಾಡುವುದಿನ್ನೇನು? ॥ ೧॥

ಹತ್ತುತೊಲೆಯ ಚಿಂತಾಕ [ಕ]ರ್ಣದ ಕೊಪ್ಪು ವ್ಯಕ್ತವಾಗಿರುತಿರಲು
ಚಿತ್ತವಿಟ್ಟದ ಸೆಳಕೊಂಡು ನೋಡಿನ್ನೇನು ಬತ್ತಲೆ ಮಾಡಿದನು
ಮತ್ತೆ ನಾಲ್ಕೈದು ಹೊನ್ನ ಪದ[ಕ]ವಿರೆ ಎತ್ತಲ್ಯೊದನೊ ಕಾಣೆನು
ಮುತ್ತಿನಬಿಲ್ಲೆಯ ಸೆಳೆಯಲಾಗ ಷಡುಸ್ಥಲದ ಗೊತ್ತ ಸೇರಿದೆನು ॥ ೨ ॥

ಎಂಟು ಕರಿಯಮಣಿಯ ಲೇವಳ ಹದಿನೆಂಟು ರೂಪುಗಳೆಲ್ಲವ
ತೋಂಟಿತನದಿ ಸೆಳಕೊಂಡು ಕೈಯ್ಯಲ್ಲಿ ಒಂದು ಘಂಟೆ ಬೋಧಿಸಿ ಕೊಟ್ಟನು
ಗಂಟವನುಡಲೀಯ್ಯದೆ ನೂರೊಂದುಗಂಟಿನ[ವಿ]ನರಿವೆಯ ಕೊಟ್ಟು
ದಾಂಟಿಸಿದನು ಕರರುಹದ ಸದ್ಗುರು ಶಾಂತನುಂಟುಮಾಡಿದನೆಮ್ಮನು ॥ ೩ ॥

೮೦

ರಾಗ : ಶಂಕರಾಭರಣ

ಲಿಂಗ ಸೋಂಕಿದ ತನು ಲಿಂಗವಾಯಿತು ಘನಲಿಂಗ ತುಂಬಿ
ಮಂಗಳವಾಯಿತು ಕರ ಉರ ಸಿರ ಮಂತ್ರಲಿಂಗ ತುಂಬಿ ॥ ಪಲ್ಲ ॥

ಪಂಚಭೂತಂಗಳ ಕಳದು ಶ್ರೀ ಗುರುವಿತ್ತ ಲಿಂಗ ತುಂಬಿ
ಸಂಚಲವಡಗಿತು ಕರಣಂಗಳೊಳು ಪ್ರಾಣಲಿಂಗ ತುಂಬಿ
ಮುಂಚುವ ಮನವ[ರತು] ಷಡುವರ್ಗದೊಳಗೆಲ್ಲ ಲಿಂಗ ತುಂಬಿ
ಪಂಚಮಾರುತ-ಮದವಿಷಯಂಗಳರತವು ಲಿಂಗ ತುಂಬಿ ॥ ೧ ॥

ವದನವೇ ಓಂಕಾರಪ್ರಣವ ಸ್ವರೂಪವಾದ ಲಿಂಗ ತುಂಬಿ
ಮುದದಿ ದ್ವಿಭುಜದೊಳು ನಾಮ ದ್ವಿಯಕ್ಷರ ಲಿಂಗ ತುಂಬಿ
ಹೃದಯಮಧ್ಯದೊಳು ಸಕಾರಪ್ರಣಮರೂಪ ತುಂಬಿ
ಪದದ್ವಯದೊಳು ವ ಯಕಾರ ಷಡಾಕ್ಷರ ತುಂಬಿ ॥ ೨ ॥

ಆಧಾರ ಚೌದಳ [ಭ]ಕ್ತವಾಚಾರಲಿಂಗ ತುಂಬಿ
ಸ್ವಾಧಿಷ್ಠ ಷಡುದಳ ಷಡುಲಿಂಗದೊಳು ಗುರುಲಿಂಗ ತುಂಬಿ
ಭೇದಿಸಿ ಮಣಿಪೂರ ದಶಿತಿಕ್ತದಳ ಶಿವಲಿಂಗ ತುಂಬಿ
ದ್ವಾದಶದಳ [ತಿಕ್ತ] ವನ[ರು]ಹದೊಳು ಚರಲಿಂಗ ತುಂಬಿ ॥ ೩ ॥

ವಿಸುದ್ಧಿ ಷೋಡಶದಳತಿಕ್ತ ಪ್ರಸಾದಲಿಂಗ ತುಂಬಿ
ಮಿಸುಪಾಜ್ಞಾದೊಳು ದ್ವಿದಳವು ದ್ವಿಯಾಕ್ಷರ ಮಹಾಲಿಂಗ ತುಂಬಿ–
ಮಸೆವ ಬ್ರಹ್ಮೇಂದ್ರ ನೀಕಲ ಶಿಖಾಗ್ರದಿ ಶೂನ್ಯಲಿಂಗ ತುಂಬಿ
ಪಶ್ಚಿಮಚಕ್ರದಿ ಪರಮ ನಿರಂಜನಲಿಂಗ ತುಂಬಿ ॥ ೪ ॥

ಇಳೆತತ್ತ್ವವಳಿದು ಘ್ರಾಣೇಂದ್ರಿ[ಯದೊ]ಳಾಚಾರಲಿಂಗ ತುಂಬಿ
ಜಲತತ್ತ್ವವಳಿದು ಜಿಹ್ವೇಂದ್ರಿಯೊಳಗೆ ಗುರುಲಿಂಗ ತುಂಬಿ

ಸಲೆ ತೇಜತತ್ತ್ವವಳಿದು ನೇತ್ರೇಂದ್ರಿಯದೆ ಶಿವಲಿಂಗ ತುಂಬಿ
ಸುಳಿವಾಯುತತ್ತ್ವವಳಿದು ತ್ವಗೇಂದ್ರಿಗೆ ಚರಲಿಂಗ ತುಂಬಿ ॥ ೫ ॥

ಗಗನತತ್ತ್ವವಳಿದು ಶ್ರೋತ್ರೇಂದ್ರಿಗೆ ಪ್ರಸಾದಲಿಂಗ ತುಂಬಿ
ಈ ಘನಹೃದಯದಿ ನಿಜವೆನಿಸುವ ಮಹಲಿಂಗ ತುಂಬಿ
ಆಗು ಹೋಗಱಿವು ಮಱವೆಗಳ ಮೀಱಿತು ಲಿಂಗ ತುಂಬಿ
ಬೀಗಿತು ರವಿಕೋಟಿ ತೇಜ ಪ್ರಭಾಮಯ ಲಿಂಗ ತುಂಬಿ ॥ ೬ ॥

ನವಚಕ್ರ ನವವರ್ಣ ನವನಾಮ ನವವಿಧಲಿಂಗ ತುಂಬಿ
ನವಮೂರ್ತಿ ನವಭಕ್ತಿ ನವಪೂಜೆ ನವಮಂತ್ರಲಿಂಗ ತುಂಬಿ
ವಿವರಿಸಬಾರದ ತ್ರಿಪುಟಿಯನೊಳಕೊಂಡ ಲಿಂಗ ತುಂಬಿ
ಎವೆ ಹಳಚದು ಕರರುಹದ ಸದ್ಗುರು ಶಾಂತಲಿಂಗ ತುಂಬಿ ॥ ೭ ॥

❑ ❑

### ೮೧

ಲಲಿತಾಂಗಿ ನೀಯೆನಗೊಲಿದೆಯಾದರೆ ರತಿ
ಯೊಳು ಬಂದ ಸೌಖ್ಯವನು
ಮಲವಿರಹಿತ ಮನದಿಷ್ಟವ ಸಲಿಸುವ–
ಮಳಲಿಂಗಕರ್ಪಿಸುವೆ ॥ ಪಲ್ಲ ॥

ಮುಗುಳುಮೊಲೆಯು ಮುದ್ದುಮೊಗದಿ
ನಗುತಲೆನ್ನಮುಂದೆ ಸುಳಿದೆಯಾದರೆ
ಸೊಗಸ ನೇತ್ರದಿ ಶಿವಲಿಂಗದೇ–
ವಗೆ ಕೊಟ್ಟು ಸುಖಿಸುವೆನೆಲೆ ಕೋಮಲೆ
ಮೃಗನೇತ್ರೆ ಕೋಗಿಲ ಸ್ವರದಿಂದ ನೀನ–
ರಗಿಳಿಯಂತೆ ಮಾತನಾಡುವ
ಬಗೆಯ ಕರ್ಣದೊಳು ಪ್ರಸಾದ
ಲಿಂಗಕೆ ತೃಪ್ತಿ [ಸಲೀವೆ]ನೆಲೆ ಕೋಮಲೆ ॥ ೧ ॥

ಚಂಪಕದಲರನಿಳಿಸುವ ನಿನ್ನಯ ತನು
ಗಂಪು ಗಮ್ಮನೆ ಘ್ರಾಣಕ್ಕೆ

ಇಂಪಾಗಿ ತಟ್ಟಿಲಾಚಾರಲಿಂಗಕ್ಕೆ ಮುಖ-
ದಲಿ ಗ್ರಹಿಸುವೆನಂಗನೆ
ತಂಪಿನ ತಳಿರ್ದುಟವಿನಿರಸವೊಲಿದು
ನೀಂ ಪ್ರೀತಿಯಿಂದಿತ್ತೊಡೆ
ನಾಂ ಪ್ರಭುಡೆಯೊಳು ಜಿಹ್ವೆಯೊಳಿಪ್ಪ ಗುರು
ಲಿಂಗಕಂ ಪಿರಿದರ್ಪಿಸುವೆ ॥ ೨ ॥

ರತಿಕೇಳಿಯಲಿ ನಿನ್ನಂಗ ಸೋಂಕಿದ ಪುಳ-
ಕಿತವ ಜಂಗಮಕರ್ಪಿಸಿ
ಮಿತಿಯಿಲ್ಲದಿರ್ಪ ಸುಖವ ಮಹಲಿಂಗಕಾ-
ಯತಮಾಳ್ಪೆನೆಲೆ ಕೋಮಲೆ
ಚದುರೆ ಕೇಳೆಲೆ ಮರಿಹುಲ್ಲೆಗಂಗಳೆ
ನೀನುನ್ನತ ಪ್ರೀತಿಯಿಂ ಕೂಡಲು
ಸಿತಕಂಠ ಕರಸ್ಥಲದಿಷ್ಟಲಿಂಗೇಶ ಸ
ಹಿತಲನುಭವಿಸುವೆನು ॥ ೩ ॥

❑ ❑

೮೨

ಕಂಡೆ ಕಂಡೆ ಮಾಜಬೇಡ ಹೇಳ ಹೇಳ ಎನ್ನ ಕೊಡೆ
ಪುಂಡರೀಕ ಪೂಸ ಬಾಣಕಲೆದೋರುತಿದೇಕೋ ॥ ಪಲ್ಲ ॥

ಅಧರದೊಳು ಪೊಸರನ್ನ ಹದದೋರುತಿದೆ ನಿನ್ನ
ಎದೆಗುರುಳು ನಳಿತೋಳು ಚಂದ[ವ]ಳಿ[ದಿ]ದೇನಮ್ಮಿ ?
ಚದುರೆ ವನಕೆ ಪೋಗಲಾಗ ತರುಳೆ[ಗೆ]ಲೆಯುತಾಗಿತಂದು
ಅಧರ ಪಣ್ಣೆಂದೆ ಗಿಳಿ ಸವಿನೋಡಿತಮ್ಮ ॥ ೧ ॥

ಮಂದಗಮನೆ ರಜದುಡಿಗೆ ಸಡಿಲದವೆ ನಿನ್ನ ನೊಸಲು
ಚಂದನದ ತಿಲಕ ಕಲಗಿದ ಪರಿಯಿದೇನಮ್ಮಿ ?
ಕಂದ ಬಂದು ನೆರಿವಿಡಿದು ಸೀ[ರೆ] ಸೆಳೆದು
ಕಂದನು ಪಿಡಿದು ಮುಂಡಾಡೆ ತಿಲಕವ[ದು] ಕಲಕಿತಮ್ಮ ॥ ೨ ॥

ನಡೆಯಾಡಿಯು[ಡೆ] ಸಡಲಿದವು ಉಗುರುತಿದೆ ಪೂಮಾಲೆ
ಕಡೆ[ಗ]ಣ್ಣ್ಗಳಲಿ ಕೆಂಪುವಿದು ಚೋದ್ಯವೀಗಮ್ಮಿ
ನಡೆವ ಮಾರ್ಗಕಂಜಿ ಮುಡಿ ಸಡಿಲಿ ಮುಖ ಕಂದಿ
ಕಡು ಬಿಸಿಲಿನೊಳೆ ಕಣ್ಣು ಕೆಂಪಾದವಮ್ಮ ॥ ೩ ॥

ಕುಂಭಕುಚಗಳ ಮೇಲೆ  ಬಾಲಚಂದಿರನೇಕೆ ಬಂದ
ಅಂಬುಜಾಕ್ಷಿ ನಿನ್ನದೆಯ ಕಿರಿ ಬೆವರಿದೇನಮ್ಮಿ ?
ಮುಂಬರಿವ ರವಿಗಂಜಿ  ಇಂಬುಗೊಂಡೆ ಚಂದ್ರಮನ
ಅಂಬುಜಸಖನ ಸೆಖೆಗೆ ಪನ್ನೀರ್ಮಿಂದೆನಮ್ಮ ॥ ೪ ॥

ನನ್ನಪುಣ್ಯನನ್ನ ಕೈಯ್ಯ ನಿನ್ನ ಪುಣ್ಯ ನಿನ್ನ ಕೈಯ್ಯ
ನನ್ನ ನೆನೆದು ನಿನ್ನ ನೆರದನವ ಮೋಹನಾಂಗಿ
ಕನ್ನಡ ಸುಜಾಣ ಕರಿಬಸವ ಹೊಸಹಳ್ಳಿ ವೀರ
ನಿನ್ನ ಕಂಡರವ ಬಿಡ ನಾ ಬಲ್ಲೆನಮ್ಮಿ ॥ ೫ ॥

❑ ❑

೮೩

ನಂಬರೈಯ್ಯ ಹರನೆ ನಿಮ್ಮ ನಂಬರೈಯ್ಯ
ನಂಬರು ಶಿವಭಕ್ತರು ನಿಮ್ಮ
ಉಂಬುದಕ್ಕೆ ಕರವುದಕ್ಕೆ ॥ ಪಲ್ಲ ॥

ಮಣೆಯಮೇಲೆ ಮಗಳ ನಿಲಿಸಿ
ಹಸೆಯ  ತುಂಬಿ ಸೇಸೆಯನಿಟ್ಟ
ಮಾಣಿಕದಂಥ ಮುಡಿಯ ಬೇಡಿ
ಪಾದಕೆ ಧರಿಸಿದನೆಂದು ॥ ೧ ॥

ಬಣ್ಣಿಸಿ ಚೋಳನ ಮನೆಯ
ಅಣ್ಣೆವಾಲ ಪಾಯಸವ–
ನುಣ್ಣಲೊಲ್ಲದೆ ಮಾದಾರ
ಚೆನ್ನನೊಡನುಂಡನೆಂದು ॥ ೨ ॥

ಎಂದೆಂದು ಜಂಗಮಕೆ
ನೀಡೆನೆಂಬ ಭಕ್ತರ ಮನೆಯ

ಕಂದನ ಮಾಂಸವ ಬೇಡಿ-
ದಂದುಮೊದಲಾಗಿ ನಿಮ್ಮ ॥ ೩ ॥

ಸೃಷ್ಟಿಗೆ ಶಿವಭಕ್ತನೆಂಬ
ಕಟ್ಟಳೆ ಬಲ್ಲಾಳನ ಮನೆಯ
ಪಟ್ಟದರಾಣಿಯ ಕ-
ಣ್ಣಿಟ್ಟು ಬೇಡಿದನೆಂದು ॥ ೪ ॥

ಭೂರಿದೈವಗಳಿಗೆ ಪಶುಪತಿ ಮಹಾದೇವ
ತಾರಕಾಸುರನ ಕೊಂದ[ನೆಂದು]
ಮಾರಹರ ಕಲ್ಲೇಶ್ವರನೆಂಬರೈಯ್ಯ
ಶಿವನೆ ನಿಮ್ಮ ನಂಬರೈಯ್ಯ ॥ ೫ ॥

 

೮೪

ಕರಡ್ಯಪ್ಪನೆಂತೆಂಬೊ ಶರಣ ನೀಜಕೀರ್ತಿಗಾಭರಣ
ಗುರುಕರುಣದ ಫಲ ಗುರುತಾದನಿಳೆಯೊಳು
ಪರಮೇಶಬಲ್ಲನು ಪರಿಯನ್ನದಾನದ ॥ ಪಲ್ಲ ॥

ಕಲ್ಯಾಣಪಟ್ಟಣ ಮುಂದೆ ಕೀಳಿದವಾದಕೆಂದ
ಕಲ್ಯಾಣ ಕಳೆಯ ಸಮ್ಮಂಧ
ಕಲ್ಯಾಣಸ್ವಾಮಿಯ ಕಾರುಣ್ಯವಾರಿಧಿ
ಕಲ್ಲೋಲನೆನಿಸಿದ ಕಮನೀಯ ಸಕ್ಕರಿ ಕರಡ್ಯಪ್ಪ ॥ ೧ ॥

ಲಿಂಗ ಜಂಗಮಕತಿಭಕ್ತ ಪಾಲನೆಗಳಾಸಕ್ತ
ಲಿಂಗನ ಪ[ದ]ದಲೆ ಯುಕ್ತ
ಮಂಗಳ ಬಸವನ ಮಂಗಳ ನುತಿಯೆನೆ
ಮಂಗಳ ನಿಯತನ ಮಂಗಳ ಸಕ್ಕರಿ ॥ ೨ ॥

ಬಸವಣ್ಣನಿದ್ದನುರ್ವಿಗೆ ಬಂದನಾತನ ಸರಿಗೆ
ಭಸಿತಭೂಷಿತ ಭಿಕ್ಷುಕರಿಗೆ

ಅಸುವಿಗಶನವಿತ್ತ ಅಸಮಾನನೀಶನೆಂಬು
ದೆಸೆಯೊಳಗೆ ತಾನೆಂದ್ಯೆಸದನ್ನೆ ಸಕ್ಕರಿ ॥ ೩ ॥

ವ್ಯಾಜ್ಯ ಬಂದರೆ ಹೊಕ್ಕ ಶೂಲಿ ವೈರಿಗಳೆದೆ ಶೂಲ
ಊರ್ಜಿತ ಉದ್ಧಟ ಶೀಲ
ರಾಜಮಂಡಲದಲ್ಲಿ ರಾಜರಾಜಿತಮಾನ್ಯ
ರಾಜಿತನನಿಸಿದ ರಮಣೀಯ ಸಕ್ಕರಿ ॥ ೪ ॥

ನೇಮ ನಿತ್ಯಗಳಿಗೆ ದಕ್ಷ ನಂದನ ಕಲ್ಪವೃಕ್ಷ
ನೇಮಿ ಸೀಲಳಿದಂತ ವೃಕ್ಷ ?
ಧಾಮ ಕಂಪಲಿಪುರಿ ದೇವನೆಂದೆನಿಸುವ
ರಾಮಲಿಂಗನ ಕೃಪೆರಾರ್ಜಿತ ಸಕ್ಕರಿ
ಕರಡ್ಯಪ್ಪನೆಂತೊಂಬೊ ಶರಣ ॥ ೫ ॥

೮೫

ಅಹುದೆನ್ನಿ ಅಲ್ಲವೆನ್ನಿ ಅಹುದxxxx
xxxxವದು ತಿಳಿದುಕೊಳ್ಳಿ ನೀವೆಲ್ಲ ॥ ಪಲ್ಲ ॥

ದೇವರಿಲ್ಲದ ಗುಡಿಯು ಹಾಳು ಬಿದ್ದಂಗಡಿಯು
ಭಾವವಿಲ್ಲದ ಭಕ್ತಿ [ಕುಹ]ಕ ಯುಕ್ತಿ
ಹೇವವಿಲ್ಲದ ಹೆಣ್ಣು ಗ[ರ್ದುಗು] ಬೆಳದಾ ಕಣ್ಣು
ಮೋಹವಿಲ್ಲದ ದನಿಯು ಕಲ್ಲಕಣಿಯು ॥ ೧ ॥

ಧರ್ಮವಿಲ್ಲದ ಅರಸು ಮೂರು ಕಾಲಿನ ಹೊರಸು
ವರ್ಮವಿಲ್ಲದ ಮನಸು ಕಜ್ಜಿ ತಿನಸು
ಶರ್ಮವಿಲ್ಲದ ಗಂಡು ಮೂರುಕವಣಿಕೆಯ ತುಂಡು
ವರ್ಮವಿಲ್ಲದ ಮಾತು ಮಗಿಯ ತೂತು ॥ ೨ ॥

ಕಂಡು ಕರೆಯದ ನೆಂಟ ಗಂಡುಗತ್ತೆಯ ಶಂಟ
ಉಂಡು ನಗದಾಮೋರೆ ಮುಕ್ಕ ಸೋರೆ
ಗುಂಡಿಗಂಜುವ ಬಂಟ ಒಡಕ ಹರವಿಯ ಕಂಠ
ಗಂಡಗಂಜದ ನಾರಿ ಮುಕ್ಕನಾರಿ ॥ ೩ ॥

ಮಕ್ಕಳಿಲ್ಲದ ತಾಯಿ ಕೊಳೆತ ತೆಂಗಿನಕಾಯಿ
ಸೌಖ್ಯವಿಲ್ಲದ ಊಟ ಕಾಳಕೂಟ
ಒಕ್ಕಲಿಲ್ಲದ ಊರು ಹಡಿಕಿನಾರುವ ನೀರು
ವಿದ್ಯವಿಲ್ಲದ ಬದುಕುವಿದ್ದು ವ್ಯರ್ಥ ॥ ೪ ॥

ಬಿಟ್ಟು ಆಡುವ ಗೆಳೆಯ ಕೊಳೆತ ತೊಗಲಿನ ಮಿಣಿಯು ದಾನ
ಕೊಟ್ಟು ಬೇಡುವ ಧಾತ ಹೀನಜಾತ
ಸೃಷ್ಟಿಯೊಳು ಕಾಗಿನೆಲೆ ಶ್ರೀ ಚೆನ್ನಮಲ್ಲೇಶನ
ಮುಟ್ಟ ಭಜಿಸದ ನರನು ಹುಳಿತ ಮರನು ॥ ೫ ॥

□ □

೮೩

ಹೇಳಬಾರದಂಥ ಕನಸ ನಾನು ಕಂಡೆ ಎನ್ನ
ಬಾಳುವೆಗೆ ಐದುಮಂದಿವೆಳಕಾದರಮ್ಮ ॥ ಪಲ್ಲ ॥

ಕುಂಡಲಿಯಯೋಗವನ್ನು ಮಂಡಿಸಿ ನಾ ಮಾಡುತಿರ್ದೆ
ಪಂಡಿತಾಚಾರ್ಯರು ಮರುಳಸಿದ್ಧರು
ಗುಂಡುಗಪ್ಪರದ ಒಡೆಯ ರೇವಣಸಿದ್ಧಯ್ಯನೆಂಬ
ಕಂಡಿತದ ಜಂಗಮವೆನ್ನ ಆತ್ಮದೊಳಗಾದರೆ ॥ ೧ ॥

ಆಧಾರಸ್ಥಾನವೆಂ[ಬುದ] ಭೇದಿಸಿ ನಾಲ್ಕಕ್ಷರ
ಸ್ವಾಧಿಷ್ಠಾನ ಸ್ಥಾನಕೆ ಬರಲಾರುವೆಸಳಿನ
ನಾದದೊಬ್ಬುಳಿವಿಡಿದು ಮಣಿಪೂರ[ಕ]ಕಕೆ ಬರಲು
ಓದಿದೆನು ಹತ್ತು ಹನ್ನೆರಡಕ್ಷರವ ॥ ೨ ॥

ಷೋಡಶದಳವೆಂಬ ಗೂಡಿನೊಳಗಾಡುತಿರ್ದೆ
ಕೂಡಿ ಎರಡೊಂದಾಗಿ ಹಂಸನೆಂಬ
ನಾಡ ಮೇಲೆ ಚರಿಸುವಂಥ ನಾನಾಮಂತ್ರಕಧಿಕವಾದ
ಪಾಡು[ತಲಿಯಱಿ]ತು ಪಂಚಾಕ್ಷರವ ॥ ೩ ॥

ಅಕ್ಷರ ನೀತಿಯೆಂಬ ಲೆಕ್ಕಕ್ಕೆ ಮೂರಕ್ಷರ
ಏಕ್ಕಂ ದಾಹಂ ಶತಂಯೆಂಬ ಸಾವಿರಬೀಜವಿಷ್ಟು

ಅಕ್ಷರಂಗಳೆಲ್ಲ ಸ[o]ಕಲವಾದವಾಙುಶಾಸ್ತ್ರ
ಮುಖ್ಯವಾದವೆರಡು ಬೀಜ ಶಿವಯೆಂಬುದ ॥ ೪ ॥

ಅಙುವತ್ತುನಾಲ್ಕು ಅಕ್ಷರವ ಅರಿವುದಕ್ಕೆ ಅಳವಲ್ಲ
ಗುರುವು ತೋಙ್ಙಿಸಿದಾತ ಗುಪ್ತದಿಂದಲಿ
ಚರಣವನ್ನು ಭಜಿಸುವುದಕೆ ಪಿರಿದಾಗಿ ತೋಙುತಿದೆ
ಕರುಣದಿಂದ ಕಂಡೆನೆನ್ನ ಕಾಡಸಿದ್ಧನ ॥ ೫ ॥

☐ ☐



೮೭

ರಾಗ : ಆನಂದಭೈರವಿ

ಬಿಡುಬ್ಯಾಡ ಹಿಡಿ ಗುರುಪದವ
ಬಿಡುಬ್ಯಾಡ ಬೇಡಿದಿಷ್ಟಾರ್ಥವ ಕೊಡುವ ॥ ಪಲ್ಲ ॥

ಘನ ಚಿದಪ್ರಭೆಯೊಳು ಮನ ಮು[ಳು]ಗೇಳುತ
ಮನಸಿಜ ಪಾಪವ ನೀಗಿ ಸುಖ ಭೋಗಿ ನಿಜ ತೂಗಿ ತೂಗಿ ॥ ೧ ॥

ತಾಮ[ಸ] ದ್ಯುತಿಗಳ ಸೀಮೆಯ ಪೊಗದೆ
ಪ್ರೇಮದಿ ನಲಿನಲಿದಾಡು ನೀ ನೋಡು ಒಡಗೂಡುಗೂಡು ॥ ೨ ॥

ಪರತರ ಕಾಶಿಯ ಶಾಂತವೀರೇಶನ
ಚರಣಕಮಲವನು ಹೊಂದು ದಯಾಸಿಂಧು ದೀನಬಂಧು ಬಂಧು
ಬಿಡುಬ್ಯಾಡ ಹಿಡಿ ಗುರುಪದವ ॥ ೩ ॥

☐ ☐

೮೮

ಎನ್ನ ರಕ್ಷಿಸೊ ಗುರುತಂದೆ
ಪನ್ನಗಧರ ರೂಪ ಕಾಳಸ್ತಿಲಿಂಗ ॥ ಪಲ್ಲ ॥

ಭಸಿತಭೂಷಣ ಲಿಂಗ ಭಾಳನೇತ್ರ ಲಿಂಗ
ಶಶಿಯ ಸೂಡಿದ ಲಿಂಗ ಶಾಂತಲಿಂಗ

೬೫

ಹಸಿದು ಕಾಂಚಿಗೆ ಹೋಗಿ ಶಿಶುವ ಬೇಡಿದ ಲಿಂಗ
ವಸುಧೆಯೊಳು ಮೆರದ ಕಾಳಸ್ತಿಲಿಂಗ ॥ ೧ ॥

ಬಂಟನಾದೆಲ್ಲೊ ಲಿಂಗ ಬಾಗಿಲ ಕಾಯಿದ ಲಿಂಗ
ಕುಂಟಣಿಗನಾದ ಕುಟಿಲ ಲಿಂಗ
ವಂದಿತನವದಿಯ ಹೊನ್ನಮಾಸಿದ ಲಿಂಗ ?
ಕಂಟದಲ್ಲಿ ಕಪ್ಪುಳ್ಳ ಕಾಳಸ್ತಿಲಿಂಗ ॥ ೨ ॥

ಎನ ಕರತಲದಲ್ಲಿ ವೇಳೆಯ ಮುಟ್ಟದ ಲಿಂಗ
ಚನ್ನಯನಂಬಲಿಯ ಸವಿದ ಲಿಂಗ
ಮಣ್ಣ ಬಸತಿಯಲ್ಲಿ ಸ್ತುತಿಯ ಮಾಡಿದ ಲಿಂಗ
ಕನ್ನಪಗೊಲಿದ ಕಾಳಸ್ತಿಲಿಂಗ ॥ ೩ ॥

□ □

೮೯

ವೃಷಭರಾಜ ಮಂಗಳ ನುತ ಸುರಭೂಜ
ವೃಷಭರಾಜ ॥ ಪಲ್ಲ ॥

ಮಂಗಳಮೂರ್ತಿ ತುಂಗ ಸತ್ಕೀರ್ತಿ
ಹಿಂಗದೆ ಬೆಳಗುವೆ ಮಂಗಳಾರ್ತಿ ॥ ೧ ॥

ಭಕ್ತರ ಪಕ್ಷ ದುಷ್ಟರ ಶಿಕ್ಷ
ಮುಟ್ಟಿ ಅರ್ಚಿಸುವೆ ಮಂಗಳಾರ್ತಿ ॥ ೨ ॥

ಪೊಡವಿಯೊಳಿರುವ ಕಿತ್ತೂರಪುರವ
ಬಿಡದೆ ಪಾಲಿಸುವ ನಂದಿಬಸವ ॥ ೩ ॥

□ □

೯೦

ಶ್ರೀ ಗುರುರಾಯನಂಘ್ರಿಯ ಭಜಿಸಿ ಗುಪ್ತದಿಂದಂ ಸದ್ವಸ್ತುವೆಂದು॥ ಪಲ್ಲ ॥

ಮರೆಹೊಕ್ಕರೆ ಕಾಯ್ದು ಮಾರಿಯ ಗೆಲಿಸಿ
ಸ್ಮರಣೆಯಿಂದತಿ ಪಾಪಗಳನು ಸಂಹರಿಸಿ
ಕರುಣದಿಂದಲಿ ಭಕ್ತ ಜನರ ಉದ್ಧರಿಸಿ
ಅರುಹ ತೋರಿ ನಿಜವಸ್ತುವ ಬೆರಸಿ ॥ ೧ ॥

ಸಂಚಿತ ಪ್ರಾರಬ್ಧ ಕಾಲಿಲೊದ್ದವನ
ವಂಚನೆ ಕನ್ನೆಯ ಮನಗೆದ್ದವನ
ಕಿಂಚಿತ ದೋಷವ ಪರಿಹರಿಸುವನ
ಪ[ಂ]ಚಪ್ರಣಮ ಪರಾತೀತನಾದವನ ॥ ೨ ॥

ಶರಣಜನರಿಗೆಲ್ಲ ಕರುಣವಿತ್ತವನ
ಪರಮ ತ್ರಿಪುಟಿಯೆಂಬೊ ಮಾಯೆ ಗೆದ್ದವನ
ಹರಣ ಮರಣ ಜನನ ನೀಗಿದಂಥವನ
ಪರಮಸ್ಥಲವ ಮೀರಿಯಾಡುವಂಥವನ ॥ ೩ ॥

ಅರಿಷಡ್ವರ್ಗವನೊರಸಿ ಬಿಟ್ಟವನ
ಸುರವರ ವಂದಿತ ಪಾದಕಮಲನ
ಬಿರಿದು ಶರಣಾಗತ ವಜ್ರಪಂಜರನ
ಪರಿಭವಗಳ ಭೇದಮಾಡಿದಂಥವನ ॥ ೪ ॥

ಅರುಹಿನೊಳರುಹಿನ ತಿರುಳಿಯಾಗಿಹನ
ಪರಮ ಶಾಂತಿಯೊಳೊಂದು ಬೇರದಿಲ್ಲದಿವನ
ಸ್ಮರಣೆ ಮಾತ್ರದಿ ತೋರಿ ತೋರದಂಥವನ
ಗುರುವರ ಸ್ವಾಮಿ ಕುಮಾರಗುರುವಿನ ॥ ೫ ॥

 

೯೧

ರಾಗಃ ದೇಶಿ

ಹಂಚು ಬಲ್ಲುದೆ ಹಲತೆರದದು ಪಕಾರವನು ?
ಮಿಂಚುಳ್ಳ ಕಂಚು ಕನ್ನಡಿಯಾಗಬಲ್ಲುದೆ ? ॥ ಪಲ್ಲ ॥

ಬಾಳೆ ಬಲ್ಲುದೆ ಮರಳಿ ಮತ್ತೊಂದು ಫಲವನು?
ಸೂಳೆಬಲ್ಲಳೆ ಬಹಳ ಬಡತನವನು ?
ಖೂಳ ಬಲ್ಲನೆ ಊಟದೊಳಗೊಂದು ಸವಿನುಡಿಯ?
ಕೇಳಬಲ್ಲನೆ ಕಿವುಡ ಏಕಾಂತವ? ॥ ೧ ॥

ಕಾಗಿ ಬಲ್ಲುದೆ ಕೋಗಿಲ ಹಂಗೆ ಸ್ವರಗಳನು ?
ಗೂಗಿ ಬಲ್ಲುದೆ ಹಗಲೆ ತಿರಿಗ್ಯಾಡುದ ?
ರೋಗಿಬಲ್ಲನೆ ಊಟದೊಳಗೊಂದು ಸವಿರುಚಿಯ ?
ಚೆಂಗಿ ಬಲ್ಲನೆ ಕೆಲಸ ವಿಕ್ರಿಗಳನು ? ॥ ೨ ॥

ಏತ ಬಲ್ಲುದೆ ವನದ ಪರಿಮಳದ ಪುಷ್ಪವನು ?
ಹೋತು ಬಲ್ಲುದೆ ಗಡ್ಡದ ಹಿರಿಯತನವನು ?
ಬೂತ ಬಲ್ಲುದೆ ಲಜ್ಜೆ ನಾಚಿಕೆಯೆಂಬುದನು ?
ಓತಿ ಬಲ್ಲುದೆ ಗಡವ ತಕ್ಕೊಂಬುದ[ದ]ನು ? ॥ ೩ ॥

ಕಳ್ಳ ಬಲ್ಲನೆ ಕರುಣದುಪಕಾರವನು ?
ಕೊಳ್ಳಿ ಬಲ್ಲುದೆ ತನ್ನ ಮನಿಯೆಂಬುದ ?
ಬಳ್ಳು ಬಲ್ಲುದೆ ವೇದ ಶಾಸ್ತ್ರ ಪೌರಾಣವನು ?
ಜೊಳ್ಳು ಬಲ್ಲುದೆ ಕೆಲಸ ತಂತ್ರಗಳನು ॥ ೪ ॥

ಕೋಣಬಲ್ಲುದೆ ಕುದರಿಗಳಿಗುಳ್ಳ ಭೋಗವನು ?
ಕಾಣಬಲ್ಲನೆ ಕುರುಡ ಕನ್ನಡಿಯನು ?
ಜಾಣಕವಿಗಳ ಕಂದ ಕುಂಬಾರರಾಮನ
ಪ್ರಾಣದೊಡೆಯನು ಸೊಪ್ಪಿಬಸವಯ್ಯನು ॥ ೫ ॥

❑ ❑

೯೨

ಬರತದ ಪದ ಬರತದ ನಾ ತಿರಿಗಿ
ಮರಳಿ ಹುಟ್ಟಿ ಜೆಲ್ಮಕ್ಕೆ ಬಾರದ ॥ ಪಲ್ಲ ॥

ಅ ಕ ಚ ಟ ತ ಪ ವ್ಯಾಸ ಸಕಲ ಕವಿಗಳೆಲ್ಲ ವಿಷ
ಅಕ್ಷರಗಳೆಂಬ ತರದಿಟ್ಟರು

ಅಖಿಳ ಬ್ರಹ್ಮಾಂಡವು ತನ್ನೊಳಗಿಂಬಿಟ್ಟ
ಸುಖ ಪರಮಾತ್ಮನ ಹೃದಯದೊಳಿರುವುದು ॥ ೧ ॥

ಆದಿ ಪ್ರಾಸ ಗುರು ಲಘುಗಳೆಂಬ
ಬೆಡಗಿನ ದೀರ್ಘಾವರ್ತದನೆತ್ತಲರಿಯ
ನುಡಿ ಶಬ್ದ ಬಂಧುರ ತಾಳಲಾರೆನುಯೆಂದು
ಪಡಿಪಾಟನರಿಯದ ಪರಬ್ರಹ್ಮನಾದುದು ॥ ೨ ॥

ಜ್ಞಾನಪೂರಿತವಾಗಿ ತಾನು ತಿಳಿದಮೇಲೀಗ
ಹಾನೆ ಕ್ಷೇಮಗಳನೀಗೆ ಭಯವುಯಾಕೆ
ಧ್ಯಾನನ ಮಾತನು ಕೂಡಲೂರೇಶನ
ಆನಂದ ಮುಕುತಿ ತಾನೇ ತಾನಾದುದು ॥ ೩ ॥

೯೩

ಭಿಕ್ಷವನು ನೀಡಿದರು ಮೋಕ್ಷದಾಪೇಕ್ಷೆಯಲಿ
ಸಾಕ್ಷಾತ ಶ್ರೀ ಶಂಭು ರಾಮಲಿಂಗನಿಗೆ
ಭಿಕ್ಷವನು.... ॥ ಪಲ್ಲ ॥

ಇಕ್ಕೇರಿಯೊಳಗುಳ್ಳ ಸಿರಿವಂತೆಯರು ಕೂಡಿ
ಗಕ್ಕನಾವಿನಪಳ್ಳಿಗೈದಿ ಬೇಗ
ಚಿಕ್ಕ ಕರುವುಗಳ ನೇವರಿಸಿ ತುಡುಕಿಸಿ ಪಿಡಿದು
ಚೊಕ್ಕಪಾಲಿಂದಟ್ಟ ಷಡುರಸಾನ್ನವನು
ಭಿಕ್ಷವನು......... ॥ ೧ ॥

ಸಾತಳಿರ ಎಲೆಗಳಲಿ ಎಡೆಮಾಡಿ ಖಳಿರ್ವಲ್ಲಿ
ಯಾತವಾಡಿದ ನೀರ ಛಳೆಯಗೊಟ್ಟು
ನೀ ತಲುವದಿಕ್ಕೆಂದು ಕಲಿ ಬಾಲೆಯರೊಲಿದು
ಜ್ಯೋತಿರ್ಮಯಂಗೆ ಮಂತ್ರಶಿಲೆಯಪಾತ್ರೆಯಲಿ
ಭಿಕ್ಷವನು..... ॥ ೨ ॥

ಮಳಲಿನಲಿ ಬೆಳದ ಮರವಡಿಯ ಹಲಸಿನ ಹಣ್ಣ ಆದ
ಸಲಿಸಿ ಸವುಳನಾಡುವರೆ ದೇವ

ಕಳಸನಿಷ್ಟಾರ್ಥಗಳನೀವ ಕರುಣಾನಿಧಿಯೆ
ಕೆಳದಿಪುರವಾಸ ಶ್ರೀರಾಮಲಿಂಗನಿಗೆ
ಭಿಕ್ಷವನು ನೀಡಿದರು ಮೋಕ್ಷದಾಪೇಕ್ಷೆಯಲಿ ॥ ೩ ॥

 

೯೪

ಪುಗುಡಿ ಇದು ತಿಗುಡಿ ಜಾಣ್ಮೆರೀಗೆಲ್ಲ
ಪುಗುಡಿಯನಾಡುವ ॥ ಪಲ್ಲ ॥

ನೆರಮನೆ ಹೊರಮನೆ ಗರತೇರ ಕೂಡಿ
ಸರಿಬಂದ ಹಾಂಗೆ ನಾಂ ಹಾಡನೆ ಹಾಡಿ
ಹರಣದ ಬರನಿಕರದ ಪಾಕ ?
ಸ್ಮರಣೆಯ ಮಾಡುವದಲ್ಲ ಈ ಪುಗುಡಿ ॥ ೧ ॥

ಹುಣ್ಣುವೆ ಬೆಳದಿಂಗಳೊಳಗೆಲ್ಲ ಬಂದು
ಸಣ್ಣ ಬಣ್ಣಗಳೆಲ್ಲ ಸವುಕರ್ಯವೆಂದು
ತಣ್ಣನ ಹೊತ್ತಿಲಿ ತರಹರವಾಗಿದೆ
ಕಣ್ಣುಗಾಣದೆ ಹೋಗುವುದಲ್ಲ ಈ ಪುಗುಡಿ ॥ ೨ ॥

ಪರಮ ಸು ಭಾವದೊಳು ಕೂಡಿಕೊಂಡಿರಲು
ವರ ಗುರು ತಾನಾಗಿ ಬಂದು ಆಡಿಸಲು
ಹೊರಗೆ ಒಳಗೆ ಚಿತ್ತಾತ್ಮ ಕೇತಾರೇಶ
ಭರಿತ ಚಿತ್ಕರಣದಿಂದಾಡಿದ ಪುಗುಡಿ ॥ ೩ ॥

೯೫

ಹಾದರವಾಡಿದೆನೆ ನಾನೊಂದ್ಹಾದರವಾಡಿದೆನೆ
ಹಾದರವಾಡಿದ ಹವಣದು ಬೇರೆ
ಸದಮಲವನಿಸುವ ಜಂಗಮದಲ್ಲಿ ॥ ಪಲ್ಲ ॥

ಶರಣಸತಿ ಲಿಂಗಪತಿಯೆಂಬ
ಪರಿಣಾಮವು ದೊರಕಿಕೊಂಡಿರಲಿಕ್ಕೆ

ಪರಮಾನಂದದಿ ಜಂಗಮ ಬಂದು
ಹೊರಗೆ ಒಳಗೆ ಸುಳಿದಾಡುತಿರಲು ॥ ೧ ॥

ಪತಿವ್ರತಭಾವದಿ ಅತಿಹರುಷದಿ ಮನ
ರತಿಯಿಂದಲೆ ಹಿತವಾಗಿರಲಿಕ್ಕೆ
ಕ್ಷಿತಿಯೊಳಗಪ್ರತಿಸ್ಥಲನೆಲೆಯಿಲ್ಲದ
ಅತೀತರೂಪ ಜಂಗಮ ಬಂದು ॥ ೨ ॥

ಹಾದರ ಸತಿಯೆಂಬೊ ಜಗದ
ಹದಬದೆಯೆಲ್ಲವ ನೋಡುತಲಿರ್ದು
ಮದನಾರಿಯ ಚಿತ್ತಾತ್ಮನು ಕೇತಾರೇಶ್ವರನು
ಲಿಂಗಜಂಗಮವೆಂದು ॥ ೩ ॥

 

೯೬

ಮೀರಿ ನಡವರೇನೆ ಶರಣಸತಿ
ಮೀರಿ ನಡವರೇನೆ ಮಾರಾರಿ ಮಹಾತ್ಮನ
ಕಾರುಣ್ಯಕರ್ತನ ಸರಸವಾಕ್ಯವ ? ॥ ಪಲ್ಲ ॥

ಕರದಿಷ್ಟಲಿಂಗನ ಕುರುಹುದೋರಿದನ ಸ-
ದ್ಗುರುವರ ವಾಕ್ಯವ ಮೀರಿ ನಡವರೇನೆ ? ॥ ೧ ॥

ಕರುಣಕಟಾಕ್ಷ ಸತ್ಕರುಣದಿ ಖಂಡ್ರಿಸಿ ?
ಪರತತ್ತ್ವನಿಲಯನ ಪರಮ ಪ್ರಕಾಶನ ॥ ೨ ॥

ಒಳಹೊರಗೆನ್ನದೆ ಹೊಳೆಯುವ ಜ್ಯೋತಿಯ
ಬೆಳಗಿನ ಬೆಳಕನು ತಿಳಿದ ಪ್ರಕಾಶನ ॥ ೩ ॥

ಷಡುಸ್ಥಲ ಬ್ರಹ್ಮನ ಷಡುವರ್ಣಾತೀತನ
ನುಡಿವ ಪಂಚಾಕ್ಷರಿ ಮೃಡ ಮುಕ್ತಿಕಾಂತನ ॥ ೪ ॥

ಮನ್ಮಯಮೂರ್ತಿ ಜಗನ್ಮಯರೂಪ ಸು
ಉನ್ಮನಿ ಕೊಟ್ಟೂರ ಷಣ್ಮು[ಖಿ] ನಿಲಯನ || ೫ ||

೯೭

ಇಲ್ಲೇಯಿಂದಲಿ ಶರಣಾರ್ಥಿ ನಿಮ್ಮ
ಮೆಲ್ಲಡಿಗಳಿಗೆ ಬಸವಲಿಂಗಮೂರ್ತಿ
ಇಲ್ಲೇಯಿಂದಲಿ .............. || ಪಲ್ಲ ||

ಮಾಯೆಯ ಮುರಿದಿಟ್ಟ ಬಾ[ಹ ಅ]
ಪಾಯವ ನೆಗ್ಗಲೊತ್ತಿದ ಮೊನೆಗಾರ
[ಕಾಯಯ್ಯ] ಕರುಣ ವಿ[ಹಾ]ರ ಯತಿ
ರಾಯ ಶಿಖಾಮಣಿ ಪುಣ್ಯಶರೀರ
ಇಲ್ಲೇಯಿಂದಲಿ ................ || ೧ ||

ಮಲ್ಲಿಗೆಗೋಲನ ಕೊಂದೆ ಭಾರ್ಯೆ–
ರೆಲ್ಲಕ್ಕೆ ಮುಕ್ತಿಯನಿತ್ತು ಬಂದೆ
ಗೊಲ್ಲಾಳಗೊಲಿದೆತ್ತಿನಿಂದೆ ಜಗ–
ವೆಲ್ಲ ನಿಮ್ಮನು ಪೊಗಳುತಲಿದೆ ತಂದೆ
ಇಲ್ಲೇಯಿಂದಲಿ .............. || ೨ ||

ಕೊಟ್ಟೂರಪುರನೆಲೆವಾಸ ಸ್ವಾಮಿ
ಅಷ್ಟದಿಕ್ಕಿನೊಳು ಅಧಿಕ ಕೈಲಾಸ
ಮುಟ್ಟಿತು ಕೀರ್ತಿ ವಿಶೇಷ ನಿಮ್ಮ
ಅಷ್ಟಮಂತ್ರವೆಯೆಂದು ಬಂದೆ ಪರಮೇಶ
ಇಲ್ಲೇಯಿಂದಲಿ ................. || ೩ ||

೯೮

ಎಂಥ ಬೆಡಗ ಕಂಡೆನೊ ಮೂಜಗದೊಳು
ಎಂಥ ಬೆಡಗ ಕಂಡೆನೊ
ಸಂತೆಯೊಳಗೆ ಮೂರು ಸಾವ ಕಂಡು
ಹೊತ್ತವರಳುತಿರ್ದರು || ಪಲ್ಲ ||

ಹೆಣನೆದ್ದು ಕುಣಿಕುಣಿದು  ಹೂಣಿಸಿಕೊಂಡು
ತಮ್ಮ ನಖಗಳ ನೋಡಿ ನಗುತ
ಜಾಣಗಾರರ ಸವಿ ಜಾಣತನವ ಬಿಟ್ಟು ಸೂಳೆವೆಣ್ಣಾದಳಲ್ಲ
ಓಣಿಯಲ್ಲಿ ಒಂಬತ್ತು ಆನೆಯ ಕಂಡು ಬಣ್ಣಾಗರತಿ ನಗುತ ತ–
ಮ್ಮಣ್ಣನ ಕೂಡೆ ಅಣಕವಾಡಿ ಬೆರದಳು ॥ ೧ ॥

ಸುಣ್ಣಗಾರರ ಮಗಳು ಮೊಲೆಯಿಲ್ಲದ ಹೆಣ್ಣು ಮೋಹಿಸಿ
ತನ್ನ ರತಿಗಲೆಯ ತೋರಿ ನಗುತ
ತಾಳಮರದ ಮೇಲೆ ತೋಲಬಾವಲಿ ಕುಳಿತು ತಲೆದೂಗಿ ಮಾತನಾಡಿ
ಉಪ್ಪಿಲ್ಲದಡಿಗೆಯಟ್ಟು ಉರಿಯೊಳು ಕರ್ಪೂರವ ಕಾಸಿದಂತೆ ॥ ೨ ॥

ಮುಪ್ಪುರಕೊಡೆಯನು ಮೂರುಮರ್ತ್ಯಕೆ ಬಂದು
ರೂಪ ಬೆಡಗ ಮಾಡಿದ
ಅಪ್ರತಿಮ ಮಹಾಶಿವನೂ ಕೊಟ್ಟೂರ ಬಸವ
ರೂಪಾದಿರೂಪನಮ್ಮ ತಾಮಸಂಗಳ ಬಿಟ್ಟು
ತತ್ತ್ವಂಗಳ ಕೇಳಿ ಬಲ್ಲ ಶರಣರು ಹೇಳಿ ॥ ೩ ॥

 

೯೯

ರಾಗ : ಸುರುಟಿ

ಬಜೆ ಬಸವಲಿಂಗ ಚರಣಾಂಬುಜ ಕರು[ಣಾ]ಪಾಂಗ
ಸುಜನಪೋಷಣ ಭುಜಂಗಭೂಷಣ
ಅಜ ಹರೀಂದ್ರಾದಿ ತ್ರಿಜಗ ವಂದಿತ ॥ ಪಲ್ಲ ॥

ಸುಲಲಿತ ಶುಭಗಾತ್ರ ಮೋಹನ ಸುಲಲಿತ ತ್ರೈನೇತ್ರ
ಪುಲಿಚರ್ಮಾಂಬರ ಲಲಾಟಭಸಿತೋ–
ಜ್ವಲ ಜಟಾಧರ ಚಂದ್ರಶೇಖರ ॥ ೧ ॥

ತ್ರೈಪುರ ಜಿತಭೀಮ ಕಾಮಿತ ಶುಭ ಶತೋರ್ಪನಾಮ
ಅಪರಮಹಿಮ ಮಹಾಕೃಪಾಂಬೋಧಿ

ಕಪಾಲದ ಮೃಗ ರಂಜಿಪ ಶುಭಕರ ॥ ೨ ॥
ಪೃಥ್ವಿಗಧಿಕವಾದ ಬರದಿ ಮೃತ್ಯುವ ಜೈಸಿ ಶುಭದ
ಕರ್ಮಮೂರುತಿ ಕೊಟ್ಟೂರೇಶ್ವರ
ಅರ್ಥಿಯಿಂದಲಿಷ್ಟಾರ್ಥ ಪಾಲನಂ ॥ ೩ ॥

❑ ❑

೧೦೦

ರಾಗ : ತೋಡಿ

ಸ್ಫಟಿಕ ಸಂಕಾಶ ಜ್ಯೋತಿಯು ನಿಟಲಾಲಯದಿ
ಸ್ಥೂಲವತ್ತಿ ದೀಪ್ತಿಯ ತೀವಿ
ಘಟದೊಳಗಿರ್ದ ಮಾಯಾಪಟಲಾಂಧಕಾರ ನಿಲ್ಲದೆ
ಪುಟದೋಡುವಂತ ತಾ ನಿಶ್ಚಯ ಭಾವವನ್ನು ಬೀರಿ ॥ ಪಲ್ಲ ॥

ಐದುಮಂದಿರದುಪರಿಯ ಸೌಧದರಮನಿಯ
ನಾದತ್ರಯಂಗಳೊಂದಾಗಿ ಬಾಧಕಜ್ವಾಲೆಯಿಲ್ಲದೆ
ಮೋದ ಪ್ರಕಾಶ ಸರ್ವವೇಧಿಸಿ ಸಂಸೃತಿಯು
ಜಾರಿ ಕಳೆವೇರಿ ಬಹುಮೀರಿ ಸಂಕಾಶದೋರಿ ॥ ೧ ॥

ಮೂರುಮಂಟಪಮಧ್ಯದಿ ತಾರಕಜ್ಯೋತಿ
ಪೂರ ದೀಪ್ತಿಯೊಳು ಶ್ರುತಿ ಭೇರಿ ದುಂದುಭಿನಾದ
ಭೋರೆಂದು ಕೂಗಿ ಕರ್ಮವ ದೂರಮಾಡುತ ಪ್ರಭೆಯು
ಪೂರ ಸುಖಸಾರ ಮನೋಹರ ತೋರ್ಪವಿಚ್ಛರ ॥ ೨ ॥

ರಾತ್ರಿ ಹಗಲೆಂಬುದರಿಯದೆ ಚಿದ್ಬೆಳಗುದೋರ್ಪ
ಕ್ಷೇತ್ರ ಕೋಣನೂರ ಸು ಸಂಗಮ ಧಾತ್ರಿ ಭೋಗದ ಸರ್ವ
ಸೂತ್ರವರಿದು ಸಲೆ [ಚಿ] ನ್ಮಾತ್ರಸಂಕಾಶದ ಜ್ಯೋತಿ ಪ್ರ
ಖ್ಯಾತಿ ಬಹುಖ್ಯಾತಿ ಇದು ನಿಲೆಸಮುಚ್ಚನೊಳೆ ॥ ೩ ॥

❑ ❑

## ೧೦೧

ರಾಗ : ವಸಂತಭೈರವಿ, ಆದಿತಾಳ

ಮಾತಾಡೆನೆಂದರೆ ಮನಸೆ ಬಾರದಲ್ಲೆ ಮಾನಿನಿ ಮ
ಹಾನುಭಾವದನುವನರಿಯದಿರ್ಪ ಜನರೊಳು ॥ ಪಲ್ಲ ॥

ಅಂಗತ್ರಯದೊಳಿರ್ಪ ಲಿಂಗವ ಅರ್ಚಿಪ ಭೇದ
ದಿಂಗಿತವನರಿಯದವರೊಳು ಬಳಿಕ
ಲಿಂಗಕ್ಕೆ ಹಿಂಗದಿಹ ತೃಪ್ತಿಯನರಿಯದೆ ಅನ್ಯದೈವಕ್ಕೆ
ಟೊಂಗನಿಕ್ಕಿ ಕೆಡುವ ಜನರೊಳು ॥ ೧ ॥

ಕಾಯ ಮನ ಪ್ರಾಣವೆಂಬಿವ ಗುರು ಲಿಂಗ ಚರಕೆ
ಪ್ರೀಯದಿಂದಲೀಯದವರೊಳು ಆವಾವಮುಖದಿ
ದಾಯವಾದ ತ್ರಿವಿಧ ನೇಹವ ಸವಿದು ಲಿಂಗಕೆ
ಕಾಯವೆಲ್ಲಾರಿಪ್ಪಜನರೊಳು ? ॥ ೨ ॥

ಹಿರಿದಾರುಸ್ಥಲವನರಿಯದೆ ಬಲ್ಲಂಥ
ಗುರುವ ದೂರಿಕೊಂಬೊ ಭೂರಿಜನರೊಳು ಎನ್ನಯ
ಗುರುವು ಕೋರಾಣ್ಯದ ಶಿವಲಿಂಗೇಶನ–
ವಿರಳ ಪಾದವಾರಿಜವನರಿಯದವರೊಳು ॥ ೩ ॥

❑ ❑

## ೧೦೨

ತಿಳಿಯೊ ಮಾನವನೆ ನಿನ್ನೊಳು ತಿಳಿಯೊ ಮಾನವನೆ
ತಿಳಿಯೊ ಮಾನವ ನಿನ್ನೊಳು ಮಹಾಲಿಂಗದ
ಕಳೆ ಸ್ವರೂಪದ ಬೆಳಗಿನ ಸುಳುಹನು ॥ ಪಲ್ಲ ॥

ಶ್ರೋತ್ರ ಘ್ರಾಣ ನೇತ್ರ ಕೂಟದ ಸೂತ್ರ
ಸುಷುಮ್ನನಾಳದ ಮೂಲದ
ಪಾತ್ರವರಿದು ಛಿನ್ನಾದ ಬಿಂದು ಕ–
ಳತ್ರಯ ಬಲಿದು ಮಹಾಘನಲಿಂಗವ ॥ ೧ ॥

ಹೃದಯದಳ ಪದುಮದ ಮಧ್ಯದಿ
ಬದಲದೆ ಬೆಳಗುವ ನಿಧಿ[ನಿ]ಧಾನದ
ಸದಮಲ ಮೂರುತಿ ಸಚ್ಚಿದಾನಂದದ
ಸುಧಾರಸ ಬಲಿದ ಮಹಾಘನಲಿಂಗವ || ೨ ||

ಸ್ಥೂಲ ಸೂಕ್ಷ್ಮ ಕಾರಣತನುತ್ರಯ-
ದೊಳು ತೋರುವ ಜಾಗ್ರ ಸ್ವಪ್ನ ಸುಷುಪ್ತಿಗಳ
ಕಾಲಕಟ್ಟೆಳೆ ಗತಿಯಳಿದ ಸ್ವಯಂಭು ಸ-
ಲ್ಲೀಲ ಕೋಳೂರ ಮಹಾಘನಲಿಂಗವ
ತಿಳಿಯೊ ಮಾನವನೆ || ೩ ||

೧೦೩

ಸುಜನರ ಸಂಗವ ತೆಜಿಸಿ ಭವಾಬ್ಧಿಯ
ನಿಜಮೋಕ್ಷವಡೆದಳೆ ಪೇಳಮ್ಮ ? || ಪಲ್ಲ ||

ಸಾವಿರದಳಗಳ ತಾವರೆಮಧ್ಯದಿ
ತೀವಿದ ಬೆಳಗು ಅದೇನಮ್ಮ ?
ಭಾವಿಸಿ ಮಹಾನುಭಾವಿಯು ಹುಡುಕುವ
ಜೀವನರತ್ನವೆ ಜಲಜಾಕ್ಷಿ || ೧ ||

ದ್ವಿದಳಪದ್ಮದ ಆ ಧರ್ಮಪೀಠದಿ
ಮೋದದಿ ಬೆಳಗುವದೇನಮ್ಮ ?
ಆದಿಕುಂಡಲಿಯ ಸುನಾದದಿವೊಡೆಯುತ್ತ-
ಲಾದಿತ್ಯ ಶಿರೋಮಣಿ ಕಾಣಮ್ಮ || ೨ ||

ಪಶ್ಚಿಮದ್ವಾರದಿ ನಿಶ್ಚಲದಿಂದಲಿ
ಸ್ವಚ್ಛದಿ ಬೆಳಗುವದೇನಮ್ಮ ?
ಮುಚ್ಚಿದ ಮಾಯವ ಭೇದಿಸಿ ಶ್ರೀ ಗುರು
ಹಚ್ಚಿದ ಚಿಜ್ಜ್ಯೋತಿ ಕಾಣಮ್ಮ || ೩ ||

ಸುಲಲಿತ ಸಾವಿರದೈವತ್ತೆರಡು
ದಳದಿ ಹೊಳೆವ ಬೆಳಗೇನಮ್ಮ ?

ಒಳಹೊರಗೆಲ್ಲ ಬೆಳದು ಮಹಾಲಿಂಗದ
ಕಳೆ ಬೆಳಗುವುದು ಕನ್ಯಾಮಣಿಯೆ || ೪ ||

ನೋಡು ಅಡುತ ಕೂಡದೆ ವಿಷಯವ
ಗೂಢದೆ ಬೆಳಗುವದೇನಮ್ಮ ?
ನೋಡುವ ನಿರ್ಗುಣ ಅಡುತ ನಿಸ್ಪೃಹಾ-
ರೂಢ ಕೋಳೂರುವಾಸನು ಕಾಣೆ || ೫ ||

## ೧೦೪

ಇಷ್ಟಪ್ರಾಣಭಾವವ ತಿಳಿಯಿರೊ
ಶ್ರೇಷ್ಠಭಕ್ತರೆನಿಸುವರು
ಕಷ್ಟಕರ್ಮದ ಶೀಲ ವ್ರತದಲಿ
ಭ್ರಷ್ಟರಾಗಲು ಬ್ಯಾಡಿರೊ || ಪಲ್ಲ ||

ಪ್ರಾಣಲಿಂಗವ ಮೂರುತನುವಿನ
ಕೋಣೆಯೊಳು ಪ್ರತಿನಾಮಗಳ
ಆಣತಿಯಿಂದಲಿ ಗುರುಲಿಂಗಜಂಗಮ
ತಾನೆಯಾಗಿ ತೋರುವದ || ೧ ||

ಕಾರಣಾಂಗದಿ ಪ್ರಾಣಲಿಂಗ
ಸಾರ ಸದ್ಭಾವದಲಿಂಗ
ಮೀರಿದ ಸೂಕ್ಷ್ಮ ಸ್ಥೂಲ ಶರೀರದಿ
ತೋರುವದಿಷ್ಟಲಿಂಗವಲ್ಲಿ || ೨ ||

ತನು ಶ್ರೀಗುರುವಿಗೆ ಮನವನು ಲಿಂಗಕೆ
ಧನವನು ಜಂಗಮಕೊಪ್ಪಿಸಿರೊ
ತನುಮನಧನದಲಿ ಗುರುಲಿಂಗಜಂಗಮ-
ವನುದಿನವಿರುತಿಹದರಿತರಿತು || ೩ ||

ಇಷ್ಟಲಿಂಗವ ಪ್ರಾಣಲಿಂಗಕೆ
ಕಟ್ಟಿ ಸದ್ಭಾವದ ಕರದಿ
ದಿಟ್ಟೆರಡಿಲ್ಲದ ದೃಷ್ಟಿ ನೆನಹಿನ
ಶ್ರೇಷ್ಠ ಪ್ರಸಾದವ ಸವಿದುಣಿರೊ ೪

ಕೇಳಲು ಸತ್ಪಥ[ವ] ಹೇಳುವರಲ್ಲದೆ
ಕೇಳದಿರಲು ಹೇಳುವರೊಳರೆ
ಕೇಳಲು ಸದ್ಗುರು ಹೇಳುವನೊಲಿದು
ಕೋಳೂರೇಶನ ಕಳೆ ನೆಲೆಯ ॥ ೫ ॥

೧೦೫

ಭಿನ್ನಭಾವಗಳುಂಟೆ ಸುಜ್ಞಾನಿಗೆ ? ಇನ್ನೊಂದು ಭವಮದುಂಟೆ ?
ತನ್ನ ಜೀವತ್ವವ ವಿಡಂಬಿಸಿ ಸನ್ನಹಿತ ಗುರುಕರದೊಳೊಗೆದು
ತನ್ನಯ ನಿಜದೊಳು ಬೆಳಗುತಿಹ ಶೂನ್ಯಲಿಂಗದೊಳೈಕ್ಯವಾದಗೆ ॥ ಪಲ್ಲ ॥

ಪಂಕಜದೊಳಗೆ ಪದ್ಮವು ಸಂಜನಿಸಿ ತಾ ಪಂಕಜವೆನಿಸುವಂತೆ
ಕಿಂಕರತ್ವದಿ ನರರೊಳಿರ್ದುನಂಕಿತಲ್ಲದ ನಳಿನ ಕೆಸರಿನ
ಅಂಕೆ ತಪ್ಪಿದ ತೆರ[ದಿ] ನಿಜಾತ್ಮದೊಳಂಕುರಿಸಿ ಪುಸಿಮನುಜನೆನಿಪಗೆ॥ ೧ ॥

ಮಳೆಗಾಲ ಬಾಳಾದರೆ ಆ ಜಲದಿಂದ ತಿಳಿಮುತ್ತು ಹುಟ್ಟುವದೆ ?
ತಿಳಿದು ಗುರುವಿನಿಂದರಿದು ಸ್ವಾತಿಯ ಮಳೆಗೆ ಚಿಪ್ಪಿ-
ನೊಳಸೆವ ಮೌಕ್ತಿಕ ಮಳೆಯ ಶುಕ್ತಿಯ ಮೀರಿದಂತಿರೆ
ಅಳಿವಮನುಜರನುಳಿದ ಪುರುಷಗೆ ? ॥ ೨ ॥

ಭಾನು ನೀರೊಳು ಬಿಂಬಿಸೆ ಸೂರ್ಯನು ಜಲಮೆನವರಿರವಲ್ಲದ
ಮಾನವರ ಕೂಡ್ಯಾಡಿದರೆ ಜ್ಞಾನಿ ಮನುಜರೊಳಿಲ್ಲ ಸಂಸ್ಕೃತಿ
ಕಾನನದಿ ಮರಿಸಿಂಗನಂತಿರುತಾನೆ ಕೋಳೂರೇಶನೆನಿಪಗೆ
ಭಿನ್ನಭಾವಗಳುಂಟೆ ॥ ೩ ॥

❑ ❑

೧೦೬

ಶೀಲವಂತರೆಯಿವರು ಶಿವನಭಕ್ತರೆ ? ॥ ಪಲ್ಲ ॥

ಒಂದು ಜಂಗಮ ಹಸಿದು ಬರಲು
ಚಂದದಿಂದ ಕುಳಿತು ನಗುತ
ಮುಂದಲಮನೆಗೆ ಸಾಗಿರೆಂಬ
ಹಂದಿ ಸೂಳೆಮಕ್ಕಳೆಲ್ಲ ॥ ೧ ॥

ತಾಮ್ರ ಗೂಡು ಗೋಡೆಗಳನು
ಗಾಢವೆದ್ದು ಪೂಜೆಮಾಡಿ
ರೂಢಿಗಧಿಕ ಬ್ರಹ್ಮನೆಂದು
ಬೇಡಿಕೊಂಬ ಹೊಲೆಯರೆಲ್ಲ ॥ ೨ ॥

ಗುರುವು ಕೊಟ್ಟ ಲಿಂಗವನ್ನು
ಕೊರಳಿನಲ್ಲಿ ಧರಿಸಿಕೊಂಡು
ಗುರುವು ಗಂಗಾಧರನ ಪಾದ
ಸ್ಮರಿಸದವರು ಶೀಲವಂತರೆ ? ॥ ೩ ॥

೧೦೭

ರಾಗ : ಶಂಕರಾಭರಣ

ಮಂದಗಮನೆ ನೋಡಿದೊಂದು ಭೋದ್ಯದೊಲವನು
ಇಂದುಮುಖಿಯ ಕೂಟದೊಳೆಸೆವ ಚೆಲುವ ಕೊಂಕನು ॥ ಪಲ್ಲ ॥

ಬಿದಿಗಿ ಚಂದಿರ ನಡೆಯಲಾರದೆ ಗಿರಿಯೊಳಿಳಿದನೊ
ಮುದದಿ ಶಂಭುವಿಗೇರಿಸಿರ್ದ ಕಿಂಶು[ಕ]ಕುಸುಮವೊ
ಮದನ ಜಗವ ಗೆಲಿದು ತಂದಿಟ್ಟ ಕುಸುಮಧನುವಿದೊ
ಚದುರ ಕಟಿದು ಬೊಗರಿಗಿಟ್ಟ ಬಣ್ಣದ ರೇಖೆಯೊ ॥ ೧ ॥

ಅಧರಕನಕಕಲಶದೆಡೆಗೆ ಛಾಯದೋರಿತೊ
ಮಧುರಫಲವ ಸವಿಯ ಬಂದ ಗಿಳಿಯ ಚಂಚುವೊ
ಮೃದು ಶರೀರ ತಟದಿ ಸ್ಮರನು ಕಟ್ಟಿದ ಚಂಚಿಯೊ
ಮದನಕರಿಯ ಸಿರದೊಳಕ್ಕಿದ ಅಂಕುಶ ತಾನಿದೊ ॥ ೨ ॥

ಶೃಂಗಾರದೊಳಗಿದೊಂದು ಮೇಲಂದು ಬರದ ಲೆಕ್ಕವೊ
ಅಂಗಜ ತೆಂಗಿನಕಾಯ ಕೆಡಹಲಿಕ್ಕಿದ ದೋಂಟಿಯೊ
ಪುಂಗವಗಮನ ಗಂಗಾಧರೇಶನು ತನ್ನ ಕಾಂತೆಯ
ಸಂಗಸುಖದಿ ಬೆರದ ಬಗೆಯ ಕುರುಹು ತಾನಿದೊ ॥ ೩ ॥

❑ ❑

೧೦೮

ಎನ್ನ ಹೃದಯಕರ್ತುರ್ ನೀವೆ ಗುಬ್ಬಿ
ಚೆನ್ನಬಸವಲಿಂಗ ತಾನೆ
ನಿಮ್ಮ ನಂಬಿದ ಸದ್‌ಭಕ್ತರಿಗಿಷ್ಟಾರ್ಥವ
ಚೆನ್ನಾಗಿ ಪಾಲಿಪ ಸಾಕ್ಷಾತ್ ಪ್ರಭುವೇ
ಎನ್ನ ಹೃದಯ ಕರ್ತುರ್......... ॥ ಪಲ್ಲ ॥

ಅಲ್ಲಿ ಕೈಲಾಸದಿಂದಿಳಿದೆ ಅಕ್ಕನಲ್ಲಿ
ಕಲ್ಯಾಣದೊಳು ಬೆಳೆದೆ
[ಮೊಲ್ಲೆಬೊಮ್ಮ]ನು ಜಗದೇವರ ಕೈಯಿಂದ
ಬಲ್ಲಿದ ಬಿಜ್ಜಳರಾಯನ ಗೆಲಿದೆ
ಎನ್ನ ಹೃದಯ ಕರ್ತುರ್....... ॥ ೧ ॥

ಒಂಬತ್ತುನೆಲೆಯ ತೇರಿನೊಳು ಬರು
ಸಂಭ್ರಮ ದುಕೂಲಾಂಬರದೊಳು
ತುಂಬಿದ ಸಭೆ ತಾಳ ಮ್ಯಾಳದೊಡ್ಡೋಲಗ
ರಂಭಪುಷ್ಪಕವೇರಿ ರಥದೊಳಿಹ ಯೋಗಿ
ಎನ್ನ ಹೃದಯ ಕರ್ತುರ್......... ॥ ೨ ॥

ರುದ್ರಾಕ್ಷಿಮಂಟಪವೇರಿ ಸ್ವಾಮಿ
ಎದ್ದು ಬರುತಾರೆ ಸವಾರಿ
ಇದ್ದೆಡಬಲ ಚಂದ್ರಚೂಡ ನಿಶಾ[ನಿ]ನ
ಮುದ್ದು ಬೆಳಕಿನೊಳಿರು[ವ] ವಿರಕ್ತ
ಎನ್ನ ಹೃದಯ ಕರ್ತುರ್......... ॥ ೩ ॥

ಚಂದ್ರಸೂರ್ಯರ ಬೀದಿಯಿಂದೆ ಮುಂದೆ
ಅಂದವಾಗಿಹ ತೋಪಿನಿಂದ
ಹಿಂದೆ ಹುವ್ವಿನತೋಟ ಕುಂದಣದೊಳು ಮಾಟ
ಚಂದವಾಗಿರುತಿರ್ಪ ಸುಂದರ ಯೋಗಿಯೆ
ಎನ್ನ ಹೃದಯ ಕರ್ತುರ್.......... ॥ ೪ ॥

ಲಕ್ಷದೀವಿಗೆಯ ಬೆಳಗಿನೊಳು [ಬಾಹ]
ಪಕ್ಷಭಕ್ತರು ಸಂತೋಷದೊಳು
ರಕ್ಷಣ್ಯದಮೂರ್ತಿ ಕರಸ್ಥಲದ ಗುಬ್ಬಿಯೊಳ–
ಧ್ಯಕ್ಷನಾಗಿಹ ಚೆನ್ನಬಸವರಾಜ
ಎನ್ನ ಹೃದಯ ಕರ್ತು......... ॥ ೬ ॥

ಭಕ್ತಾಂಗನೆಯರೆಲ್ಲ ಕೂಡಿ ಬೇಗ
ಮುತ್ತಿನಾರತಿಗಳ ಮಾಡಿ
ಮುಕ್ತಿ ಬೇಡುವೆಂದು ಬೆಳಗಿ ಕೊಂಡಾಡುವ
ಹೆತ್ತಯ್ಯ ಜಯ ಜಯ ತಾತನೆನಿಸಿಕೊಂಬೆ
ಎನ್ನ ಹೃದಯ ಕರ್ತು......... ॥ ೭ ॥

❑ ❑

## ೧೦೪

ಶಿವಯೋಗಿ ಶಿವಯೋಗಿ ನಿಜ ನಿರ್ಗುಣ
ಪದ ಭೋಗಿ ಶಿವ[ಯೋಗಿ] ॥ ಪಲ್ಲ ॥

'ವಿವೇಕಚಿಂತಾಮಣಿ'ಯೆ
ಕೇವಲ ಪರತತ್ತ್ವದ ಕಣಿಯೆ ನಿಜಗುಣಶಿವಯೋಗಿ ॥ ೧ ॥

'ಪರಮಾ[ರ್ಥ]ಪ್ರಕಾಶಿಕೆ'ಯಿಂದ ಭಕ್ತರ
ದುರಿತವ ಪರಿಹರ ಬಂಧ ನಿಜಗುಣಶಿವಯೋಗಿ ॥ ೨ ॥

'ಪರಮಾನುಭವಬೋಧೆ' ಬ್ರಹ್ಮದ
ನಿರವಯ ಪದ ಶೋಧ ನಿಜಗುಣಶಿವಯೋಗಿ ॥ ೩ ॥

'ಅನುಭವಸಾರ' ತತ್ತ್ವವಿಚಾರ
ಚಿನುಮಯ ವಸ್ತುವಿಚಾರ ನಿಜಗುಣಶಿವಯೋಗಿ ॥ ೪ ॥

'ಅನುಭವಗೀತೆ' ಬ್ರಹ್ಮದ ನೀತಿ
ತನುಗುಣ ನಿರ್ಜಿತ ಜ್ಯೋತಿ ನಿಜಗುಣಶಿವಯೋಗಿ ॥ ೫ ॥

'ಕೈವಲ್ಯಪದ್ಧತಿ'ಯೆ ಕೇವಲ
ಪರಬ್ರಹ್ಮವೇವ ದ್ವಿತೀಯ ನಿಜಗುಣಶಿವಯೋಗಿ ॥ ೬ ॥

ಆರುಮುಖದಿ ತಾ ನಿಂದ
ಗುರು ಕುಮಾರಸ್ವಾಮಿಯ ಹೊಂದೊ
ನಿಜಗುಣಶಿವಯೋಗಿ ಶಿವಯೋಗಿ ॥ ೭ ॥

❑ ❑

೧೧೦

ಕರದರೆ ಮಾತನಾಡ ಕಣ್ಣೆತ್ತಿ ನೋಡ
ಕರದರೆ ಮಾತನಾಡ ಕಂ-
ಡರೆ ತಿರುಗಿ ನೋಡ
ಬರಿಮಾತಿನಿಂದಲಿ ಬಾರಿ ಬಾರಿಗೆ ನೋಡ ॥ ಪಲ್ಲ ॥

ಕಸ್ತೂರಿವೀಣೆಯ ನಿನ್ನಾಣೆ ಏ ಮನಸು ನಿಲ್ಲದು
ಕಾಣೇ ವೈಯಾರಿ ಸುಪ್ರವೀಣೆ ॥ ೧ ॥

ಮಾರನ ಸಮರೂಪ ಮಲ್ಲಮ ? ಜಂಗಮನೆ ಸು
ಪುಲ್ಲಶರನ ಭಾದೆಯ ಎಲ್ಲ ನಾ ತಾಳಲಾರೆ ॥ ೨ ॥

ಅರವಿಂದನಯನೆ ಕೇಳ್ ಕರುಣ[ದಾ]ಯಿ ಕೇಳೆ
ಗುರು ಗುಹೇಶ್ವರಗೇಳೆ ಚರಣಕೆರಗು ನಾಳೆ ॥ ೩ ॥

❑ ❑

೧೧೧

ಏಕೆ ಬಳಲುತಿದ್ದೆ ಮನವೆ ಬರು
ದ್ಯಾಕೆ ಚಿಂತೆಬಡುವೆ ಮನವೆ
ಲೋಕದೊಡೆಯ ತಾನೆ ಕಡಿಹಾಯಿಸುವ-
ನೇಕಭಾವದಿ ಭಜಿಸೆ ಮನವೆ ॥ ಪಲ್ಲ ॥

ಕೊಟ್ಟು ಹುಟ್ಟಲಿಲ್ಲ ಮನವೆ ಬಾಯ
ಬಿಟ್ಟರೇಂ ಬಾಹುದೆಲೆ ಮನವೆ ?
ಎಷ್ಟು ನಿನ್ನ ಅದೃಷ್ಟದೊಳಗೆ ಬರ-
ದಷ್ಟು ಬಾಹುದೆಲೆ ಮನವೆ ॥ ೧ ॥

ಎಂದಿಗಿದ್ದರೆ ಏ ಏ ಮನವೆ
ಬಂದಂತೆ ಹೋಗು ಏ ಮನವೆ
ಬಂದ ಮಾರಿ ಪಲ್ಲದಳ ? ಬಿಡುವುದು
ಒಂದು ನುಡಿಯದಿರೆ ಮನವೆ ॥ ೨ ॥

ಕೆಟ್ಟದೊಲ್ಲನೆಂದರೆ ಮನವೆ ಅದು
ಬಿಟ್ಟಥ್ಯಾಂಗೆ ನಿನ್ನನೆ ಮನವೆ
ಗಟ್ಟ್ಯಾಗಿ ಶರಗಿಲಿ ಕಟ್ಟಿಕೊಂಡ ಫಲ
ಮುಟ್ಟ ಉಣಲಿ ಬೇಕೆ [ಮನವೆ] ॥ ೩ ॥

ಸತ್ತು ಹೋದ ಮೇಲೆ ದೇಹ
ಎತ್ತ ಬೀಳುವದೆ [ಮನವೆ]
ಮೃತ್ಯುಗಂಜದ ಕರ್ತು ಶ್ರೀ ಗುರುವಿನ
ನಿತ್ಯ ಬಿಡದೆ ಭಜಿಸು [ಮನವೆ ] ॥ ೪ ॥

ದೇಶದೊಳ್ಳೆನೆಲೆಯೆ ಮನವೆ ನಿಜ
ವಾಸವದು ನೋಡ [ಲೆ] ಮನವೆ
ದೋಷರಹಿತ ಗುರು ಚೆನ್ನವೀರೇಶನ
ಧ್ಯಾಸದೊಳಿರುಕಂಡ ಮನವೆ ॥ ೫ ॥

❑ ❑

೧೧೨

ತೊಳಲದಿರು ಕಂಡಕಡೆಗೆ ಚಿದ್ರೂಪ-
ನೊಳಗೆ ನಿಂತು ಸುಖಿಸ ॥ ಪಲ್ಲ ॥

ಲಿಪಿಯೊಳಖಿಳವ ಚಿಂತಿ[ಸಿ] ಕೊನೆಕೊನೆಗೆ
ಕಪಿಯಂತೆ ನೆಗೆದಾಡ[ದೆ]

ಗುಪಿತದೊಳಿದ್ದು ಆತ್ಮನ ಧ್ಯಾನಿ[ಸಿ–]
ಯಪರಿಮಿತ ಸುಖವ ಸುಖಿಸ ॥ ೧ ॥

ನಾಗ ನರ ಸುರಲೋಕವ[ನು] ನೆನನೆನದು
ಕಾಗೆಯಂತೆ ಎಡೆಯಾಡದೆ
ರಾಗ ದ್ವೇಷವ ತೊಲಗಿ[ಸಿ] ಗುರು ನಿರಂಜನ
ಯೋಗದೊಳು ನಿಂತು ಸುಖಿಸ ॥ ೨ ॥

ಪರರಿಗಿದ ಸೂಚಿಸದಿರಾ ಸಿದ್ಧಾಂತ
ಪರಮತತ್ತ್ವದ ತಿಳಿವಿದು
ಗುರು ನಿರಂಜನಸಿದ್ಧನ ಧ್ಯಾನಿಸಲು
ಸಿರಿಯಹುದು ಮುಕ್ತಿಯಹುದು ॥ ೩ ॥

❑ ❑

೧೧೩

ರಾಗ : ದೇಶಿ

ಇವರನೇತಕೆ ಪಡೆದೆ ಈ ಕಪಟ ಜೀವರನು
ಇವರಿಂದಲಹುದೇನುಳಿದುದೇನಿಂದು ॥ ಪಲ್ಲ ॥

ಸುಮ್ಮನಿರದೆ ನೀನು ಸುಖಬಡುವೆನೆಂದೊಂಬ
ಹಮ್ಮಿಗೆ ಹೇವರಿಸದೀ ಜಗವನು
ಉಮ್ಮಯದಿಂದ ಮಾಟವಱಿಯದಿಹ
ಸಮ್ಮಗಾಱಿ ಸಭೆಯಲ್ಲಿ ಸಲುವ ಮುಖವುಂಟೆ ? ॥ ೧ ॥

ಹುಟ್ಟಿಸಿದ ತಂದೆಯನು ಹುರುಳನಱಿಯದೆ ಹೋಗಿ
ಹುಟ್ಟಿ ಸಾವವರ ಹೆಸರನು ಹೇಳುವ
ಹುಟ್ಟುಗುರುಡರ ನೆರವಿ ಹುಟ್ಟದಿರೆ ನಿನ್ನರದ ?
ಕಟ್ಟದೆಂದು ಮಾಡಿದೆಯೆ ಕಾಣೆನೆಲೆ ದೇವ ॥ ೨ ॥

ಸತ್ಯ ಸಹಾಯದ ತಾಯ ಸಲಹಿಕೊಳ್ಳದೆ ಬಿಟ್ಟು
ಮೃತ್ಯುವಾಗಿಹ ಮಾಯೆಗಿಂಬುಗೊಟ್ಟು

ಮುತ್ತಿ ಮುಸುಕಿಹ ಕರ್ಮ ಕತ್ತಲೆಯೊಳುರುಳುತಿಹ
ಹೊತ್ತು ಹೋಕರನುರುಹು ಗುರು ನೀಲಗ್ರೀವ ।೩।

## ೧೧೪

### ರಾಗಃ ಮಾಳಿ

ನಂಬದೆನ್ನಯ ಮನ ನಿಮ್ಮನಱಿತಱಿಯದ
ಹೆಂಬೇಡಿಗಳ ಕಂಡು ಹೇಸಿತು ಹೆಱಸಾರಿತು ॥ ಪಲ್ಲ ॥

ಹಲವು ಬಗೆಯಲಿಂದಾವರಿಸಿ ವಂಚನೆಯಲ್ಲಿ
ಮಲತು ನಿಮಗೆ ಮರೆಯಾಗುತ ಮೇಳುದೋಱುತಾ
ಮಲತ್ರಯದೊಳು ಬಿದ್ದು ಸಲೆ ಸತ್ತು ಹುಟ್ಟುವ
ಹೊಲೆಯರ ಹೊಲಬ ತಾ ಹೊಗದು ದಯವಾಗದು ॥ ೧ ॥

ನುಡಿಯ ಸ್ವಾದವ ತೋಱಿ ಎಡೆಯಾಡುವದ ಕಂಡು
ಬಿಡದೆ ಬಾಯನೆ ಬಿಂಕದೋಱುತ ಬಿಗುಹೇಱುತ
ನಡೆಗೆಟ್ಟು ನಡೆದು ನಿಮ್ಮಡಿಗೆ ಕಂಟಕರಾದ
ಜಡ ಜೀವಿಗಳ ಹೊಂದಲೊಲ್ಲದು ಅಲ್ಲಿ ನಿಲ್ಲದು ॥ ೨ ॥

ಬೇಡಿಕೊಂಬೆನು ನಿಮ್ಮ ಪಾಡುಗೆಡಿಸಬೇಡ
ಮೂಢ ಕಲೆಯಲತಿ ನೊಂದಿದೆ ಭಂಗಬಂದಿದೆ ನಾ-
ನಾಡಿ ತೋಱಲದೇಕೆ ಅಱಿದಾ ಸುಖ ದುಃಖ
ನೋಡಿಕೋ ಗುರು ನೀಲಗ್ರೀವನೆ ಮಹದೇವನೆ ॥ ೩ ॥

## ೧೧೫

### ರಾಗಃ ಪಹಡಿ

ಬಾಳಬಹುದೆ ಬ್ರಹ್ಮವಱಿತು ಇಂಥ
ಖೂಳರೆಡೆಯಲೊಂದು ನಿಮುಷವಾದರು ದೇವ ॥ ಪಲ್ಲ ॥

ಅಲ್ಲವೆ ಆಕ್ಷಣವೈಕ್ಯವಾಗಲಿಬೇಕು
ಇಲ್ಲವೆ ಈ ಮರ್ತ್ಯದೆಳೆತಟವಾ-

ಗಿಲ್ಲದೆಲ್ಲವನೊದ್ದು ನಿಜದಿ ನಿಲ್ಲಲಿಬೇಕು ಅ-
ದಲ್ಲದೆ ಕಪಟದೊಳು ಬದುಕಲಾಗದು ದೇವ ॥ ೧ ॥

ಕಂಟಣಿಸದೆ ಕಾಡೊಳಗಿರುವದೊಮ್ಮೆಗೆ ಲೇಸು
[ತು]ಂಟ ವ್ಯಾಘ್ರನ ಕೂಟಣಾಟವೆ ಲೇಸು
ಕಂಠಗರಳಸರ್ಪನ ನಂಟುತನ ಲೇಸು
ಕಂಟಕರಿಂದಿರಲಿಯಿಹುದು ಕಷ್ಟವೆಲೆ ದೇವ ॥ ೨ ॥

ನಿನ್ನಿಂದಲುದಿಸಿ ಇವರು ನಿನ್ನ ಕಾಣರು
ನಿನ್ನವರೆಂದರಿವರು ಬಲ್ಲರೆ
ಗನ್ನ ಘಾತಕರ ನೆರವಿಗೆನ್ನ ತೋಱದೆ
ನಿನ್ನತ್ತಲೊಯಿ ಬೇಗ ಗುರುನೀಲಗ್ರೀವ ॥ ೩ ॥

೧೧೩

ರಾಗ: ಸೌರಾಷ್ಟ್ರ

ಹೀಗೇಕೆ ನುಡಿವರೊ ಕಂಡಾ ಭಕ್ತ
ರಾಗುಹೋಗಱಿಯದೆ ಅಧಮರ ತಂಡ ॥ ಪಲ್ಲ ॥

ಹಿಂದು ಮುಂದಱಿಯದಲಿಂದು ಸಲೆ
ಸಂದ ಪುರಾತರ ನಡೆಗಾಣದಿಂದು ನುಡಿಗಾಣದಿಂದು
ಬಂದಿಲ್ಲವವರೀಗಲೆಂದು ಅಂದಿ
ನಂದೆ ಹೋದರು ತಮ್ಮ ತನುಸಹವೆಂದು ॥ ೧ ॥

ಅವನಿಯೊಳ್ಪುದುಗಿರಲರ್ಥ ಅದ
ಹವಣಿಸಿ ತೆಗೆವನ ಬಗೆಯೆ ಸುಚಿತ್ತ
ಶಿವನೊಡವೆರದಂತಸ್ಥದೊಂದು
ವಿವರಗಾಣದೆ ಬಗುಳವರಸ್ತವ್ಯಸ್ತ ॥ ೨ ॥

ಲೀಲೆ ಕಾರಣ ಭೂತವ್ಯೆದ ಅದ
ಸಾಲವ ತೆಗದು ತಿರ್ದುವರತ್ತವ್ಯೆದ
ಶೀಲವ[ನರಿವವರನ]ತ್ತಲೊಯಿದ ಗುರು
ನೀಲಗ್ರೀವನೆ ನೋಡು ನೀಚರ ಸುಮ್ಮನಿರವ ॥ ೩ ॥

೧೧೭

ರಾಗ : ರೇಗುಪ್ತಿ

ಕಾಣಿಸುತಿದೆ ವಸ್ತು ನಿನ್ನಕಣ್ಣುಂದೆ ಕಾಣಿಸುತಿದೆ ವಸ್ತು
ಕಾಣಿಸುತಿದೆ ವಸ್ತು ನಾನಾಮುದ್ರೆಯ ಲಕ್ಷದಿ ನೀನು ಸಾಧಿಸಲ್ಯಾಕೆ
ಕೋಣೆ ಕೋಣೆಗಳಲ್ಲಿ ಪ್ರಾಣಲಿಂಗವು ಭೇದಿಸುತಲಿಹ
ಜಾ[ಣ]ರxx ಕನಸುಗಳ್ಮಧ್ಯ ಸದ್ಗುರು ಪಾಣಿ·ಕರತಳಕಿತ್ತ ಲಿಂಗವು
ಪ್ರಾಣನಾಥನದೆಂದು ತಿಳಿದಡೆ ॥ ಪಲ್ಲ ॥

ಆಸನ ಬಲಿದು ಆಯಾಸದಿಂದ ದ್ವಾರ ಉಚ್ಛ್ವಾಸ ಬಂದಿಸಲ್ಯಾತಕೆ ?
ನಿನಗೆ ಬಹಳ ಘಾಸಿ ಇದೇನು ಬೇಕೆ ? ಇದು ತರವಲ್ಲ
ಈಶ ಶ್ರೀ ಗುರುಮೂರ್ತಿ ನಿನಗೊಲಿದು ವಿಶ್ವಾಸಿ ಲಿಂಗವ
ಸಾಸಿರದಳಪದ್ಮಪೀಠದಿ ವಾಸವಾದನುಮೇಶನನುಭವವ
ಸೂ ಹಸ್ತಕಿತ್ತನರಿ ಜಗದೀಶನೀತನೆಂದು ತಿಳಿದಡೆ ॥ ೧ ॥

ಥಳ ಥಳ ಹೊಳೆವ ಬೆಳಗು ಕಾಂಬುವೆನೆಂದು ತೊಳಲಿ ಬಳಲ ಬ್ಯಾಡವೊ
ಗಾಳಿಗೆಯಿಟ್ಟ ಬಯಲು ದೀಪಗಳು ನಿಲ್ಲವು ಈ ಬಗೆ ಬ್ಯಾಡವೊ
ಮಲಹರ ಸದ್ಗುರು ಮಾರ್ತಾಂಡಕೋಟಿಯ ಕಳೆಗಳೊಬ್ಬುಳಿಮಾಡಿ ನಿನ್ನೆ-
ಸಳ ಕರದಲಿ ಕೊಟ್ಟ ಲಿಂಗವ ಸುಳುಹನಾಲೋಕಿಸುವ ಸೂಕ್ಷ್ಮೆಯ
ಕಳೆಯ ಮನದೊಳು ತಿಳಿದೆಯಾದಡೆ ॥ ೨ ॥

ಕಳೆ ನಾದ ಬಿಂದುಗಳಳಿದು ಸಾಧಿಪೆನೆಂಬ
ಬಲುಮೆ ನಿನಗೆ ಸಲ್ಲದು ವೀರಶೈವರಿಗೆ
ಸ್ವಲುವ ಮಾರ್ಗವಲ್ಲವಿದು ಗುರು ಪರ್ವತಶಿವ
ಸಲೆ ನಿನ್ನ ಶಿರದೊಳಹ ಕಳೆಯನು
ಬಳಿಕ ತೆಗದು ಭಕ್ತಿ ಕಾಯದ ಸಲಿಲxx ಕರ
ತಳಕೆ ಕೊಟ್ಟ ನಿ[ರ್ಲಯ] ನಿಜಘನವಸ್ತು
ನಿರ್ಮಲ ಮನದೊಳರಿದಡೆ ನಿತ್ಯನಾಗುವೆ ॥ ೩ ॥

೧೧೮

ಏನಾದರೆ ಏನು ? ಸತ್ಪುರುಷರಿಗೇನಾದರೆ ಏನು ? ॥ ಪಲ್ಲ ॥
ಮಾನಾಭಿಮಾನವೇನು ? ತಾನಾದಗೆ ನಾನು ನೀನೆಂಬೋದೇನು ?

ಮಾನವನಳಿದು ಚಿದ್ಘನಲಿಂಗವ ಕಂಡು ಚಿನುಮ-
ಯಾತ್ಮಕನಾದ ಸುಗುಣಸ್ವರೂಪರಿಗೇನಾದರೇನು ? ॥ ೧ ॥

ಅಡವಿ ಅರಣ್ಯವೇನು ತಾನಾದಗೆ ? ಗುಡಿ ಗೋಷ್ಠಿ ಮಠಗಳೇನು ?
ಪೋಡವೀಶನಡಿಗಳ ಬಿಡದೆ ಭಜಿಸಿ ಮಹ
ಎಡರನು ಕಳದಂಥ ದೃಢಮಹಾಪುರುಷರಿಗೇನಾದರೇನು ? ॥ ೨ ॥

ಯೋಗದೊಳಿದ್ದರೇನು ? ಸಂಸಾರದ ಭೋಗದೊಳಿದ್ದರೇನು ?
ತಾಗು ನಿರೋಧವ ತಂಬಿಸಿ ಮನದೊಳು
ಶ್ರೀ ಗುರು ಪರ್ವತಯೋಗಿಯ ಭಜಿಪರ್ಗೇನಾದರೇನು ? ॥ ೩ ॥

□ □

೧೧೯

ಮಂಗಳಾರ್ತಿ

ಮಂಗಳವು ಗುರುಪುರದೀಶ ಜಯ
ಮಂಗಳವು ಗುರುಪುರದೀಶ ॥ ಪಲ್ಲ ॥

ಕಂಗಳನೇತ್ರತ್ರಯ ಸು
ಮಂಗಳೆಯರಸ ಘನ
ಹಿಂಗಡಲ ಕಂದನನು
ಹಿಂಗದಿಹ ಮಕುಟನೆ ಮಂಗಳವು ॥ ೧ ॥

ಇಂದಿರೆಯನಾಥ ನಯನ
ವಂದಿತಪಾದನೆ ಮೇರು
ಮಂದಿರದಿ ಮೆರದಿಹ
ಕಂದುಗೊರಳ ಪರಶಿವ [ಮಂಗಳವು] ॥ ೨ ॥

ಮನ್ನಣೆಯ ಹರಿ ವಿ[ಧಿ]
ಚೆನ್ನಗೇಂದ್ರನ ಕೂಡೆ
ನಿನ್ನ ಸೇವೆಯ ಕೊಂಬೆ
ಎನ್ನೊಡೆಯ ಸಿದ್ಧದೇವ ॥ ೩ ॥

□ □

## ೧೨೦

ರಾಗ: ಶುದ್ಧಕಾಂಬೋದಿ

ವನಜಲೋಚನೆ ಇವನಾರೆ ಕಣ್ಣು
ಮನವೆರಡೊಂದಾಗಿ ನೋಡಿತ್ತ ಬಾರೆ ॥ ಪಲ್ಲ ॥

ಕಮ್ಮಸುರನ ಸುಟ್ಟ ಬೂದಿ ಮೇಲೆ
ಸಮ್ಮದುಗುಲವ ಪೊದ್ದು ಸಲೆ ಹೆಗಲದಿ
ಮುಮ್ಮನೆಯೊಳು ಸಬವ್ವೆದಿ ಕೈಲಿ
ಬೊಮ್ಮನ ತಲೆಯೋಡ ಪಿಡಿದ ವಿನೋದಿ ॥ ೧ ॥

ಜೊನ್ನೊಡಲನ ಗೆರೆ ಸಿರದಿ ಪೊಸ
ಜನ್ನಿವಾರೆರಡುನಾಲಿಗೆಯವನುರದಿ
ರನ್ನದಪ್ಪಲುಬಿಲ್ಲಾದರದಿ ಒಂದು
ಸೊನ್ನೆಯವತಾರನ ಸರ ದಕ್ಷಿಣ ಕರದಿ ॥ ೨ ॥

ಅರೆಯೊಡಲೊಳಗೊರ್ವನಾರಿ ವಾಮ
ಕರದಲ್ಲಿ ಮಿಗವಿಡಿದುೞ ದಯಾಪಾರಿ
ಕರ ಚೆಲ್ವ ಮಹಿಮ ಶರೀರಿ ನಮ್ಮ ಶ್ರೀ
ಗುರುಬಸವೇಶನಂತಿಹ ನಿರಾಭಾರಿ ॥ ೩ ॥

❑ ❑

## ೧೨೧

ಗುರುವೆ ಮುಕ್ತಿಯತರುವೆ ನಂಬಿದೆ ನಿನ್ನ
ಚರಣಪಂಕಜ ದೇವ ಚಿರಪುಣ್ಯ ವರಗಣ್ಯ ನುತಿಪಾತ್ರ
ಸ್ಮರಹರ ಭಸಿತಾಂಗ ಪರಮ ಜಂಗಮಲಿಂಗ ॥ ಪಲ್ಲ ॥

ಹರಿಯಜರಾಳ್ದ ಕೇಳು ಧರ್ಮಿ ದಯಾಳು
ನೆರೆ ನಂಬಿದೆನು ನಿಮ್ಮನು
ಪರಮ ಪುಣ್ಯಶರೀರ ಕರಿಚರ್ಮಾಂಬರಧರ
ದುರಿತದುಃಖವಿನಾಶ ತರಣಿಕೋಟಿಪ್ರಕಾಶ ॥ ೧ ॥

ಬಾಲೆಗೊಲಿದು ಹಾಲನು ಸವಿದೆ ನೀನು ಸವಿದೆ ನೀನು
ಶೂ[ಲ]ಧರನೆ ಹರನೆ
ಮೇಲುಮಂದಿರದೀಶ ಪಾಲಿಸೆನ್ನನು ಈಶ
ಬಾಲಚಂದಿರಧರ ಕಾಲಭಯ ಸಂಹಾರ ॥ ೨ ॥

ವರ ಮೌನೇಂದ್ರನ ಗರ್ಭಾಬ್ಧಿಚಂದಿರನಾದ
ನಿರುವಾಣೇಂದ್ರನಿಗೆ ಹೀಗೆ
ಸ್ಥಿರರಾಜ್ಯವಾಳೆಂದು ಹರುಷದಿ ಬಾಳೆಂದು
ವರವ ಪಾಲಿಸುವ ಶ್ರೀ ಗುರುಬಸವೇಶದೇವ ॥ ೩ ॥

❑ ❑

೧೨೨

[ಶಬ್ದಮಣಿಸ್ವಾಮಿಗಳು ನಿರೂಪಿಸಿದ ಪದ]
ಅರಿವಿನ ದೀಪ ಎಚ್ಚರಿಕೆ ಕಂಡ್ಯ ಬಚ್ಚ
ಬರಿಯಾನಂದವನು ತೋರುವುದು ಕಂಡ್ಯ ॥ ಪಲ್ಲ ॥

ಹುಬ್ಬಲಿ ನಟ್ಟನಡುವೆ ಕಂಡ್ಯ ಮೂಗು
ರಿಬ್ಬಟ್ಟೆ ಏರಾಟನಿಲ್ಲಲಿ ಕಂಡ್ಯ
ಶಬ್ದ ಜನದ ತೆರೆ ಜೋಕೆ ಕಂಡ್ಯ ಮೋಹ–
ದುಬ್ಬಿನ ಮೊಬ್ಬು ಹೊದಬಿಡದು ಕಂಡ್ಯ ॥ ೧ ॥

ಕಣ್ಣಗಲದ ಬಾಗಿಲಲ್ಲಿ ಕಂಡ್ಯ ಮೂರು
ಬಣ್ಣದ ಹೃದಯಾಬ್ಜ ಹಣಿತೆ ಕಂಡ್ಯ
ಎಣ್ಣೆ ಬತ್ತಿಯ ಹವಣೆಲ್ಲ ಕಂಡ್ಯ
ಸಣ್ಣನಾಗುರಿವುದು ಸಹಜ ಕಂಡ್ಯ ॥ ೨ ॥

ಇರುಳು ಹಗಲು ನಂದದಿಹುದು ಕಂಡ್ಯ ಇಹ
ಪರಲೋಕ ಸುಖವ ಕಾಣಿಪುದು ಕಂಡ್ಯ
ನಿರುತಚಲಾಕ್ಷಿಲಿ ನೋಡು ಕಂಡ್ಯ ಶ್ರೀ
ಗುರುಬಸವೇಶ್ವರ ತಾನೆ ಕಂಡ್ಯ ॥ ೩ ॥

❑ ❑

೧೨೩

ನಿವಾಳಿ ಬೆಳಗುವ ಬನ್ನಿರಿ ನಳಿನಾಕ್ಷಿಯರೆಲ್ಲ
ನಿರಾಜನವೆತ್ತುವ ಬನ್ನಿರಿ ॥ ಪಲ್ಲ ॥

ಕಾಲಲಂದಿಗಿ ಕೈಯಲಿ ಕಂಕಣ
ಕೀಲಡಾಬು ಬೆರಳುಂಗರ ಸರಪಳಿ
ನೀಲದ ಬಳೆಯು ಹವಳದ ಕಟ್ಟು
ಘಾಲ್ಬಾಣನ ? ಸತಿಯಳು ರತಿದೇವಿ ನೀ ಬಾರೆ ॥ ೧ ॥

ಇಂದುಮುಖಿ ಸುಗಂಧಿ ನೀ ಬಾರ
ಗಂಧ ಕಸ್ತುರಿ ಲೋಭಿ ನೀ ಬಾರ
ಬಂಧೂಗಿ ಬಾಪುರಿ ಪದ್ಮಿನಿ ಬಾರ
ಬ್ರಹ್ಮನ ಸತಿಯಳು ಶಾರದೆ ಬಾರ ॥ ೨ ॥

ಮುತ್ತಿನ ಮೂಗುತಿ ರತ್ನದ ಕಡಗ
ಹತ್ತೆಧರಿಸಿದ ಮುತ್ತಿನಸರ
ಮುತ್ತಿನಬಟ್ಟು [ಪ]ತ್ತಲ ಧರಿಸಿದ
ಮುಕುಂದನ ಸತಿ ಯಶೋಲಕ್ಷ್ಮಿ ಬಾರ ॥ ೩ ॥

ಮಂದಗಮನಿ ನೀ ಇಂದಿರೆ ಬಾರ
ಚಂದ್ರನ ಚಲ್ವಿಕಿ ಸೌಂದರಿ ಬಾರ
ಮಂದಿರ ಜರತಾರ ಕುಪ್ಪಸದೋರ
ಇಂದ್ರನ ಸತಿಯಳು ಶಚಿದೇವಿ ಬಾರ । ೪।

ಘನವಿನ ಪಾದಕ ವಿನಯದಿ ಬಾರ
ಉನ್ಮನಿಜ್ಯೋತಿ ಬೆಳಗನು ತೋರ
ಘನ ಗುರುಲಿಂಗನ ಚರಣಕ
ಅನುದಿನ ರೋಹಿಣಿ ಬಾರ ॥ ೫ ॥

 

೧೨೪

ನಿವಾಳಿ ಗುರುರಾಯ ನಿವಾಳಿ ಬಸವಯ್ಯ
ನಿಮಗ ಮಹದೇವ ನಿಮಗ ನಿವಾಳಿ ॥ ಪಲ್ಲ ॥

ಅತ್ತಿತ್ತಣ ದೃಷ್ಟಿ ಪತ್ತದ ಕಾಳಿಕೆ
ಚಿತ್ತದೊಲ್ಲಭದೇವ ನಿಮಗೆ ನಿವಾಳಿ ॥ ೧ ॥

ಸಂಗನ ಶರಣರ ಕಂಗಳ ಪ್ರಭೆಯುವು
ಅಂಗಕಾವರಿಸಿರೆ ನಿಮಗೆ ನಿವಾಳಿ ॥ ೨ ॥

ಹರಿ ವರಾಹವೇಷದಿ ಅರಸಿ ಕಾಣದ ಪಾದ
ಸರಸಿಜಾನನದಿ ನಿರೀಕ್ಷಿಸಿದೆನಿಪ ಪಾದ ॥ ೩ ॥

ದಾರುಕಾರಣ್ಯದಿ ಚಾರು ನಾರಿಯರೆಲ್ಲ
ಮಾರನಾಟದಿ ನಿರೀಕ್ಷಿಸಿದ ನಿವಾಳಿ ॥ ೪ ॥

ಗುರುಲಿಂಗದೇವನ ಚರಣಕಮಲದೊಳು
ವರ ಭೃಂಗನಾಗೊಪ್ಪಿದೆನು ನಿವಾಳಿ ॥ ೫ ॥

❑ ❑

೧೨೫

ಮುಕ್ಕಣ್ಣನ ಮಹದೇವನ ನೆನೆಯದೆ
ಮುಕ್ಕಳಿತುಂಬಿತ್ಯೆಲೆಯೆಲೆ
ಚಿಕ್ಕ ಬುದ್ಧಿಯಾಕರಿ ತಕ್ಕರದಿನದಲಿ
ಸೊಕ್ಕಿನಮದವೇಕ್ಯೆಲೆಯೆಲೆ ॥ ಪಲ್ಲ ॥

ಬೋನ ವಸ್ತ್ರ ಶಿವ ಆನಂದ ಕೊಟ್ಟರೆ
ಸ್ವಾನನ ಮದವೇರಿತ್ಯೆಲೆಯೆಲೆ
ಮಾನವ ಜನ್ಮಕ ಬಂದು ದಾನ ಧರ್ಮವ ಬಿಟ್ಟು
ಮೋನದಿ ಕುಳಿತುಕೊಂಡ್ಯೆಲೆಯೆಲೆ ॥ ೧ ॥

ವೇದ ಶಾಸ್ತ್ರ ನೀವೋದಿದ್ಧ ಫಲವೆ
ಆದಿಯ ತಿಳಿಯಲಿಲ್ಲೆಲೆಯೆಲೆ
ಪಾದತೀರ್ಥವ ಜರಿದು ಅನ್ಯತೀರ್ಥಕ ಹೋಗಿ
ಪದದವ ಕಾಣಲಿಲ್ಲೆಲೆಯೆಲೆ ॥ ೨ ॥

ಮುದುನೂರು ಮಠದ ಮುತ್ತಿನಪೆಂಡ್ಯನ
ಪದವ xxxx ಪದಯಿದೆ ಮ್ಯೇಲೆ
ಗುರುಲಿಂಗಪ್ಪನ ಚರ[ಣ ಕ]ಮಲದೊಳು
ಸ್ಥಿರಕಾಲ ಪಡಕೊಳ್ಳೆಲೆಯೆಲೆ ॥ ೩ ॥

೧೨೬

ಅರುವಿನ ಜ್ಯೋತಿ ಎಚ್ಚರಿಕೆ ಕಂಡ್ಯ
ಬಟ್ಟಬಯಲಿನನಂದವ ತೋರುವದ ಕಂಡ್ಯ
ಅರಿವಿನಜ್ಯೋತಿ ಎಚ್ಚರಿಕೆ ಕಂಡ್ಯ ॥ ಪಲ್ಲ ॥

ಕಣ್ಣು ಅಲ್ಲದೆ ಬದಲಿಲ್ಲ ಕಂಡ್ಯ ಮೂರು
ಬಣ್ಣದ ಆರುತಿ ಪ್ರಣತಿ ಕಂಡ್ಯ
ಎಣ್ಣೆಯು ಬತ್ತಿ ಹಂಗಿಲ್ಲ ಕಂಡ್ಯ ಅದು
ಸಣ್ಣನಾಗುರಿವುದು ಸಹಜ ಕಂಡ್ಯ ॥ ೧ ॥

ಹುಬ್ಬು ಎರಡರ ನಟ್ಟನಡುವೆ ಕಂಡ್ಯ
ಈಧರೆ ಬೆಟ್ಟದೇರಾಟ ನಿಲಲಿ ಕಂಡ್ಯ
ತೂಬಿನೊಳಗೆ ತ್ಯೆರೆ ತೇಜ ಕಂಡ್ಯ ಮೋಹದ
ಮೊಬ್ಬು ತಲಿಗೆ ಹತ್ತಿ ಬಿಡದು ಕಂಡ್ಯ ॥ ೨ ॥

ಹಗಲಿರುಳೆನ್ನದಲ್ಲಿಹುದು ಕಂಡ್ಯ ಅದು
ಇಹಪರಲೋಕವ ತೋರುವುದು ಕಂಡ್ಯ
ನಿರುತ ಭ್ರೂಲಕ್ಷದಿ ನೋಡುವ ಕಂಡ್ಯ ಎಮ್ಮ
ಹರ ಗುರು ವಿರೂಪಾಕ್ಷ ತಾನೆ ಕಂಡ್ಯ ॥ ೩ ॥

❑ ❑

## ೧೨೭

ಜಯದೇವ ಜಯದೇವ ಜಯ ಪೊಂಪಾಪ್ರಿಯ
ದಯಮಾಡೈ ವಿರೂಪಾಕ್ಷ ದಾತ ನೀನಯ್ಯ || ಪಲ್ಲ ||

ಪಾದಕಮಲವ ಪೂ[ಜಿಸೆ ಭವ] ಹಿಂಗಿತು ಎನಗೆ
ಭೇದಾಭೇದವ ಕಿತ್ತು ಬಿಸುಟಿದ ನೀ ಕಡೆಗೆ
ಸಾದು ಸದ್ಗುರುನಾಥನ ಸಂಧಿಸಿದೆನ್ನೊಳಗೆ
ನಾದ ಬಿಂದು ಕಳೆಗ[ಳಳಿದೆ]ಯೆಮ್ಮೊಳಗೆ || ೧ ||

ತನುತ್ರಯದಲಿ ಮೂವರ ಧನ್ಯರ ನಾ ಕಂಡೆ
ಅನುಭವದಲಿ ನೋಡಲು ಆಮೇಲೊಬ್ಬನ ಕಂಡೆ
ಅ[ನುಭಾವ] ತೂರ್ಯದ ಮನೆಯೊಳು ಅತಿಬೆಳಗನೆ ಕಂಡೆ
ತನು ಮನ ಘನವೈಕ್ಯಾಮೃತ ತೆದ್ವೆಳಗಿನೊಳು ಕಂಡೆ || ೨ ||

ಹೇಮಕೂಟ ಚಿದ ಆಜಚ್ಚಿನ ಮನೆಯೊಳಗೆ
ಶ್ರೀ ಮಹಾವಿಷ್ಣು ಅವಧೂತ ಶ್ರೀ ಗುರುವಿರೂಪಾಕ್ಷರಿಗೆ
ಸೋಮಶೇಖರ ಸಜ್ಯೋತಿಯ ಸೊಬಗಲಿ ನಾ ಬೆಳಗೆ
ಕಮಲಾಕ್ಷಿ ಸು ತ್ರಿವಿಕ್ರಮ ಬೆಳಗಿದ ನಿಜಬೆಳ[ಗಿ] ನೊ[ಳಿಳ]ಗೆ || ೩ ||

## ೧೨೮

ತಿಳಿದು ನೋಡೆ ನಿನ್ನೊಳಗೆ ನೀ[ನು]
ಎಳೆಯಳೆ ನಿನಗೆ ನಾ ಹೇಳುವದೇನು ? || ಪಲ್ಲ ||

ಯತಿಗಳೊಡನೆ ಇಂತ ಕೃತಕ ಬುದ್ಧಿಯ ಮಾಡಿ
ಹತವಾಗಿ ಹೋಹರೇನೆ ಮತಿವಂತೆ ಜಾಣೆ ? || ೧ ||

ಚಪಲನೇತ್ರೆಯೆ ನೀನು ತಪವಮಾಡಿದರಿಂತ
ಸುಪವಿತ್ರ ಕಾಯರು ದೊರಕುವರೇನೆ ? || ೨ ||

ಪರಮಪುರುಷಗಾವಾವ ಪರಿಯಿಂದಲಾದರು
ಹರುಷವ ಮಾಳ್ಪುದೇನೆ ವರ ಗುಣ ರಮಣಿ ? || ೩ ||

ಕರೆ ಕರೆಯಲು ನೀನು  ಸರಸರ ನೋಡಿದೆ
ತರುಣಿ ನಿನ್ನೊಳಗಿಷ್ಟು ಕರುಣವೇನಿಲ್ಲವೆ ? ॥ ೪ ॥

ಗುರು ವಿರೂಪಾಕ್ಷನ ಕರುಣದ ಚರಣಕ್ಕೆ
ಶರಣೆಂದು ಬದುಕೆಲೆ ಮರುಳು  ಮಾನಿನಿ ನೀನು ॥ ೫ ॥

೧೨೯

ನಿನ್ನ ಸ್ಮರಣೆ ಎನಗಿರಲಿ ಗುರುರಾಯ ನಿತ್ಯ
ಅನ್ಯ ಗೋಷ್ಠಿ ಎನಗಿನ್ನು ಮಾಡದ್ವಾಗಿ
ಎನ್ನ ಜನ್ಮ ಪಾವನ್ನ ಮಾಡು ಗುರು[ರಾಯ] ॥ ಪಲ್ಲ ॥

ಉದಯದಲೇಳುತ ಕುಳಿತಾಗ
ಅಧಿಕ ಸುಖವು ಒದಗಿರಲಾಗ
ಸದನದಿ ಸರ್ವದಿ ? ಸುಖ ದುಃಖದೊಳು
ಮದನಕೇಳಿ[ಗೆ] ಮನವನುವಾಗಲು ॥ ೧ ॥

ಗಂಧ ಪುಷ್ಪ ಅನುಲೇಪನದಿ
ಚಂದದಿ ಷಡುರುಚಿ ಭೋಜನದಿ
ವಂದನೆ ನಿಂದನೆ ಬಂದೆಡರಿನಲಿ
ಸಂದೇಹವಿಲ್ಲದೆ ಸರ್ವಕಾವಿನಲಿ ॥ ೨ ॥

ಗಿರಿ ಗುಹೆ ಗಹ್ವರದೊಳಿರಲಿ
ಮೊರವ ವ್ಯಾಘ್ರ ಸರ್ಪಗಳಿರಲಿ
ಭರದಿ ಸಿಡಿಲೆಡೆ ಬಿಡದೆರಗುತ ಬರ–
ಲೆರಕವಾಗಿ[ರಲಿ] ಮನ ಗುರು ವಿರೂಪಾಕ್ಷಗೆ ॥ ೩ ॥

□ □

೧೩೦

ರಾಗ : ಕಲ್ಯಾಣಿ

ಸಲಹು ನೀನೆನ್ನ ಗೌರಿ ಸಂತತ ವಿನುತ ಶೌರಿ
ವಿಲಸಿತಾಂಬುಜಪಾಣಿ ವಿದ್ಯಾರೂಪಿಣಿ ॥ ಪಲ್ಲ ॥

ಅರಿವರ್ಗ ಜಯಧೀರೆ ಅಮಲಸುಗುಣಾಧಾರೆ
ಪರಮ ನಿಗಮವಾಣಿ ಪನ್ನಗವೇಣಿ
ದುರಿತಮದ ವಿದೂರೆ ಧರ್ಮವಿರಹಿತಾಚಾರೆ
ಪುರಹರಾನಂದರೂಪಿ ಪುಣ್ಯ ಕಲಾಪೆ ॥ ೧ ॥

ಸತತಮಾನತ ಪಾದೆ ಶಮಿತಪಾಶ ವಿನೋದೆ
ಯತಿಚೇತೋಮಧ್ಯವಾಸೆ ಯೋಗ ವಿನಾಶೆ
ಜಿತ ಜನ್ಮರಾಗ ಮೂರ್ತಿ ಜೀವಿತ ವಿಶ್ವ ಸು ಲೀಲೆ
ನತಜನವನಕ್ಕೌಂಡೆ ? ನಾಂತ ಚಿತ್ಪಿಂಡೆ ॥ ೨ ॥

ಕರುಣಸಾಗರ ಚಂದ್ರ ಕಲಿತ ಮಹಿಮಾಸಾಂದ್ರೆ
ಶರಣಾಂತರಂಗ ಭಾವೆ ಸೇವಿತ ಭವ್ಯೆ
ಕರಣ ಮುಕ್ತವಿಕಾರೆ ಕಮನೀಯ ಕೀರ್ತಿ ಪೂರೆ
ಗಿರೀಶ್ವರಾ ತನುಜಾತೆ ಗೀತ ಸಂಪ್ರೀತೆ ॥ ೩ ॥

ಮದನ ಸನ್ನುತಿಪಾತ್ರೆ ಮಂಜುಲಪ್ರಾಣದಾ ಗಾತ್ರೆ
ಮದಕರಿವರಾಯನೆ ಮೀನಲೋಚನೆ
ಮದನ ಮಾನಸ ವೇದ್ಯೆ ಮಹಿತಾನಿಗಮ ಸಾಧ್ಯೆ
ಮದನವಿಜಯಾ ಶೀಲೆ ಮನ್ಮಥಾಪಾಲೆ ॥ ೪ ॥

ಗುರು ಶಂಭುಲಿಂಗ ಕಾಂತೆ ಗುರುಮಾರ್ಗನಿಸ್ವಾಂತೆ
ಸುರುಚಿರ ಸತ್ಯಲೋಲೆ ಸುಮತಿ ವಿಶಾಲೆ
ಸರಸಿಜಾಯತನೇತ್ರೆ ಸರಸಗಂಧಿ ವಿಚಿತ್ರ–
ತರ ಸರ್ವಲೋಕಮಾತೆ ತತ್ತ್ವ ಶೋಭಿತೆ ॥ ೫ ॥

❑ ❑

೧೩೧

ಇಂದುಧರನ ಪಾದಪೂಜಕರೊಲವಿಗೆ ತಂದನೆನ್ನ
ಎಂದೆಂದಿಗೆ ಗುರುಸೇವೆಯಲ್ಲಿರುಯೆಂದು ತಂದನೆನ್ನ ॥ ಪಲ್ಲ ॥

ಎತ್ತಿದ ದೇಹವಿದೊಂದಲ್ಲದಿಲ್ಲವೆಂದು ತಂದನೆನ್ನ
ಮತ್ತೆ ಧರಾತಳಕಿಳಿಯದ ಮಾರ್ಗಕೆ ತಂದನೆನ್ನ

ಪೃಥ್ವಿಯ ಕಾಲ ಕರ್ಮಂಗಳ ಗೆಲಲೆಂದು ತಂದನೆನ್ನ
ಚಿತ್ರವೀ ಲೋಕರಂಜನೆಗಿರಬೇಡೆಂದು ತಂದನೆನ್ನ ॥ ೧ ॥

ನುಡಿದ ಪಂಥಕೆ ತೊಲಗದ ನಿಜಭಾಷೆಗೆ ತಂದನೆನ್ನ
ಹಿಡಿದ ವ್ರತವನಡಸುವ ದೃಢವಾಗಿಯೆ ತಂದನೆನ್ನ
ಒಡಲಾಸೆಗೆ ಅಡಿಯಿಡದೆ ನಿರ್ಗಮನಕ್ಕೆ ತಂದನೆನ್ನ
ಮೃಡನಾದರೆ ಆಸೆಗೈಯ್ಯದ ಬಾಳ್ವೆಗೆ ತಂದನೆನ್ನ ॥ ೨ ॥

ಲಿಂಗಾಣತಿಯೆ ವಿಚಾರಿ ಸು ಭೋಗಕೆ ತಂದನೆನ್ನ
ಅಂಗದಿಚ್ಛೆಯ ಕಾಣಿಸದ ಗಂಭೀರಕ್ಕೆ ತಂದನೆನ್ನ
ಬೆಂಗೊಡದಿರು ಕಲಿಯುಗದ ಸಂಚಲಕೆಂದು ತಂದನೆನ್ನ
ಮಂಗಳಮಯ ಗುರುಶಾಂತನರ್ಚನೆಗಾಗಿ ತಂದನೆನ್ನ ॥ ೩ ॥

೧೩೨

ವೀರಶೈವಾಚಾರಮಾರ್ಗದೊಳು ನಿಂದು ಮರಳಿ
ಬಾರೆನೆಂದು ಹೇಳು ಕಂಡ್ಯ ಕೋಗಿಲೆ ॥ ಪಲ್ಲ ॥

ಅಂಗ ಮಹಲಿಂಗದಲ್ಲಿ ಲಿಂಗ ಮಹ
ಸಂಗದಲ್ಲಿ ಸಂಗ ಸೌಖ್ಯ ಸಾವಧಾನವಾಗಿ
ಮಂಗಳ ಮಹಿಮನೊಳು ಕಂಗಳೇಕಪ್ರಾಪ್ತಿ ದು-
ಸ್ಸಂಗವಳಿದರೆಂದು ಹೇಳು ಕೋಗಿಲೆ ॥ ೧ ॥

ಕಾಲ ಕರ್ಮದ ಕೀಲ ಮುರಿದು ಮೇಲೆ ಅಷ್ಟತನುವನಳಿದು
ಸ್ಥೂಲ ಬ್ರಹ್ಮಾಂಡವನು ತಿರುಗಿ ನಿಂತು
ಆಲಿಯಡಗಿ ಮನವು ಮುಳುಗಿ ಆ ಬ್ರಹ್ಮನೊಳೇಕವಾಗಿ
ಲೀಲೆಯಾದರೆಂದು [ಹೇಳು] ಕೋಗಿಲೆ ॥ ೨ ॥

ಅಷ್ಟದಳದ ಕಮಲದಲ್ಲಿ ಮೆಟ್ಟಿ ಆರು ಹಂಸಗಳನ್ನು
ದಿಟ್ಟವನ್ನು ತೆಗದು ಕೈ ಕಾಲು ಮುರಿದು
ಸುಟ್ಟು ಬಾ[ಲ್ಯ] ಸಾವುಗಳೆದು ಹೊಟ್ಟೆತುಂಬವುಂಡು ಸಂ-
ತುಷ್ಟರಾದರೆಂದು ಹೇಳು ಕೋಗಿಲೆ ॥ ೩ ॥

ಸ್ಥಾನ ಸ್ಥಾನ ಮೂಲವನ್ನು ಲೀಲೆಯಿಂದ ಏರಿ ನೋಡಿ
ಲೋಲ ಗಿರಿಯಮಧ್ಯದೊಳಿಪ್ಪ ಕೊಳದೊಳಾಡಿ
ಮಾರುತನ ಮರ್ಮ ತಿಳಿದು ಧೀರನಾದ ಗುರುವ ನೆನದು
[ಈ]ಲೋಕವಳಿದರೆಂದು ಹೇಳು ಕೋಗಿಲೆ ॥ ೪ ॥

ಜೀವ ಭಾವ ಭ್ರಕ್ತಿಗಳನು ತೀವಿ ಪರಮಾನಂ[ದ]ದೊಳು
[ಭಾವ] ಸಾಹಸದಿಂದಲಿ ಶುದ್ಧನಾಗಿ
ದೇವ ಗುರುಶಾಂತನಾದ ಭಾವ ಬಯಲಾದ ಮಹಾ–
ದೇವರಾದರೆಂದು ಹೇಳು ಕೋಗಿಲೆ ॥ ೫ ॥

❑ ❑

೧೩೩

ಎಂತಾ ನಕ್ಕೆನೋ ನಾನಿನ್ನೆಂತೆಂತಾ ನಕ್ಕೆನೋ
ಕಾತುರ ಹೆಚ್ಚಿ ಕಣ್ಣಿಗೆ ಯೌವ್ವನವನು
ನೀತಿವಂತರು ಸೋತುದ ಕಂಡು
ಎಂತಾ ನಕ್ಕೆನೋ ॥ ಪಲ್ಲ ॥

ವೇದವನೋದುವರೊ ತತ್ತ್ವದ ಭೇದವ ತಿಳುಹುವರೊ
ವಾದಿಯ ಕಂಡರೆ ವಿಚಾರದ ಹಾದಿಯ ಹೇಳುವರೊ
ಬುದ್ಧಿಹೇಳುವ ಹಿರಿಯರೆಲ್ಲ ಕದ್ದು ಮಾಡುವ ಕಳವ ಕಂಡು
ಎಂತಾ ನಕ್ಕೆನೋ.......... ॥ ೧ ॥

ತಾಯಿ ತಂದೆಗಳೆಂದು ಬಾಯಲಿ ವಾಕ್ಯಗಳಾಡುವರೊ
ಕಾಯದ ಸುಖಕಾಗಿ ಕಂಗೆಟ್ಟು ಮೋಹಿಸಿ ನುಡಿಯುವರೊ
ಗಾಯಕತನದಿಂದೆ ಕೇಳ್ವಿಯ ಮಾಡುತ
ಮಾಯದೊಳಗೆ ಮುಳುಗಿದೋರ ಕಂಡು
ಎಂತಾ ನಕ್ಕೆನೋ......... ॥ ೨ ॥

ಹೃದಯದೊಳಗೆ ಪಾಪ ಪುಣ್ಯಗಳೆರಡನಡ ಸುತಿಹರೊ
ಚದುರರೀ ಜಗದೊಳು ಚೆನ್ನಾಗಿ ಹಾದರವಾಡುವರೊ
ತಂದೆ ಗುರು ಸಂಗಮೇಶ್ವರನ ಒಂದಾಗಿರದ ಮಾನ್ವರ ಕಂಡು
ಎಂತಾ ನಕ್ಕೆನೋ.......... ॥ ೩ ॥

❑ ❑

೧೩೪

ಹೆಂಡರಿದ್ದವ ಶಿವಯೋಗಿ
ಹೆಂಡರಿಲ್ಲದವ ಪರದೇಸಿ ಜೋಗಿ ॥ ಪಲ್ಲ ॥

ತಾಯಿ ತಂದಿದ್ದರ ಗುರುವು
ತಾಯಿ ತಂದಿಲ್ಲದಿದ್ದರೆ ನೀ ಎಲ್ಲಿ ಬರುವು
ನ್ಯಾಯ ನಿನ್ನೊಳು ತಿಳಿ ಅರಿವು
ನ್ಯಾಯ ತಿಳಿಯದಿದ್ದರೆ ನೀ ಮರುಳು ಕರುವು ॥ ೧ ॥

ತಂದೆ ತಾಯಿದ್ದರ ಬಂದೀ
ತಂದೆ ತಾಯಿಲ್ಲದಿದ್ದರ ನೀಯೆಲ್ಲಿ ಹಂದಿ
ಮಂದಿಯೊಳಗ ಏನಂದಿ
ಮುಂದುಗಾಣದೆ ನುಡಿದರೆ ನಿನ್ನೊಳು ನೊಂದಿ ॥ ೨ ॥

ಬೋನ ಇದ್ದರ ಎಲ್ಲ ಜ್ಞಾನ
ಬೋನ ಇಲ್ಲದಿದ್ದರ ನೀನು ಒದರುವ ಸ್ವಾನ
ಜ್ಞಾನದಿಂದ ತಿಳಿ ಬೂನ
ಜ್ಞಾನ ತಿಳಿಯದಿದ್ದರ ನೀನು ಕಳಕೊಂಡಿ ಬೂನ ॥ ೩ ॥

ಹರಿಹರ ಹ್ಯೆಂಡರಿದ್ದವರು
ಸುರರು ದೇವತರು ಮುನಿಗಳು ಮೊದಲಾದವರು
ಸರ್ವರು ಸ್ತ್ರೀಯರ ಹೊದ್ದಿದ್ಹರು ನೀ
ಅರಿಯದಾಡುವರ್‍ಯೇನೋ ಬರಿಮಾತನೀವರು ॥ ೪ ॥

ಗುರುಸಿದ್ಧ ಮಹಾಮೂರ್ತಿ ಗವುರಿ
ಹರಿಹರನಾ ಹ್ಯೆಂಡರಿಗೆಲ್ಲ ಹಾಸ್ಯ ಮಾಡುವಿರಿ
ಬರಿಯ ಮಂಡೆಯಲಿ ತಿರಗುವಿರಿ
ಹರಿಹರನ ಕಥೆಗಳೆಲ್ಲ ಓದಿ ಹೇಳುವಿರಿ ॥ ೫ ॥

❑ ❑

೧೩೫

ದುರಿತ ಕರ್ದಮ ಭಾನು ಶಿವಾನಂದ ಭರಿತ ಸದಾಚಾರ ಚರಿತ
ನಿರುತ ಮನ್ಮಥ ಮದಕರಿ ಪಂಚವದನ ಶ್ರೀ
ಗುರುಪಾದಯೋಗೀಂದ್ರ ಶರಣು ॥ ೧ ॥

ಆಚಾರಪೂರ ಸುವಾಚಕ ಪರತತ್ತ್ವ
ಸೂಚಕ ಪರಮ ಕಾರುಣ್ಯ ಪ್ರೋಲ್ಲಸಿತ
ಈಷಣ ಪ್ರಾಸುರ ಗುಣಹಾರ
ರಾಚೋಟಿಯೋಗೀಂದ್ರ ಶರಣು ॥ ೨ ॥

ಬಸವನ ಶ್ರೀ ಚೆನ್ನಬಸವನ ಪ್ರಭುದೇವ-
ನಸಮ ಭಕ್ತಿ ಜ್ಞಾನ ವಿರತಿವ[ಡೆ]ದೊಂದು ರೂಪದೊ-
ಳೆಸ[ವ] ಶ್ರೀಗುರು ಸಿದ್ಧಬಸವರಾಜೇಂದ್ರ ಮಾಂ ತ್ರಾಹಿ ॥ ೩ ॥

೧೩೬

ಮನವೆ ಮಂಗಲ ಜಯತೆನುತ
ಘನಜ್ಯೋತಿಗಾರತಿ ಬೆಳಗು ॥ ಪಲ್ಲ ॥

ಇಂದ್ರಾದಿ ಸುರನತ ಪದಗೆ
ಚಂದ್ರಾಗ್ನಿ ರವಿ ತ್ರಿಣಯನಿಗೆ
ಚಂದ್ರಾತ್ಮಜಾಂಗ ಸಂಹರಗೆ
ಭೇಂದ್ರಾಯಮಾನಲವಿಗೆ ? ॥ ೧ ॥

ಪರಮಾತ್ಮ ಪರಮೇಶ್ವರನಿಗೆ
ಪರಲೋಕ ಪರಿಪಾಲನಿಗೆ
ಪರಶಕ್ತಿ ಸುಖತತ್ಪರಗೆ
ಪರಬ್ರಹ್ಮ ಪರತರ ಶಿವಗೆ ॥ ೨ ॥

ಸರಸಿಜಭವ ಶಿರಕರಗೆ
ಧರಣೀಧರಾಂಗದಧರಗೆ

ಚರಣೇಬ್ಬೃತಾಂಚಲ ಹರಗೆ
ಗುರು ಸಿದ್ಧವೃಷಭೇಶ್ವರಗೆ
ಮನವೆ ಮಂಗಲ ಜಯತೆನುತ
ಘನಜ್ಯೋತಿಗಾರತಿ ಬೆಳಗು ॥ ೩ ॥

 

೧೩೭

ಜಯ ಜಯ ಜಗದೀಶನಿಗೆ ಜಯ ಭಕ್ತ[ವಾಸ]ನಿಗೆ
ಜಯ ಸಿದ್ಧಲಿಂಗ ಮಹಿಮನಿಗೆ
ಜಯ ಸಿದ್ಧಲಿಂಗ ಮಹಿಮನಿಗೆ ಜಯತೆಂದು
ನಯದಿಂದಾರತಿಯ ಬೆಳಗೀರೆ ॥ ೧ ॥

ಕಮಲದ ಸಮವದನೆಯರು ಕುಮುದದ ನಯನೆಯರು
ಭ್ರಮರಕುಂತಳದ ಸತಿಯರು
ಭ್ರಮರ ಕುಂತಳದ ಸತಿಯರು ಗುರುವಿಗೆ
ಕಮಲದಾರತಿಯ ಬೆಳಗೀರೆ ॥ ೨ ॥

ಕರ್ಪೂರಗಂಧಿಯರು ಸರ್ಪನಿಭವೇಣಿಯರು
ಸೂರ್ಪಾರಿಸತಿಯ ಚೆಲುವೇರು
ಸೂರ್ಪಾರಿಸತಿಯ ಚೆಲುವೇರು ಶ್ರೀ ಗುರುವಿಗೆ
ಕರ್ಪುರದಾರತಿ ಬೆಳಗೀರೆ ॥ ೩ ॥

ಚಿತ್ರದಂಬರನುಟ್ಟು ರತ್ನದೋಲೆಯನಿಟ್ಟು
ಕಸ್ತೂರಿ ಬೊಟ್ಟು ಫಣೆಗಿಟ್ಟು
ಕಸ್ತೂರಿಬೊಟ್ಟು ಫಣೆಗಿಟ್ಟು ಗುರುವಿಗೆ
ಮುತ್ತಿನಾರತಿಯ ಬೆಳಗೀರೆ ॥ ೪ ॥

ಧರಣಿ ಹೃತ್ಕಮಲದೊಳ್ಮೆರವ ಹಲಗೇರಿಯೊಳು
ವರಕರ್ಣಿಕಾಭ್ರಮರಹಂಸ
ವರಕರ್ಣಿಕಾಭ್ರಮರಹಂಸವೆನಿಪ ಶ್ರೀ
ಗುರುಸಿದ್ಧಲಿಂಗ ಜಯತೆಂದು ॥ ೫ ॥

## ೧೩೮

ಹೆಂಡ್ತಿ ಪ್ರಾಣ ಹಿಂಡ್ತಿ ಕೊಂ[ಡ]
ಕೋಡಗದಂತೆ ಕುಣಿಸಾಡೆ ನೆಂಬ್ತಿ
ಹೆಂಡ್ತಿ ಪ್ರಾಣ........... ॥ ಪಲ್ಲ ॥

ಹೊತ್ತಾರೆಂದು ಏಳ್ತಿ ಅತ್ತಿತ್ತ ತಿರುಗಾಡ್ತಿ
ಹೊತ್ತು ಹೊತ್ತಿಗೆ ಭಕ್ಸ ಬೇಡ್ತಿ
ಉತ್ತುಮ ಗುರುಹಿರಿಯರ ನಿಂದ್ಯ ಮಾಡ್ತಿ ದೊಡ್ಡ
ಮೃತ್ಯುದೇವತೆಯಂತೆ ಮನೆಯೊಳಗಿರ್‍ತಿ ॥ ೧ ॥

ಇಲ್ಲದ ಬೇಡ್ತಿ ಸುಳ್ಳು ಮಾತಾಡ್ತಿ
ಒಳ್ಳೆ ಊಟವನುಂಡು ಕುಳಿತುಕೊಂಡೇನೆಂಬ್ತಿ
ಎಳ್ಳಷ್ಟು ಕೆಲಸ ಮಾಡ್ಯಲ್ಲೆನೆಂಬ್ತಿ
ಎಲ್ಲೆಲ್ಲೊ ತಲೆಯೆತ್ತಿ ತಿರಗದಾಂಗೆ ಮಾಡ್ತಿ ॥ ೨ ॥

ಹಿರೇತನಾನ ಬೇಡ್ತಿ [ಗೆಲಲೀ]ಕೆ ಮಾತಾಡ್ತಿ
ಹಿರೇತನ ಬಂದ ಮೇಲೆ ಮಾತನಾಗೆ ನಿಲ್ತಿ
ಗುರುಸಿದ್ಧಲಿಂಗನ ಪಾದವ ನೆನಿಯದೆ
ಪಾಪಕ್ಕೆ ಗುರಿಯಾದೆನೆಂಬ್ತಿ
ಹೆಂಡ್ತಿ ಪ್ರಾಣ............ ॥ ೩ ॥

## ೧೩೯

ಎತ್ತುವೆನಾರತಿ ಎತ್ತುವೆನಾರತಿ ಎತ್ತುವೆನಾರತಿಯ
ಕರ್ತು ತೋಂಟದ ಸಿದ್ಧಲಿಂಗನ ಪಾದಕೆ ಬೆಳಗುವೆನಾರತಿಯ ॥ ಪಲ್ಲ ॥

ತನುವ ತಳಿಗೆ[ಯ] ಮಾಡಿ ಮನವ ಆರತಿ ಮಾಡಿ
ಯತ್ತುವೆನಾರತಿಯ
ಮನದ ಬೆಳಕಿನಲ್ಲಿ ಜ್ಯೋತಿಯ ಮುಟ್ಟಿಸಿ
ಬೆಳಗುವೆನಾರತಿಯ ॥ ೧ ॥

ನಾನು ನೀನೆಂತೆಂಬುಭಯಭೇದವನಳಿ –
ದೆತ್ತುವೆನಾರತಿಯ

ಚಿದ್ಭಾನುಪ್ರಕಾಶ ತೋಂಟದ ಸಿದ್ಧಲಿಂಗಗೆ
ಬೆಳಗುವೆನಾರತಿಯ ॥ ೨ ॥

ಉನ್ಮನಿಜ್ಯೋತಿಯ ಬೆಳಕನು ನಾ ತಂದ
ೆತ್ತುವೆನಾರತಿಯ ಚಿನ್ಮಯ ಘನ ಗುರುಸಿದ್ಧಲಿಂಗೇಶಗೆ
ಬೆಳಗುವೆನಾರತಿಯ.
ಎತ್ತುವೆನಾರತಿ ಎತ್ತುವೆನಾರತಿ ಎತ್ತುವೆನಾರತಿಯ ॥ ೩ ॥

 

## ೧೪೦

ಜಯ ಶಾಂತನೆ ಜಯ ಕಾಂತನೆ
ಜಯ ಗಂಗಾಧರನೆ ಜಯ ಗಂಗಾಧರನೆ
ಜಯ ಕರ್ತೃವೆ ಜಯ ಭರ್ತೃವೆ ಜಯ ತೋಂಟದಪ್ರಭುವೇ ॥ ಪಲ್ಲ ॥

ಸುಗುಣಾತ್ಮನೆ ಸುಖದಾಯ[ಕ]ನೆ ಸುರರ ರಕ್ಷಕನೆ ಸುರರ ರಕ್ಷಕನೆ
ಅಗಜೇಶನೆ ಅತಿ ಶೌರ್ಯನೆ ಅಮರ ಸೇವಿತನೆ
ಜಗಧಾರನೆ ಜಗವಂದ್ಯನೆ ಜನನವರ್ಜಿತನೆ ಜನನವರ್ಜಿತನೆ
ಮೃಗಹಸ್ತನೆ ಮೃದುಪಾದನೆ ಮೃತ್ಯುವ ಪರಿಹರನೆ ॥ ೧ ॥

ಮಲರಹಿತನೆ ಮಹದೇವನೆ ಮಾಯಾವರ್ಜಿತನೆ ಮಾಯಾವರ್ಜಿತನೆ
ಖಲಶಿಕ್ಷನೆ ಕವಿರಕ್ಷನೆ ಕಾಲಸಂಹರನೆ
ಛಲದಂಕನೆ ಚರರೂಪನೆ ಚರಣಲೋಚನನೆ ಚರಣಲೋಚನನೆ
ಬಲವಂತನೆ ಬಹುನಾಮನೆ ಭಸಿತಭೂಷಣನೆ ॥ ೨ ॥

ಪುರಮಥನನೆ ಪುಣ್ಯಾತ್ಮನೆ ಪುಲಿಚರ್ಮಾಂಬರನೆ ಪುಲಿಚರ್ಮಾಂಬರನೆ
ಶರದಂಕನೆ ಶುಚಿಪಾಲ ಶಾಶ್ವತ ಪರಶಿವನೆ
ನಿರವಯನೆ ನಿರ್ಲೇಪನೆ ನಿಜತತ್ವಾಧೀಶನೆ ನಿಜತತ್ವಾಧೀಶನೆ
ಗುರುವರ್ಯನೆ ಗುಹಜಾತನೆ ಗುರುಸಿದ್ಧೇಶ್ವರನೆ
ಜಯದೇವ ಜಯದೇವ

 

೧೪೧

ಏನಾದರು ಒಂದಾಗಲಿ ನಮ್ಮ ಮನೆಯ ತುಂಬ ದೇವರು
ಗುಡಿ ತುಂಬ ಕಲ್ಲೆ ॥ ಪಲ್ಲ ॥

ಮನೆಯ ಗಂಡ ಮಾಯವಾಗಲಿ ನಮ್ಮ ಗುಣವಂತ ಮೈ-
ದುನ ನಡುಗಲಿ ಗುರುವೇ
ಮನೆ ನೆರೆಮನೆ ಹಾಳಾಗಲಿ ಬಟ್ಟಬೈಲಿಗೆ ಬೈಲು
ತಾನಾಗಲಿ ಗುರುವೇ ॥ ೧ ॥

ಅತ್ತೆಯ ಕಣ್ಣು ಹೋಗಲಿ ನಮ್ಮ ಮಾವನ
ಕಾಲು ಮುರಿಯಲಿ ಗುರುವೇ
ಹಿತ್ತಲಗೋಡೆ ಬೀಳಲಿ ಕಾ-
ರ್ಗತ್ತಲೆಯಾದರು ಕವಿಯಲಿ ಗುರುವೇ ॥ ೨ ॥

ಕಂದನ ಕಣ್ಣು ಮುಚ್ಚಲಿ ನಮ್ಮ
ಚಂದ್ರಗೆ ಹಾವು ಕಚ್ಚಲಿ ಗುರುವೇ
ಓದಿದ ಗೂಢಾರ್ಥ ಬಿಚ್ಚಿದವರಿಗೆ
ಅಂದು ಗುಹೇಶ್ವರ ಮೆಚ್ಚಲಿ ಗುರುವೇ ॥ ೩ ॥

❑ ❑

೧೪೨

ರಾಗ : ಸಾವೇರಿ

ಇದೆ ಮೂಡಲಾಗಿ ಮೂಡಿತು ಚಂದ್ರಬಿಂಬವು
ಸುದತಿ ಎನ್ನಿನಿಯನೈತಹ ವೇಳ್ಯವಾದುದು ॥ ಪಲ್ಲ ॥

ಸ್ಮರಶಿಖಿಪಿಂಡವೊ ಮಾರನ ಮಾಣಿಕ್ಯದರಗೆಯೊ
ಮದನನ ರನ್ನಗನ್ನಡಿಯೊ
ಅರಲಂಬನಂಬಮಸೆವ ಪೊಸಸಾಣೆಯ
ಪರಿಯೊಯೊಂದನೆ ಚಂದ್ರ ನೋಡು ನಿನ್ನಿದಿರೊಳು ॥ ೧ ॥

ತೊಳಗುವ ತಾರೆಗಳೆಂಬ ಶಂಖಿನಮಣಿ
ಗಳ ತಾಳ್ದು ಕಾಲ್ಜೋಗಿ ಪರಿವೇಷವೆಂಬ
ಬಲುಗೆಜೆಯೊಳಗಿಟ್ಟ ಕಾಳಾಹಿಯೊಪ್ಪುವ
ಪಳುಕಿನ ಪೆಟ್ಟಿಗೆಯಂತೆ ನುಣ್ಣರೆಗೂಡಿ ॥ ೨ ॥

ತಿಂಗಳಾಗಲು ಬಹನೆಂದು ಪೇಳಲು ಕೇಳ್ದು ತ
ನ್ನಂಗನೆ ಕಂಗೆಡುತಿರೆ ಆಮರ್ದಪ್ಪಿ
ತಿಂಗಳೆಂದೆನೆ ಚಂದ್ರನೆಂದು ಪೋದ ಗೌರೀಶಲಿಂಗ
ನೀಗಳೆ ಬಹನೋಡಂಬುಜನೇತ್ರೆ ॥ ೩ ॥

❑ ❑

೧೪೩

ನಿಗಮಾಗಮನುತ ಜಗಧೀಶ ಹೋ ॥ ಪಲ್ಲ ॥

ಕಾರಣಕಾರಣ ಕಾರುಣ್ಯಾತ್ಮಕ
ಸಾರ ಷಟುಸ್ಥಲಧೀರ ಹೋ ॥ ೧ ॥

ಮಂಗಲಮಹಿಮ ಚಿದಾಂಗ ಪರಾತ್ಪರ
ಜಂಗಮಲಿಂಗ ಸು ಸಂಗ ಹೋ ॥ ೨ ॥

ಇಷ್ಟಪ್ರದಾಯಕ ಶಿಷ್ಟ ವೀರಮತ
ಶ್ರೇಷ್ಠ ಘಾನಮಠ ಪ್ರತಿಷ್ಠ ಹೋ ॥ ೩ ॥

೧೪೪

ಬಿಡುಬ್ಯಾಡ ದೃಢಚಿತ್ತ ಮನುಜ ನೀನೇ
ಮೃ(ಡ) xxದು ನಿಜ ॥ ಪಲ್ಲ ॥

ಪೊಡವಿಯೊಳಗೆ ನೀನು ಜಡದೇಹವನು ಮೆಚ್ಚಿ
ಎಡೆಯಾಡದಿರು ನಂಬು ಸಹಜ
ನಡನಡಗು xx [ನಿನ್ನಿ]ಜ ॥ ೧ ॥

ಶಿವ [ಜ]ಗವೆಂಬ ಭೇದವನು ನೈನಸದಿರು
ಶಿವಪದವಿಗಿದು ಸಲ್ವ ಬೀಜ
ವಿವರದಲಿ ಮಾಡೊ ಪೂಜ ॥ ೨ ॥

ಘನಮಠವಾಸನ ನಿರ್ಣಯದಿಂದಲಿ ಕೊಡೊ
ಜನನ ಮರಣವಳಿಯೊ ಮನುಜ
ಜ[ನನ]ದಿ ನೋಡೋ ನಿನ್ನಿಜ ॥ ೩ ॥

□ □

೧೪೫

ಆಹಾಹಾ ನಮ್ಮೈಯನಿಗಮ್ಮೈಯಾಕೆ ಬುದ್ಧಿ ಬಾರದೂ
ಯಾಕೆ ಬುದ್ಧಿ ಬಾರದು ಮತ್ಯಾಕೆ ಬುದ್ಧಿ ಬಾರದೂ ॥ ಪಲ್ಲ ॥

ಓಡಿ ಓಡಿ ಹೋದನೆ ಕೇಡಿಗತನವ ಮಾಡಿದನೆ
ಆಡಬಾರದ ಜೂಜನಾಡಿ ಕೊಲೆಯ ಕೊಲ್ಲಿಸಿಕೊಂಡನಮ್ಮ ॥ ೧ ॥

ಕಟ್ಟಿಗೆ ಮಣ್ಣಹೊತ್ತನೆ ಹುಟ್ಟಲಿ ತಿವಿಸಿಕೊಂಡನೆ
ಘಾಟ್ಯಾಗಿ ನಂಬೆಣ್ಣನ ಮನೆಯಲಿ ಹೊಟ್ಟೆ ಹೊರಕೊಂಡು ಬಂದನಮ್ಮ॥೨॥

ಕರುಗಳನ್ನು ಕಾಯ್ದನೆ ಮರುಳನಾಗಿ ತಿರಿದುಂಡನೆ
ಹರದಿ ನಂಬೆಕ್ಕನ ಮಗನ ಶಿರವ ಒನಕೆಲಿ ಕೆಡಹಿದನಮ್ಮ ॥ ೩ ॥

ಸತ್ತ ಕರುವ ಹೊತ್ತನೆ ಭಕ್ತಗೆ ಪಡಿಹೊನ್ನಿತ್ತನೆ
ಮರ್ತ್ಯದೊಳು ಡೊಂಬತಿ ಚನ್ನಿಯ ಕತ್ತೆಗಳನ್ನು ಕಾಯ್ದನಮ್ಮ ॥ ೪ ॥

ಚೀಲಾಳನ ಕುತ್ತಿಗೆ ಕೊರಸಿದನೆ ಬಲ್ಲಾಳಗೆ ಲಿಂಗವ ಧರಿಸಿದನೆ
ಹೇಳಲೇನು ಕನ್ನಪ್ಪನ ಭಕ್ತಿಗೆ ಖಂಡವ ಸವಿಸವಿದುಂಡನಮ್ಮ ॥ ೫ ॥

ಸೂಳಿಗೆ ಕಂಕಣಕೊಟ್ಟನೆ ಹೇಳದ ಮನೆಯ ಸುಟ್ಟನೆ
ಮೇಳದ ಗಂಗೆಯ ತಂದು ಬಾಳಲಗೇಡಿಯಾದನಮ್ಮ ॥ ೬ ॥

ಕೋಳೂರು ಕೊಡಗೂಸು ನುಂಗಿದನೆ ಬಲ್ಲಾಳಗೆ ಲಿಂಗವ ಧರಿಸಿದನೆ
ಇಳೆಯೊಳು ಚಿತ್ತಾರಕಲ್ಲ ಚಂಪಕಸಿದ್ಧನೆನಿಸಿದನಮ್ಮ ॥ ೭ ॥

❑ ❑

೧೪೬

ಮಾಮವ ಮಾಮವ ಭೋ ಶಿವ ಶಂಭೋ ॥ ಪಲ್ಲ ॥

ಮಾರಮದೇಭ ಕಂಠೀರವ ಶ್ರೀ ಕರ
ಘೋರ ಪುರಾಂತಕ ಸೂರಜ ಭೀಕರ ॥ ೧ ॥

ನರ ಸುರ ಸಿದ್ಧ ಕಿನ್ನರ ಗಣನಾಯಕ
ನರ ನುತ ಮಂಜುಲ ನರಶರದಾಯಕ ॥ ೨ ॥

ಸನಕ ಸು ವಂದ್ಯ ಪಾದನಘ ಮಹೇಶ್ವರ
ಕನದನಲಾಕ್ಷ ಚಿದ್ಘನ ಸಿದ್ಧೇಶ್ವರ ॥ ೩ ॥

❑ ❑

೧೪೭

ಮುರಿಗೇಶ ಮುಕ್ತಿಕೋಶ
ಸುರಪಾಲಯ ಪಾವನವೇಶ ॥ ಪಲ್ಲ ॥

ಚರಣಭಜಕ ಸುರಭೂಜ ಜಗನ್ಮಯ
ಕರುಣಾಕರ ಜಿತಪಾಶ ೧

ಬಾಲದಿವಾಕರ ಕೋಟಿಕಿರಣ ಶುಭ
ಶೀಲ ಷಟ್ಸ್ಥಲಾಧೀಶ ೨

ಭುವನಗುರೊ ಭೂತಿದ ಚಿನ್ಮೂಲಗಿರಿ
ಭವನ ಸದಾ ಸಿದ್ಧೇಶ ೩

❑ ❑

೧೪೮

ರಾಗಃ ಮುಖಾರಿ ಅಷ್ಟತಾಳ

ಪಾಲಿಸು ಪದುಳವೆರಸಿ ರಾಜಪೂಜ್ಯನೆ ಗುರುಸಿದ್ಧಲಿಂಗ
ಲೋಲ ನಿಗಮಶಿರದಾಲಯ [ನಿ]ರಂಜನ ಗುರುಸಿದ್ಧಲಿಂಗ ॥ ಪಲ್ಲ ॥

ಶರಣಜನರಪ್ರಿಯ ಶಾಂತಿ ಖಡ್ಗಧರನೆ ಗುರುಸಿದ್ಧಲಿಂಗ
ಹರದೂಷಕರ ಹಲ್ಲ ಧರೆಯರಿಯೆ ಮುರಿದನೆ ಗುರುಸಿದ್ಧಲಿಂಗ
ಗುರುಕುಲತಿಲಕ ಗುಹನ ಸಂಪ್ರದಾಯನೆ ಗುರುಸಿದ್ಧಲಿಂಗ
ದುರುಳ ವಿಪ್ರನ ಪಡೆಯ ಮರುಳ್ಗಿಂಡಿಗಿತ್ತನೆ ಗುರುಸಿದ್ಧಲಿಂಗ ॥ ೧ ॥

ಪೊಡವಿಯೀರೇಳರೊಳಗಣಿತ ಮಹಿಮನೆ ಗುರುಸಿದ್ಧಲಿಂಗ
ಮೃಡ ಶರಣರ ಕಾಂತಿ ಮುಕುರವಾದಾತನೆ ಗುರುಸಿದ್ಧಲಿಂಗ
ಕಡು ಶೋಭೆಗೆಯ್ವ ಕಾವನ ಹಮ್ಮು ಮುರಿದನೆ ಗುರುಸಿದ್ಧಲಿಂಗ
ಬಡ ಹಮ್ಮಿನವನ ಸಿರ ಕರದೊಳು ಮೆರೆದನೆ ಗುರುಸಿದ್ಧಲಿಂಗ ॥ ೨ ॥

ಸದಮಲ ಭಕ್ತರ್ಗೆ ಸಗುಣವಾದಾತನೆ ಗುರುಸಿದ್ಧಲಿಂಗ
ಪದನಾಲ್ಕರಿಂದೆ ಪೂಜೆಯಗೊಂಬುವಾತನೆ ಗುರುಸಿದ್ಧಲಿಂಗ
ಮದ ಮಾಟ ಮುರಿದು ಮಾರಾಂತರ ಗೆಲುವನೆ ಗುರುಸಿದ್ಧಲಿಂಗ
ಹೃದಯದಾನಂದದ ಚದುರಿನೊಳ್ಬೆರದನೆ ಗುರುಸಿದ್ಧಲಿಂಗ ॥ ೩ ॥

ಅತಿಹಿತವಾಗಿ ಆತ್ಮರ ಭೋಗಗೊಂಬನೆ ಗುರುಸಿದ್ಧಲಿಂಗ
ಕೃತಕಜೀವರ ಕುಲಗಿರಿ ವಜ್ರಖಡ್ಗನೆ ಗುರುಸಿದ್ಧಲಿಂಗ
ನತಜನಕುಲಕಾಮಧೇನುವಾದಾತನೆ ಗುರುಸಿದ್ಧಲಿಂಗ
ದ್ವಿತೀಯ ಶಾಂತವೀರನಾಮದೆ ಮೆರೆವನೆ ಗುರುಸಿದ್ಧಲಿಂಗ ॥ ೪ ॥

ಅಗಣಿತ ಭ್ರೂಕಾಶಿವಾಸ ವಿಶ್ವೇಶನೆ ಗುರುಸಿದ್ಧಲಿಂಗ
ಬಗಸೆಗಂಗಳೊಳು ಮಾನಿಸುವವತಾರಾಖ್ಯನೆ ಗುರುಸಿದ್ಧಲಿಂಗ
ಬಗೆ ಬಗೆ ಉರಿವ ಭಾನುಕೋಟಿ ಪ್ರಕಾಶನೆ ಗುರುಸಿದ್ಧಲಿಂಗ
ಅಗಲದೆ ತಿಳಿಯೆ ಚೆನ್ನಬಸವ ನೀನೋರ್ವನೆ ಗುರುಸಿದ್ಧಲಿಂಗ ॥ ೫ ॥

 

## ೧೪೯

### ರಾಗ : ಕಲ್ಯಾಣಿ

ಮಾತನಾಡಲೊಲ್ಲನಮ್ಮ ಯಾತರ ಮುನಿಸ || ಪಲ್ಲ ||

ಕಾಮನ ಕಳವಳ ಹೆಚ್ಚಿ
ತಾಮಸಗೊಂಡಿತು ದೇಹ
ಹೇಮವರ್ಣದಂಗ ಕಂದಿ
ಸೋಮವರ್ಣವಾಯಿತಂದು || ೧ ||

ನೀರಜಗಂಧಿ ನೀ ಕೇಳ
ವಾರಿಜಾಕ್ಷಿ ಎನ್ನ ಪ್ರಿಯ
ತೋರ ಕುಚ[ವನ]ಪ್ಪಿ ಮೋಹನ
[ಸೂರೆ]ಗೊಂಡು ಹೋದನಮ್ಮ || ೨ ||

ಕುಂಜರಗಮನಿ ಕೇಳ
ಸಂಜಿಲಿ ಒಳ ಹೊರಗಮ್ಮ
ನಂಜುಗೊರಳ ಚೆನ್ನಮಲ್ಲಿ –
ಕಾರ್ಜುನ ಅದೃಷ್ಯವಾದ || ೩ ||

## ೧೫೦

### ರಾಗ : ಶೋಕವರಾಳಿ

ದಾರಿಗೇಳಲಮ್ಮ ರೂಪ ತೋರದೋದನೆ
ಮಾರಹರ ಮಲ್ಲಿನಾಥ ಮೂರುಲೋಕದೊಡೆಯನೆ || ಪಲ್ಲ ||

ಗೀರಗಂಧ ಪೂಸಿ ಕೊರಳಹಾರ ಹಾಕಿದ ತನ್ನ
ವಾರಿಗಣ್ಣಿನಿಂದ ಎನ್ನ ಮೋರಿ ನೋಡಿದ
ಭಾರಿ ಕಿನ್ನರಿಯಕಾಯಿ ತೋರ ಕುಚ[ವ] ಮುಟ್ಟಿದ || ೧ ||

ತೊಡಿಯಮೇಲೆ ಕುಳಿತು ನಿರಿಯ ಸಡಿಲುಮಾಡಿದ ತನ್ನ
ತೊಡರುಗಾಲ ಹಾಕಿ ಹವಳ ತುಟಿಯಗಚ್ಚಿದ
ಜಡಿದು ಸರಳಬಾಣಿನಿಂದ ಹೊಡದು ಗುರಿಯ ಕೆಡಹಿದ || ೨ ||

ನೊಂದು ಬೆಂದು ಅಂದರಾತ ಆಗಲಿ ಹೋದನೆ ಅಂದು
ಇಂದುವದನೆ ತಂದು ತೋರೆ ಹೊಂದಿ ಹೊರೆದನೆ
ಮಂದರಗಿರಿಯ ಚೆನ್ನಮಲ್ಲಿನಾಥ ಬೇರಾದನೆ ॥ ೩ ॥

□ □

೧೫೧

ಶ್ರೀ ಗುರುಕರುಣವ ಪಡೆದ ಮಹಿಮಗೆ ಸ್ತುತಿಸುವದಿನ್ಯಾಕೆ ?
ರಾಗ ಭೋಗವನುಳಿದ ವಿರಕ್ತಗೆ ರಮಣಿ ಹಂಬಲೇಕೆ ? ॥ ಪಲ್ಲ ॥

ಶಾಂತಿ ಖಡ್ಗವ ಪಿಡಿದಿರುವಾತಗೆ ಶತ್ರು ಭೀತಿಯಾಕೆ ?
ಸ್ವಾಂತ ನಿರ್ಮಲಾಗಿರುವ ಸುಜ್ಞಾನಿಗೆ ಸ್ಮರನಂಜಿಕೆಯಾಕೆ ?
ಭ್ರಾಂತಿಯಳಿದು ನಿರ್ಭಾವದಲಿರ್ಪಗೆ ಭವದ ಭೀತಿಯಾಕೆ ?
ಅಂತರಂಗ ಶುದ್ಧವಾಗಿರುವಾತಗೆ ಅಂಗದಟ್ಟುಳಿಯಾಕೆ ? ॥ ೧ ॥

ಕುಶಲ ವಿದ್ಯದಲಿ ಕೋವಿದನೆನಿಪಗೆ ಕವಿತಭಾಗ್ಯವೇಕೆ ?
ಪಿಸುಣ ಬುದ್ಧಿಯಲಿ ಪರರ ಪೀಡಿತಗೆ ಪುಣ್ಯಮಾರ್ಗವ್ಯಾಕೆ ?
ಎಸೆವ ತತ್ತ್ವಮಯ ಬ್ರಹ್ಮವ ಗೆಲಿದಗೆ ಯಮನಂಜಿಕೆಯಾಕೆ ?
ರಸಭರಿತ ನವಕ ವನಪೇಳ್ವಗೆ ರಾಜತನವು ಯಾಕೆ ? ॥ ೨ ॥

ಜನ್ಮಜರಾಮಯ ಮೀರಿರುವಾತಗೆ ಜನರ ಹಂಗು ಯಾಕೆ ?
ತನ್ನ ನಿಜವ ತಾ ತಿಳಿದಿರುವಾತಗೆ ತೀರ್ಥಯಾತ್ರೆ ಯಾಕೆ ?
ನನ್ನಿಯೊಳ್ಳೆನೆಲೆನಿಲಯ ಸಾರ್ದವಗೆ ನಾನಾಚಿಂತೆ ಯಾಕೆ ?
ಚೆನ್ನವೀರಾರ್ಯರ ಚರಣವ ಭಜಿಪಗೆ ಸಂಚಲ ಮನಸ್ಯಾಕೆ ? ॥ ೩ ॥

□ □

೧೫೨

ಗಳಹಂಸ ಗಮನದ ಸೆಳೆನಡುವಿನ ಬಟ್ಟ
ಮೊಲೆಯ ಕೋಮಲೆ ಮುದ್ದುನಗೆ ಮುಖದ ॥ ಪಲ್ಲ ॥

ಸುಲಿಪಲ್ಲು ಸೋಲ್ಮುಡಿಸೋಗೆಯಿಂದೊಪ್ಪುವಂಥ
ಸುಗುಣೆ ಪದ್ಮಿನಿ ಬೇಕೆ ಚೆನ್ನವೀರೇಶ ॥ ೧ ॥

ಕೊಂಕಿದ ಕುರುಳು ಕೊನೆ ರಿಂಕಿದ ಕುಚವು ಮೂಡಿ
ಕುಂಕುಮಗಂಧಿನಿ ಕುವಲಯಲೋಚನೆ
ಕಂಕಣದ ಕೈಯ್ಯುಬಳೆ ಕಡಗ ಮುದ್ದೊಪ್ಪುವಂಥ
ಶಂಖಿನಿ ಬೇಕೇನೆ ನಿನಗೆ ಶರಭಾವತಾರ ? ॥ ೨ ॥

ಹಗಲಿರುಳಗಲದೆ ಹದರೊತ್ತಿಗೊದಗುವ
ನಗೆ ನುಡಿ ಲಲ್ಲೆ ಮಾತು ನಲ್ಲನ ಕೂಡೆ
ಸೊಗನಿಂದ ಕೂಡುವವಳೆ ಸೊಬಗಿನ ಸೋನೆಯಂತ
ಸುಗಂಣಿ ಚಿತ್ತಿನಿ ಬೇಕೆ ಶರಭಾವತಾರ ? ॥ ೩ ॥

ಕಸ್ತುರಿಬೊಟ್ಟು ಕಣ್ಣಕಪ್ಪು ಕುಂದರರದಮಾಲೆ
ಹಸ್ತಪದಕ ಹಾರಪೂರಿತಗಳೊಪ್ಪುವ
ಮಸ್ತಕವನಲುಗದೆ ಮೈಯ್ಯನೊಪ್ಪಿಸುವವಳೆ
ಹಸ್ತಿನಿ ಬೇಕೇನೆ ನಿನಗೆ ಹರನಕುಮಾರ ॥ ೪ ॥

ನಾಲ್ಕು ಜಾವಕೆ ಮತ್ತೆ ನಾಲ್ವರು ಬೇಕೆನುತಲಿ
ಪಾಲಿಸಿ ಕೈಕೊಂಡೋವ ಪಥವುಳ್ಳ ಪ್ರಭುಡೆಯ ॥ ೫ ॥

❑ ❑

೧೫೩

ಶುಭದ ಆರತಿ ಬೆಳಗಿರೆ ಶ್ರೀ ಶಿವ –
ನಿಭ ಸುರಾರ್ಚಿತ ಪಾದಗೆ
ನಭಸುಕೇಶಗಪಾರ ಸುಖಕರ –
ಗಭವಗಾನತ ಮೋದಗೆ ॥ ಪಲ್ಲ ॥

ಸಗುಣ ನಿರ್ಗುಣ ರೂಪಗಸದಳ
ಖಗಜಮದಮದವನದಾವಗೆ
ಸುಗುಣಜನ ಹೃದಯಾಬ್ಜ ಮಂದಿರ –
ಗಗಣಿತಾಮಳ ವಿಭವಗೆ ॥ ೧ ॥

ಸಾರಮಹಿಮಾಧಾರಗಾತ್ಮ ವಿ
ಚಾರ ಹೃದಯ ವಿಹಾರಗೆ

ಹರಭಕ್ತ ವಿರಾಗ ಸಂವಿ
ದ್ಧಾರ ಶಂಕರ ಧೀರಗೆ ॥ ೨ ॥

ಉರುತರಾರ್ಜಿ[ತ] ಭಕ್ತ ಜನ ವರ
ಶರಧಿವರ್ಧನ ಚಂದ್ರಗೆ
ಪರಮ ಅಂಗಜಪುರದಿ ನೆಲಸಿದ
ವರವದನ ಚೆನ್ನವೃಷೇಂದ್ರಗೆ ॥ ೩ ॥

□ □

ಗಜಿಳ

ಜಯ ಜಯ ಬೆಳಗಿರಿ ಆರತಿಯ ॥ ಪಲ್ಲ ॥

ಸರಸಿಜಮುಖಿಯರು ಹರುಷದಿ ಪಾಡುತ
ಕರಗಳ ಮುಗಿವುತ ವರಗಳ ಕರುಣಿಸೊ
ಬೆಳಗಿರಿ ಆರತಿಯ ॥ ೧ ॥

ಚಂದನ ಸುಗಂಧಿನಿಯರು ಬಂದರು
ಸುಂದರಿಯರು ಮುಂದುವರಿದೆತ್ತಿರಿ
ಮಂದಗಮನೆಯರೆಲ್ಲ ॥ ೨ ॥

ಕುಶಲದಿ ನೋಟದಿ ಪೊಸ ಬಗೆ ಹೆಣ್ಣುಗಳ
ಶಶಿಮುಖಿಯನು ಪೊಲ್ಲ
ಬಿಸಜಾಕ್ಷಿಯರೆಲ್ಲ ॥ ೩ ॥

ಥಳಥಳಿಸುವ ಮೇಲ್ಪೊಳೆವ ಚೆಂದುಟಿಗೆಂಪು
ನಳಿನಕುಚಕೆ ಸೆರಗಾಕುವ
ಗಮಕದಿ ಬೆಳಗಿರಿ ॥ ೪ ॥

ದೊರೆಗಾಣೆನು ನಾಂ ಮೂರುಸಾವಿರದೊಳು
ಪರತರ ಜ್ವಲ[ತ್ಕಂ]ತ ಗುರುಲಿಂಗಭೂಪಗೆ
ಬೆಳಗಿರಿ ಆರತಿಯ ॥ ೫ ॥

□ □

೧೫೫

ತೋರಮ್ಮ ರಾಮನನು ಐ ಸಂಗಿ ಐ ಸಂಗಿ ಸುಂದರಾಂಗಿ || ಪಲ್ಲ ||

ಕುಂಭಿನಿಯೊಳು ಶಂಭುರಾಯನ ವಾಹನವನು
ಸಂಭ್ರಮದಿ ತಂದ ಗಂಭೀರ ಎಲ್ಲಿಹನೆ ನೀ ತೋರೇ || ೧ ||

ಗುತ್ತಿಯರಾಯನ ಮುತ್ತಿ[ಗೆ] ಮುರಿದಾತನ
ಸುತ್ತಣ ರಾಜ್ಯವನೊತ್ತಿ ಗೆದ್ದವನ ವೀರನ ನೀ ತೋರೆ || ೨ ||

ಧರೆಯೊಳು ಜಾನೆಕುಂಟೆಹರನ ಸ್ತುತಿಗೆಯ್ವನ
ಸ್ಮರಗೆ ಸರಿಯಾದ ಮೋಹಾಬ್ಧಿ ಚಂದಿರನ ಸುಂದರಿ ನೀ ತೋರೆ || ೩ ||

೧೫೬

ಒದಗಿತು ಮುಂದಣ ಪಯಣ ಸಂದಣಿಸಿತು ಇನ್ನೇನಿನ್ನೇನು ಎನ್ನ
ಉದರ ಪೋಷಣಗೆಟ್ಟು ಊರುಬೇವುತಲಿದೆ ಇನ್ನೇನಿನ್ನೇನು || ಪಲ್ಲ ||

ನೀರಿಲ್ಲದೆ ಸರನೆತ್ತಲು ಬೋನವದಾಯಿತು ಇನ್ನೇನಿನ್ನೇನು ಅಲ್ಲಿ
ಮೂರಾರುಪುರದರಸುಗಳುಂಡು ದಣಿದರು ಇನ್ನೇನಿನ್ನೇನು
ಬೇರಿಲ್ಲದೆಳೆಗೊಂಬು ಬೆಳೆದು ಪಸರಿಸಿತು ಇನ್ನೇನಿನ್ನೇನು ಅಲ್ಲಿ
ಸೇರಿರ್ದ ಶರಣರೆಲ್ಲರು ಲಿಂಗವಾದರು ಇನ್ನೇನಿನ್ನೇನು || ೧ ||

ಕದಳಿಪಟ್ಟಣದೊಳು ಕರಿಯೆಂಟು ಮಡಿದವು ಇನ್ನೇನಿನ್ನೇನು ಮೇಲು
ಹೊದಕೆ ಬಣ್ಣದ ಜಾಣ ಹೊಸಪರಿಯಾದನು ಇನ್ನೇನಿನ್ನೇನು
ಕದನಗಾರರು ಎನ್ನ ಕೈವಶವಾದರು ಇನ್ನೇನಿನ್ನೇನು ಚೆಲ್ವ
ಮದನನ ಬಲ ಮುರಿದಡವಿಪಾಲಾಯಿತು ಇನ್ನೇನಿನ್ನೇನು || ೨ ||

ಮಾನಿನಿ ಐವರ ಮದುವೆ ಸಣ್ಣಿಸಿತು ಇನ್ನೇನಿನ್ನೇನು ಲಿಂಗ –
ದಾನಂದರಸ ಉಕ್ಕಿ ಅರಿವು ನಿರ್ಭಯಲಾಯಿತಿನ್ನೇನಿನ್ನೇನು
ಮಾನಸಶರಧಿಯೊಳ್ಮನಮಿಂದು ದಣಿಯಿತು ಇನ್ನೇನಿನ್ನೇನು ನಮ್ಮ
ಜ್ಞಾನಲಿಂಗನ ಕೂಡೆ ನೆರೆ ಶೀಲವಾಯಿತಿನ್ನೇನಿನ್ನೇನು || ೩ ||

 

## ೧೫೭

ಮಂಗಳಾರತಿ ಎತ್ತಿರೆ ಶ್ರೀ ಗಂಗಾಧರಗೆ ನಿಜ ಜಂಗಮಗೆ
ಕಂಗಳಾಗ್ರದಿ ರಾಜಿಪ ಮುರಿಗೇಶನಿಗೆ ಪರಮೇಶನಿಗೆ ॥ ಪಲ್ಲ ॥

ಚಂದ್ರಶೈಲಕೋದಂಡ ಚಂದ್ರಧರಗೆ ಕರಿಸಂಹಾರನಿಗೆ
ಚಂದ್ರಾನಲರವಿನೇತ್ರ ಕೋದಂಡನಿಗೆ ಪ್ರಚಂಡನಿಗೆ
ಚಂದ್ರಕರೂಪೇಂದ್ರಜಹರ ಚರವರಗೆ ಮಂಗಳಾಕಾರಗೆ
ಚಂದ[ದ] ನಂದಿಯಮೇಲೆ ಕುಳಿತ ಸ್ಥಿರಗೆ ಸುರುಚಿರವರಗೆ
ಮಂಗಳಾರತಿ ಎತ್ತಿರೆ............. ॥ ೧ ॥

ಕಮಲನೇತ್ರವ ಚರಣದೊಳಟ್ಟಿಭವಗೆ ಗಿರಿಜಾಧವಗೆ
ಕಮಲಭವನ ಸಿರ ಕರಕಪಾಲಧರಗೆ ಗುರುಚರವರಗೆ
ಕಮಲಕೋರಕನಾಥ ಗಂಭೀರಗೆ ಬಹು ಸುಂದರಗೆ
ಕಮಲ ಕಮಲವ ಧರಿಸಿದ ಮುರಿಗೇಂದ್ರನಿಗೆ ಧೃತ ಚಂದ್ರನಿಗೆ ॥ ೨ ॥

ಚಿನ್ಮೂಲಾದ್ರಿಯವಾಸ ಜಂಗಮಮಣಿಗೆ ಪರುಷದ ಕಣಿಗೆ
ಕಮ್ಮಗೋಲನ ಸುಟ್ಟ ವ್ರತನಿಷ್ಠನಿಗೆ ಬಹು ಧಿಟ್ಟನಿಗೆ
ಒಮ್ಮನದವರಿಗೆ ಒಲಿದ ಮುರಿಗೇಶನಿಗೆ ಪರಮೇಶನಿಗೆ
ಒಮ್ಮೆ ಚಿಟ್ಟಗಿ ಬಸವಲಿಂಗೇಶನಿಗೆ ಮಲಭೇದನಿಗೆ ॥ ೩ ॥

❑ ❑

## ೧೫೮

ದೇವ ಮಂಗಲಂ ಜಯದೇವದೇವ ದೇವಮಂಗಲಂ
ಭಾವಜತನು ತನುದಾವದಾವ ದೇವಮಂಗಲಂ ॥ ಪಲ್ಲ ॥

ನತಜನಪಾಲ ಹೃತಭವಮೂಲ
ಶ್ರುತಿತತಿ ನುತ ಹತಕಾಲದೇವ ॥ ೧ ॥

ಸುರಗಿರಿಚಾಪ ಗಿರಿವರಜಾಪ
ಮುರಹರ ಶರನುತ ಗೋಪ ಗೋಪದೇವ ॥ ೨ ॥

ಗಣಗಣವಾರ್ಯ ಫಣಿಗುಣಶೌರ್ಯ
ಗುಣ ಟೀಕಿನ ಚೆನ್ನವೀರಣಾರ್ಯ ದೇವ ಮಂಗಲಂ ॥ ೩ ॥

 

## ೧೫೯

ರಾಗಃ ಸಾವೇರಿ

ಯಾಕ ಮನಿಗೆ ಬಾರ ಏನು ಮಾಡಿದೆ ತನಗೆ
ಮುಕ್ಕಣ್ಣಹರನ ತೊರ[ದು] ಜೀವಿಸಲಾರೆ ॥ ಪಲ್ಲ ॥

ತಂದೆ ತಾಯಿಯ ಮಾತ ಒಂದಿನ ಕೇಳದೆ
ಮಂದಾಕಿನಿಯಧರ ಮಾಯಾಕೋಳಾಹಳ ॥ ೧ ॥

ನಳಿನಾಕ್ಷಿ ಕೇ[ಳೆ]ನ್ನ ಹೊಳೆವ ಚಂದುಟಿಮುಖಿ
ತೊಳಲಿ ಬಳಲಿದೆ ಕಾಣೆ ಜಾಣೆ ನಿನ್ನಾಣೆ ॥ ೨ ॥

ಧರೆಯೊಳು ಡೋಣ್ಣೂರುಮಠದ ಶ್ರೀ ಗಿರಿದೇವ
ವರಗುರು ಶಾ[ಂತಲಿಂ]ಗ ಭಕ್ತರ ಸಂಗ ॥ ೩ ॥

 

## ೧೬೦

ಪಾದಪದ್ಮವ ನಂಬಿದೆ ಪರಮೇಶ ನಿನ್ನಯ
ಕಾದು ಭಜಿಸಿ ನೋಡಿದೆ ಮೋದದಿಂದಲಿ ಎನ್ನ
ಬಾಧೆಗೊಳಿಸುವ ಮುನ್ನ ಮೂದೇವನೆಂದು
ಮುಂದುಗಾಣುವೆ ನಿಮ್ಮ ॥ ಪಲ್ಲ ॥

ಭಸಿತ ಭೂಷಿತನೆಂಬುವರು ಕಾಲಕೂಟ
ವಿಷವ ಧರಿಸುವನೆಂಬುವರು
ಕುಸುಮಬಾಣನ ಕೊಂದು ಕೋಪ ಕ್ರೋಧವ ಬಿಟ್ಟು
ಬಸವನ ಏರಿ ಬಾಣಾಸುರನ ಬಾಗಿಲ ಕಾಯ್ದ
ಪಾದಪದ್ಮವ............. ॥ ೧ ॥

ಕಾಡಬ್ಯಾಡ ಸುಮ್ಮನೆ ಕರುಣದಿ ದಯ
ಮಾಡಿ ಸಲಹಯ್ಯ ಗಮ್ಮನೆ
ಕಾಡಬ್ಯಾಡ ನೀ ಗೋದಿಕಲ್ಲಿಲಿಯಿಡಿಸಿಕೊಂಡೆ
ರೂಢಿಯೊಳಗೆ ಈಶ್ವರ ಗಾಡಿಕಾರನುಯೆಂದು
ಪಾದಪದ್ಮವ........... ‖ ೨ ‖

ಶಂಕರೇಶ್ವರನೆಂಬುವರು ಪರಮೇಶ್ವರ ನಿನ್ನಯ
ಕಿಂಕರಪ್ರಿಯನೆಂಬುವರು
ಶಂಕರ ಸದಾಶಿವ ಓಂಕಾರ ಮಹರೂಪ
ಪಂಕಜಾಕ್ಷನೆ ತಿರುಪತಿ ವೆಂಕಟೇಶ್ವರ ನಿನ್ನಯ
ಪಾದಪದ್ಮವ............ ‖ ೩ ‖

❑ ❑

೧೬೧

ಬಾರನ್ನ ಮನಿಗೆ ಬಂದೇನೋ ನಿನ್ನ ಬಳಿಗೆ ‖ ಪಲ್ಲ ‖

ತಾಳಲಾರದೆ ತಾಪ ತರಳೆ ಯೌವನ ಪ್ರಿಯ
ತೋಳ ತರ್ಕೈಸಿಕೊಡೊ ಪ್ರೀಯವ ಮಾತೊ ‖ ೧ ‖

ಅಗಿಲು ಕುಂಕುಮ ತೀಡೊ ಅಗಲದಂತೆನ್ನ ಕೂಡೊ
ಮುಗಿಲು ಚಂದ್ರಮನ ಮುಂದೆ ಮಿಗಿಲಯಿದ ಕಂಡೆ ‖ ೨ ‖

ಮೂರುಕಣ್ಣಮಯನೆ ಮೃಗಧರ ಪ್ರಿಯನೆ
ಮಾರನಟ್ಟುಳಿಯ ಬಿಡಿಸೊ ಮಲ್ಲಿಗೆಯ ಮುಡಿಸೊ ‖ ೩ ‖

ಕಂಜಸ್ತನವ ಮುಟ್ಟೊ ಕಪಟನೆಲ್ಲವ ಬಿಟ್ಟು
ಅಂಜದಿರೆಂದು ಕರೆಯೊ ಅತಿದಯವೆರೆಯೊ ‖ ೪ ‖

ಹೊತ್ತು ಹೊತ್ತಿಗೆ ತಾಪ ಹೊರಳುತಿದೆನ್ನೊಪ
ತೀರ್ಥಗಿರಿಯವಾಸ ಚೆಲುವ ರಾಮೇಶ ‖ ೫ ‖

❑ ❑

೧೬೨

ಕಣ್ಣಮುಚ್ಚದೆ ನೋಡುವ ಬಾರೆ [ಬ]ಣ್ಣ
ಬಣ್ಣದೊಗಲನುಟ್ಟು [ಮೇನೆಯನೇರೆ] ॥ ಪಲ್ಲ ॥

ತೊಡೆಯೊಳು ಗಿರುಜೆಯ ಮಡಗಿಕೊಂಡಿಹನ
ಬಡವರಿಗಿಂಬಿಟ್ಟಂಥ ಒಡೆಯ ಶಂಕರನ
ಕಣ್ಣಮುಚ್ಚದೆ............ ॥ ೧ ॥

ಕಪ್ಪುಗೊರಳ ಕಂದರ್ಪ ಸಂಹರನ
ಮುಪ್ಪುರ ಗೆಲಿದಂಥ ಸರ್ಪಭೂಷಣನ
ಕಣ್ಣಮುಚ್ಚದೆ........... ॥ ೨ ॥

ಉರುಗನಾಭರಣನ ಧರಿಸಿಕೊಂಡಿಹನ
ಧರೆಯೊಳು ತುರುಬೇಗಿರಿಯ ಗುರು ಶಿವಲಿಂಗನ
ಕಣ್ಣಮುಚ್ಚದೆ............ ॥ ೩ ॥

೧೬೩

ಗುರುವಿನ ಸೇವೆ ಮಾಡಲಿಲ್ಲ ನಾವು ಪಡೆಯಲಿಲ್ಲ
ಗುರುವಿನ ಸೇವೆ ಮಾಡಲಿಲ್ಲ ॥ ಪಲ್ಲ ॥

ಗುರುವಿನ ಸೇವೆ ಮಾಡದೆ ಬರಿದೆ ಮುಕ್ತಿಯ ಪಡಯದೆ
ಗುರುಕರುಣ ಹ್ಯಾಗಾಗುವದೊ ಏ ಮುಗ್ಧಮನುಜ ?
ಗುರುವಿನ ಸೇವೆ........... ॥ ೧ ॥

ಮಂತ್ರವ ಜಪಿಸಲಿಲ್ಲ ಮನಧರ್ಮ ತಿಳಿಯಲಿಲ್ಲ
ಮುಕ್ತಿಪಟ್ಟಣವ ಹೊಗಲಿಲ್ಲ ನಾವು ಪಡೆಯಲಿಲ್ಲ
ಗುರುವಿನ ಸೇವೆ.......... ॥ ೨ ॥

ಚಂದ್ರಮನಂತೆ ಚೆಲುವ ಚೆಲುವ ಚೆನ್ನಿಗರಾಯ
ಚೆಲುವ ದೇಸಿಕನ ನೋಡಲಿಲ್ಲ ನಾವು ಪಡೆಯಲಿಲ್ಲ
ಗುರುವಿನ ಸೇವೆ........ ॥ ೩ ॥

ಕಾಶಿಗೆ ಹೋಗಲಿಲ್ಲ ಕರ್ಮವ ಕಳೆಯಲಿಲ್ಲ
ಕುಹಕ ಬುದ್ಧಿಗಳ ಬಿಡಲಿಲ್ಲ ಪಾವು ಪಡೆಯಲಿಲ್ಲ
ಗುರುವಿನ ಸೇವೆ.......... ॥ ೪ ॥

ದೇಶಕಧಿಕವಾದ ವಜವುಳ ? ತುರುವೆಕೆರೆಯ
ಈಶ್ವರ ಯ ತೇಜ ತಾ ಬಲ್ಲ
ಗುರುವಿನ ಸೇವೆ ॥ ೫ ॥

❑ ❑

೧೬೪

ಮನ್ನಿಸೊ ಮರೆಯದೀಶ ಮಾರಾಂತಕ
ಮನ್ಮಹೇಶ ಚೆನ್ನನೆ ಸುಪ್ರಸನ್ನನೆ ॥ ಪಲ್ಲ ॥

ಬಡಗಿ ತಾನು ಬೊಂಬೆಗಳನು ಬಡ್ಡಿಸಿದಂತೆನ್ನ ನೀನು
ನಡಸಿದೆ ಕೂಡೆ ನುಡಿಸಿದೆ
ಕಡು ಸಮರ್ಥನಾದ ಕಾರಣ ನಿನ್ನ ವಿನೋದ
ತಡೆಯದೆ ಸುಖವ ಕೊಡು[ದ]ಯದೆ ॥ ೧ ॥

ಕರಣಗುಣಗಳಿಂದ ನಾನು ಕರಗಿದೆ ನೀ ಕಾಮಧೇನು
ಮಱೆಯದೆ ಎನ್ನ ತೊಱೆಯದೆ
ಮರಣಾದಿ ಭಯವಿದೂರ ಮಾಯಾರಿ ಭಕ್ತಜನರ
ಹೊರೆವನೆ ಸಲೆ ಮೆಱೆವನ ॥ ೨ ॥

ಮುದವ ಪಾಲಿಸೆನ್ನ ತಂದೆ ಮನ್ಮನಾಂಬುಜದೊಳು ನಿಂ–
ದೊದವಿದೆ ಮುಕ್ತಿಪದವಿದೆ ಮದರಾ–
ಗದಿಂ ನೊಂದೆನ್ನಯ್ಯ ಮಜ್ಜೀವ ತೋಂಟದರಾಯ
ಚೆದುರನೆ ಪಂಚವದನನೆ ॥ ೩ ॥

❑ ❑

೧೬೫

*ವಿರತಿಗಳಾದ ಭಾಸುರ ಚರವೃಂದದ
ಗುರುಗಳನುಸುರಿ ಬಾಳುವೆನು || ಪಲ್ಲ ||

ಶ್ರೀ ಪಾರ್ವತಿಯ ಚಿತ್ತ ದೇಹಾರ್ಧ ಚಂದ್ರ ಕ–
ಲಾಪ ಮಸ್ತಕವೊಡೆಯ
ಗೋಪ ವಾಣೇಶ ಪದ್ಮಾಪ್ತ ವಂದಿತ ಪಾದ
ಗೋಪವಾಹನ ಶಿವ ಶರಣು || ೧ ||

ಹರಭಕ್ತರಲ್ಲಿ ಸ್ಥಾವರಲಿಂಗ ಪೂಜೆಯಿಂತ–
ದಿರಲದನು ಮಾಣಿಸುತ
ಪರಮ ಷಟ್ಸ್ಥಲಜ್ಞಾನವ[ನ]ರುಹಿ ಮುಕ್ತಿಯನಿತ್ತ
ಗುರು ಚೆನ್ನಬಸವೇಶ ಶರಣು || ೨ ||

ಹರನ ಹೃ[ತ್ಪ]ದ್ಮದೊಳಿರುವ ಸದ್ಭಕ್ತನ
ಪರಮ ಹೃತ್ಕಮಲದಿಂದಲಿ ಗೆಲಿದು
ಮೆರೆದು ಮಹಿಮೆಗಳ ಮರಳಿ ಯೋಗಕೆ ಸಂದ
ಗುರುವೆ ತೋಂಟದಸಿದ್ಧ ಜಯತು || ೩ ||

❑ ❑

೧೬೬

ಬಾರೈಯ್ಯ ಎನ್ನ ಕರ ಮನದ ಕೊನೆಗೆ ಎನ್ನ
[ಶಾ]ರೀರದ ಭವಭಂಗವನು ಕೆಡಿಸುವದಕ್ಕೆ || ಪಲ್ಲ ||

ಆದಿಲಿಂಗವೊ ಬಾರೊ ಅರ್ಧನಾರಿಯೆ ಬಾರೊ
ವೇದಘೋಟಕ ವಿನೋದಿ ಬಾರೊ
ಪಾದ ಪಾತಾಳದಿಂದತ್ತತ್ತ ಮುಡಿ ನಭಕೆ
ಹೋದವಿಬ್ಬರಿಗಗೋಚರನೆ ಬಾರೊ || ೧ ||

* ಆದಿಯಲ್ಲಿ ಹೊನ್ನಾಳಿ ಸಿದ್ಧಲಿಂಗಪ್ಪನವರು 'ನಿರೂಪಿಸಿದ ಸೂತ್ರ ಪ್ರಮಥ ಸ್ತೋತ್ರ' ಎಂದಿದೆ. (ಸಂ)

ಅಘಕೆ ಗುರಿಯಾದವನ ಮಗನಿಗೊಲಿದನೆ ಬಾರೊ
ಬಗೆ ಬಗೆಯ ದೇವರಿಗೆ ದೇವ ಬಾರೊ
ಖಗರಾಜರಿಪುವಂಗೆ ತೆಗದು ವಧುವನೆ ಕೊಟ್ಟ
ಮೃಗಧರನೆ ಮಾತೆ ಮಸ್ತಕನೆ ಬಾರೈಯ್ಯ ‖ ೨ ‖

ಪರವೆಯರ ಉರದೊಳಗೆ ಸಿರಿಯನಿತ್ತನೆ ಬಾರೊ
ಸಿರಿಧರಗೆ ಹರಿಯಿತ್ತ ಹರನೆ ಬಾರೊ
ಶರಣೆ ನೀಲಾಂಬಿಕೆಯ ಶರಿರದೊಳಗಿಂಬಿಟ್ಟ
ಸುರರು ಬ್ರಹ್ಮಾಗಳಿಗೊಡೆಯ ಬಾರೈಯ್ಯ ‖ ೩ ‖

ಸತ್ತ ಕರು ಸುರೆಗಡಿಗೆ ಹೊತ್ತು ಬರುವನೆ ಬಾರೊ
ಭಕ್ತವತ್ಸಲ ಭಕ್ತರಾಳಿ ಬಾರೊ
ಪೃಥ್ವಿಪಾಲಕನ ಹೆತ್ತಪ್ಪ ಭೂಷಣ ಬಾರೊ
ಹತ್ತು ರೂಪಿನ ಸುತನ ಹಗೆಯೆ ಬಾರೈಯ್ಯ ‖ ೪ ‖

ಬೇಡಿದ ಪ್ರಮಥರಿಗೆ ಬೇಡಿದೀವನೆ ಬಾರೊ
ಜೇಡನಿಗೆ ತವನಿಧಿಯನಿತ್ತವನೆ ಬಾರೊ
ರೂಢಿಯೊಳು ಕಲಿಕಾಮಗೋಡಿಹೋದನೆ ಬಾರೊ
ಷೋಡಶಕಳೆಯ ಧವಳಾಂಗ ಬಾರಯ್ಯ ‖ ೫ ‖

ನಂದಿ ಮದ್ದಳೆ ಭೃಂಗಿ ನಾಂಟ್ಯ ಪ್ರಿಯನೆ ಬಾರೊ
ವೃಂದ ಮುನಿಗಳೆಲ್ಲ[ರ] ತಂದೆ ಬಾರೊ
ಹಿಂದೊಬ್ಬಗೊಲಿದು ನವಲಕ್ಷರಾಜ್ಯವನೆಲ್ಲ
ತಂದ ರಜತಾದ್ರಿನೆಲವಾಸ ಬಾರಯ್ಯ ‖ ೬ ‖

ಗಂಗೆವಾ[ಲು]ಕ ಸಮರುದ್ರ ಎಡ ಬಲ ಕೋಟಿ
ನಿಂದು ಜಯಜಯಯೆಂಬರೊಡೆಯ ಬಾರೊ
ಹಿಂಗದೆನ್ನವಗುಣವ ನೋಡದೆ ಕೃ–
ಪಾಂಗ ತೋಂಟದ ಸಿದ್ಧಲಿಂಗ ಬಾರಯ್ಯ ‖ ೭ ‖

❑ ❑

೧೩೭

ನಿನ್ನ ನಾನೆಂತು ಜೋಪಾನವ ಮಾಡಲೆ ಏ ಗಿಣಿಯೆ ಗಿಣಿಯೆ
ನಿನಗುನ್ಮತ್ತವಾದ ಕಂಟಕವಿ[ಂ]ದು ಬಂದಿದೆ ಏ ಗಿಣಿಯೆ ಗಿಣಿಯೆ॥ ಪಲ್ಲ ॥

ಬಂಟರೊಂದೈವರು ಬಹು ಸಮರಂಕರು ಏ ಗಿಣಿಯೆ ಗಿಣಿಯೆ ನಿನ್ನ
ಬೇಂಟೆಯೊಳಾಡಿ ಕೊಲ್ವೆನೆನುತಲಿ ಏ ಗಿಣಿಯೆ ಗಿಣಿಯೆ ॥ ೧ ॥

ಎಂಟುದಿಕ್ಕಿಗೆ ಎಂಟು ಮದದಾನೆಗಳಿವೆ ಏ ಗಿಣಿಯೆ ಗಿಣಿಯೆ
ತುಂಟತನದಿಂದ[ಲಿ] ತುಳಿದವೆನುತಾವೆ ಏ ಗಿಣಿಯೆ ಗಿಣಿಯೆ ॥ ೨ ॥

ಆಸವಲ್ಲ ಇವು ಮೂರುಬಲೆ ನಿನಗೊಡ್ಡ್ಯಾವೆ ಏ ಗಿಣಿಯೆ ಗಿಣಿಯೆ ನೀನು
ಕಳವಳಿಸಿ ಅದರೊಳು ಬೀಳದಿರು ಕಂಡ್ಯಾ ಏ ಗಿಣಿಯೆ ಗಿಣಿಯೆ
ಯತಿ ತೋಂಟದ ಸಿದ್ಧಲಿಂಗೇಶನ ಜ್ಞಾನದೊಳಿರು ಕಂಡ್ಯ
ಏ ಗಿಣಿಯೆ ಗಿಣಿಯೆ ॥ ೩ ॥

೧೩೮

ಜಂಗಮರೂಪಗೆ ಜಗದಂತರಾತ್ಮಗೆ
ಮಂಗಳಂ ಜಯಮಂಗಳಂ ॥ ಪಲ್ಲ ॥

ಭಕ್ತಿಸಹಾಯಗೆ ಭವದೂರಗೆ
ಮುಕ್ತಿದಾಯಕನಿಗೆ ಮುನಿವಂದ್ಯಗೆ
ಸೂಕ್ತಿಧಾ[ರ] ರಸಪೂರಿತ ವದನಗೆ
ರಕ್ತಿರಹಿತ ಚಾರುಚರಿತನಿಗೆ ॥ ೧ ॥

ಇಂದುಶೇಖರನಿಗೆ ಇನತೇಜಗೆ
ಕಂದರ್ಪಹರನಿಗೆ ಕವಿನುತಗೆ
ಮಂದರಸದನಗೆ ಮನುಕೋಟಿರಾಜಗೆ
ನಂದಿವಾಹನನಿಗೆ ನಗಚಾಪಗೆ ॥ ೨ ॥

ನರ್ತ[ನ] ಶೀಲಗೆ ನರನುತಗೆ
ಕೀರ್ತಿವಿಶಾಲಿಗೆ ಕಿಟಿಹರಗೆ

ಮುಕ್ತಿವಿರಾಜಿತ ಭುವನ ಕು[ಟು]ಂಬಗೆ
ಪೂರ್ತಿ ಪಾವನವಿದ್ಯಾಕಲಿತನಿಗೆ ॥ ೩ ॥

ಶಸ್ತಗುಣಾಗ್ರಣಿ ಶಾಶ್ವತಗೆ
ಪುಸ್ತಕಪಾಣಿಗೆ ಪುರಹರಗೆ
ನಿಸ್ತುಳ ಮಹಿಮಗೆ ನಿಗಮಾಂತವೇದ್ಯಗೆ
ಹಸ್ತಿದನುಜಚರ್ಮಭರಿತನಿಗೆ ॥ ೪ ॥

ಎಡೆಯೂರ ಮಧ್ಯ ನಿವಾಸನಿಗೆ
ಎಳೆಯ ಹುಲ್ಲೆಯ ಕರದೊಳಾಂತನಿಗೆ
ಮೃಡ ಗುರು ತೋಂಟದ ಸಿದ್ಧೇಶ್ವರನಿಗೆ
ಕ[ಡುಹಿ]ನ ಶಿವಲಿಂಗರೂಪನಿಗೆ ॥ ೫ ॥

೧೬೯

ಬೆಳಗುತಿದೆ ಜೋತಿ ಬೆಳಗುತಿದೆ ಜೋತಿ
ಹೊಳವುತಿದೆ ಜೋತಿ ನೋಡಮ್ಮ ॥ ಪಲ್ಲ ॥

ಥಳಥಳಥಳಿಸುವ ಒಳಹೊರಗೆಸದಿಹ
ಕಳೆಯುಳ್ಳ ಜೋತಿಯ ನೋಡಮ್ಮ
ಬೆಳಗುತಿದೆ......... ॥ ೧ ॥

ಭೂಮ್ಯಂತ ಸುರಪುರ ಸೋಮ ಸೂರ್ಯವೀಥಿ
ವ್ಯೋಮಮಂಟಪದೊಳು ನೋಡಮ್ಮ
ಬೆಳಗುತಿದೆ.......... ॥ ೨ ॥

ಎಣ್ಣೆ ಬತ್ತಿಯ ಹಂಗು ಮುನ್ನ ತಾನಿಲ್ಲದೆ
ಕಣ್ಣಕಪ್ಪಿನೊಳು ನೀ ನೋಡಮ್ಮ ॥ ೩ ॥

ಪಶ್ಚಿಮಶಿಖರದ ಸಚ್ಚಿದಾನಂದದ
ನಿಶ್ಚಿಂತ ಜೋತಿಯ ನೋಡಮ್ಮ ॥ ೪ ॥

ನಿರೀಕ್ಷಿಸಿ ನೋಡಲು ಗುರು ತೋಂಟದ ಸಿ–
ದ್ಧೇಶ್ವರ ತಾನಮ್ಮ ॥ ೫ ॥

## ೧೬೦

ಜತನಾಗಿರುತಾಡಿ ಜಾಗ್ರತೆ ಜತನಾಗಿರುತಾಡಿ
ಜತನಾಗಿರು ನೀ ಅತ್ತ ಇತ್ತ ನೋಡದೆ
ನೆತ್ತಿ ಮೇಲಣ ಕೊಡ ಸುಳಿಯಿಸುತಾಡಿ
ಜತನಾಗಿರುತಾಡಿ ಜಾಗ್ರತೆ ಜತನಾಗಿರುತಾಡಿ ॥ ಪಲ್ಲ ॥

ಷಡುಚಕ್ರವನೇರಿ ಷಡ್ವಿಧಲಿಂಗದೊಳು ಮನಬೀರಿ
ದೃಢತರಭಕ್ತಿ ನಿರಾಳದೊಳಿರುತಿರೆ
ಮೃಡ ಮೃತ್ಯುಂಜಯನೆನ್ನೊಡೆಯನ ನೋಡುತ
ಜತನಾಗಿರುತಾಡಿ............ ॥ ೧ ॥

ಆಸನವನು ಬಲಿದು ಸೂಸುವ ಬಾಯನು ಬಿಗಿದಿಡಿದು
ಪಾಶಗಳನು ಜರಿದು ದೋಷ ದುರ್ಗುಣಂಗಳನಳಿದು
ಭಾಸುರ ಪ್ರಣಮಪ್ರಕಾಶನೊಳಿರುತಿರೆ ತಾಸು ತಾಸಿಗೊಮ್ಮೆ
ಧ್ಯಾನಿಸುತಾಡಿ ಘಳಿಗೆ ಘಳಿಗೆಗೊಮ್ಮೆ ಧ್ಯಾನಿಸುತಾಡಿ
ಜತನಾಗಿರುತಾಡಿ............ ॥ ೨ ॥

ನವದ್ವಾರಗಳು ಮುಚ್ಚಿ ನವಕೀಲಗಳು ಬಿಚ್ಚಿ
ಗವಸುಗಳು ಹೆಚ್ಚಿ ಜೀವ ಪರಮನೊಳು ಮುಚ್ಚಿ
ದೇವ ಸದ್ಗುರು ತೋಂಟದಾರ್ಯನ ಪಾದದ
ಸೇವಕ ತೊತ್ತಾಗಿ ಕಾಯ್ದಿರುತಾಡಿ
ಜತನಾಗಿರುತಾಡಿ.......... ॥ ೩ ॥

## ೧೬೧

ಜಯಮಂಗಳಂ ನಿತ್ಯ ಶುಭಮಂಗಳಂ
ಮಂಗಳಂ ಮುನಿಜನರ ಪಾಲಿಪರ್ಗೆ ॥ ಪಲ್ಲ ॥

ಮಂಗಳಂ ಅಷ್ಟಮದಂಗಳ ಮೆಟ್ಟಿದಗೆ
ಮಂಗಳಂ ಮದವೆಂಟನಳಿದಾತಂಗೆ
ಮಂಗಳಂ ಸಪ್ತವ್ಯಸನಂಗಳಂ ತುಳಿದರ್ಗೆ
ಮಂಗಳಂ ಪಂಚೇಂದ್ರಿಗೆಲಿದಾತಗೆ
ಜಯಮಂಗಳಂ.......... ॥ ೧ ॥

ಮಂಗಳಂ ಷಡ್ವಿಕಾರಂಗಳ ಈಡಿ ಮೆಟ್ಟಿದಗೆ
ಮಂಗಳಂ ಚತು:ಕರಣವರಿದಾತಗೆ
ಮಂಗಳಂ ದಶವಾಯುವೊಂದುಗೂಡಿದಗೆ
ಮಂಗಳಂ ಒಮ್ಮನದೊಳಿರ್ದಾತಗೆ ॥ ೨ ॥

ಮಂಗಳಂ ಭಕ್ತಗಣಂಗಳಂ ರಕ್ಷಿಪಗೆ
ಮಂಗಳಂ ಯತಿವರದ ಯೋಗೀಂದ್ರಗೆ
ಮಂಗಳಂ ಲಿಂಗಾಂಗವೊಂದಾದ ಮಹಿಮಂಗೆ
ಮಂಗಳಂ ಜಯ ತೋಂಟದಾರ್ಯರಿಗೆ ॥ ೩ ॥

## ೧೭೨

ಮಂಗಳಂ ಸಿದ್ಧಲಿಂಗಯತಿವರೇಣ್ಯಗೆ
ಮಂಗಳಂ ದೇವತಾದಿ ನಮಿತ ಪಾದಕಮಲಗೆ ॥ ಪಲ್ಲ ॥

ದೀನಜನ ತಮೋವಿಕಾರ ವಿಹತಿ ಸೂರನೆ
ವನಜನಯನ ಪ್ರಮದ ವಿಮೋಹ ದೂರಗೆ
ಮಂಗಳಂ......... ॥ ೧ ॥

ತಪೋದಾನಾದಿ ಮುಖ್ಯ ಶರಣಸ್ತೂಯಮಾನಗೆ
ದರ್ಪಕ ಪ್ರಹರ ಭಸ್ಮಲೇಪಿತ ಸುಕಾಯಗೆ
ಮಂಗಳಂ.......... ॥ ೨ ॥

ಬಾಲಚಂದ್ರಧರ ಕಿರೀಟ ಮೇರುನಿಲಯಗೆ
ಕಾಲಜಿತ ಕಪಾಲಧರ ಸು ತೋಂಟದಾರ್ಯಗೆ
ಮಂಗಳಂ......... ॥ ೩ ॥

## ೧೭೩

ರಾಗ : ತೆಲುಗ ಕಾಂಬೋದಿ

ಮೆಚ್ಚಿಸಲಳವಲ್ಲ[ವೀ]ಯವನಿಯ ಮನುಜರನು ತೋಂಟದೀಶ
ನಿಮ್ಮ ಚಿತ್ತದೊಲವನಿತ್ತು ನೀನೆ ಸಲಹೊ ದೈವ ತೋಂಟದೀಶ ॥ ಪಲ್ಲ ॥

ಊರೊಳಗಿದ್ದಡುಪಾಧಿಕನೆಂಬರು ತೋಂಟದೀಶ ಬಿಡ-
ದಾರಣ್ಯದೊಳಗಿರೆ ಮೃಗವೆಂದು ನುಡಿವರು ತೋಂಟದೀಶ
ಧೀರತನದಲಿರೆ ದಿಂಡೆಯನೆಂಬರು ತೋಂಟಧೀಶನೆನ್ನ
ಪಾರವೆಯ್ದಿಸಿ ಪಕ್ವಹೃದಯನೆನಿಸು ದೇವ ತೋಂಟದೀಶ ॥ ೧ ॥

ಮಾತನಾಡಿದರೆ ಸುಜ್ಞಾನಿಗೇಕೆಂಬರು ತೋಂಟದೀಶ ಮಾತ
ಸೋತು ಬಿಟ್ಟಿರ್ದಡೆ ಮೂಗನೆಂದೆಂಬರು ತೋಂಟದೀಶ
ನೀತಿಯ ನುಡಿಯೆ ನಿಷ್ಠೂರಿಯೆಂದೆಂಬರು ತೋಂಟದೀಶ ಸಯ-
ನಾತುರದೊಳಿರೆ ಜಡದೇಹಿಯೆಂದೆಂಬರು ತೋಂಟದೀಶ ॥ ೨ ॥

ಸಾರಸಾದಿಗಳನೆಲ್ಲ ವರಹಂಸವೆಂಬರು ತೋಂಟದೀಶ ವ್ಯಭಿ-
ಚಾರಿಯಾದಾತ್ಮರ ಮಾತು ನಿಜಪರಿಯೆಂಬರು ತೋಂಟಧೀಶ
ಘೋರನೆ ನಿದ್ರೆಗೈಯ್ಯಲು ಚೋರನೆಂಬರು ತೋಂಟದೀಶ ಉನ್ನ-
ತಾರೋಗ್ಯನಾದರೆ ಭೂತನೆಂಬರು ತೋಂಟದೀಶ ॥ ೩ ॥

ಕಟ್ಟಿ ನುಡಿಯೆ ವಾಕು ನಿಟ್ಠೂರಿಯೆಂಬರು ತೋಂಟದೀಶ ಹಿ-
ಮ್ಮೆಟ್ಟ ಮರೆಯೊಳಿರೆ ಬಲು ಹೇಡಿಯೆಂಬರು ತೋಂಟದೀಶ
ದೃಷ್ಟಕ್ಕೆ ನಿಂದರೆ ಬಲುಧೂರ್ತನೆಂಬರು ತೋಂಟದೀಶ ದಯ-
ವಿಟ್ಟು ನೀನೆ ಸಲಹಯ್ಯ ಕೃಪಾಕರ ತೋಂಟದೀಶ ॥ ೪ ॥

ಉರಗನ ಡೊಂಕು ಹುತ್ತಕೆ ನೇರವೆಂಬರು ತೋಂಟದೀಶ ನಿಮ್ಮ
ಶರಣರ ನಡೆ ನುಡಿ ನಿಮಗೆ ಸಸಿನವಯ್ಯ ತೋಂಟದೀಶ
ಹರಿವ ನದಿಯ ಡೊಂಕು ಸಲಿಲಕೆ ಸಸಿನವು ತೋಂಟದೀಶ ಸ್ವಾಮಿ
ಹರಭಕ್ತರಂತರಂಗದ ಸೋಂಕು ಘನ ಸೌಖ್ಯ ತೋಂಟದೀಶ ॥ ೫ ॥

❑ ❑

೧೭೪

ಸೈ ಶಾಭಾಸ್ ಸೈ ಶಾಭಾಸ್ ಚೆಲ್ವ ಎಂಥ ಮುತ್ತ ಕೊಟ್ಟ
ಮುತ್ತಿನ ಮೂಗುತಿ ಮಾಡಿ ಮೂಗಿನಲ್ಲಿಯಿಟ್ಟ ॥ ಪಲ್ಲ ॥

ತೋರಬಾರದಂಥ ವಸ್ತುವ ತೋರಿಸಿ ಬಿಟ್ಟ
ಮೀರಿ ಉನ್ಮನಿಯ [ಬೆ]ಟ್ಟು ಸಾರಲಿಕೆ ಸೂರೆಗೊಟ್ಟ ॥ ೧ ॥

ಅರಮೂರ ಹಾರದೆಗದು ಒಂದೆ ಮುಚ್ಚಿಯಿಟ್ಟ
ಅರು ಮಂದಿ ವೈರಿ ಮೊರೆಹ[ಗ]ಳನಿಳುಹಿಬಿಟ್ಟ ॥ ೨ ॥

ಕಟ್ಟುನಿಟ್ಟು ದಶದಿಂದ್ರಿಯಗಳನು ಕಾಸಿ ನೀ ಕಟ್ಟಿ
ದೃಷ್ಟಿಸಿ ನೋಡಲು ವಸ್ತುದೊಳಗೆ ವಸ್ತುವಿಟ್ಟ ॥ ೩ ॥

ಪಂಚಭೂತ ಪ್ರಪಂಚುಗಳನು ಮಾರಿಸಿ ಇ[೦]ಬಿಟ್ಟ
ಸಂಚಿತಾರ್ಥ ಪುಣ್ಯ ಮುಂದೆ ಸೆಱಗಿನಲಿ ಕಟ್ಟಿ ॥ ೪ ॥

ಭಯಾಭೀತಿವಿಡಿದು ಬಿಟ್ಟು ಗುರುವಿನ ಪಾದವಿಡಿದು ಗಟ್ಟಿ
ದಯಾಪರದೊಳು ದತ್ತ ಕೀರ್ತಿಯನಿಂಬಿಟ್ಟ ॥ ೫ ॥

❑ ❑

೧೭೫

ಸೈ ಸದ್ಗುರುವೆ ಸದಯದಿಂದೆಲ್ಲ ಮೈಮರದೆನೆ
ಐ ಅದೆಯೇನು ತಿಳಿಯದೆ ಮೈಮರದು ಮತ್ತುಳಿದೆನೆ
ಕೈ ತಲೆಯ ಮೇಲಿಡಲು ವೈರಾಗ್ಯ ಹಿಡಿದೆನೆ
ತಾ ತೈ ತೈ ಕುಣಿಸುತಲೆನ್ನ ತನ್ನಂತೆ ಮಾಡಿದನೆ ॥ ಪಲ್ಲ ॥

ನಾದ ಶಬ್ದದೊಳು ಮನಲುಬ್ಧ ಮಾಡಿದನೆ
ವಾದಿ ವಿವಾದಿ ಕೂಡಿ ಕಾದಿ ಗೆಲಿಸಿದನೆ
ಬಾಧಿ ಬಾಧಕವಿಲ್ಲದ ಹಾದಿ ತೋರಿದನೆ
ಈದ ಪುಲಿಯಂತ ಮನವ ಸಾದು ಮಾಡಿದನೆ ॥ ೧ ॥

ನಾನು ನಾನೆಂಬುದ ಮರಸಿ ತಾನು ತಾನಾದನೆ
ಮಾನ ಅಪಮಾನವೆರಡು ಪಾನಮಾಡಿದನೆ
ಜ್ಞಾನಮಾರ್ಗವ ತೋರಿದ ಶಾನ ಹೇಳಿದನೆ
ಬೋಧ ಬೋಧಿಸಿದ ಎನಗೆ ವಿನೋದ ಮಾಡಿದನೆ ॥ ೨ ॥

ಭೃಕುಟಿಮಧ್ಯದಿ ವಸ್ತು ಪ್ರಕ[ಟ] ಮಾಡಿದನೆ ನಾ–
ಸಿಕದ ಕೊನೆಯೇರಿ ನೋಡಲು ಭಾನುಪ್ರಕಾಶವ ತೋರಿದನೆ
ಆಸನದ್ವಾರ ಕವಾಟವನಿಕ್ಕಿ ಸುಸ್ವನವ ಬಲಿಸಿದನೆ
ಈಶನ ರೂಪ ಮಹೇಶನ ದತ್ತ ಘೋಷದೊಳಗೆ [ನೆಲ]ಸಿದನೆ ॥ ೩ ॥

❑ ❑

೧೭೬

ಮದನಸ್ವರೂಪನು ಬಾರನೆ ಸದಮಳಾಂಗಿ ಮುಖದೋರನೆ
ಸುದತಿ ದುಬಲಗುಂದಿ ಹಿರೇಮಠದೊಳಗಿಪ್ಪ
ಚದುರ ರೇವಣಸಿದ್ಧನೆ
ಮುದದಿ ಎನ್ನ ಪ್ರಾಣೇಶನೆ ॥ ಪಲ್ಲ ॥

ಧೀರ ದೂರಾದನು ಇಂದಿಗೆ
ನಾರಿ ಪೇಳೆ ಬರುವದೆಂದಿಗೆ
ಕೀರನಂತೆ ಮಾಕಂದದ ಪಣ್ಣಿಗೆ
ಹಾರೈಸಿ ನಾ ಬಡವಾದೆನೆ
ಮಾರನ ತಾಪದೊಳದ್ದನೆ ॥ ೧ ॥

ಚೆನ್ನಾಗಿ ನಾ ಮನಸಿಟ್ಟೆನೆ
ಕನ್ನೆ ನಲ್ಲಗೆ ಬಂದ ಸಿಟ್ಟೇನೆ
ತನ್ನಯ ಚರಣವ ನಂಬಿ ಕೊಂಡಿರಲು
ಭಿನ್ನ ಭೇದವ ಮಾಡಿಟ್ಟನೆ
ಎನ್ನನು ತಾನೇಕೆ ಬಿಟ್ಟನೆ ? ॥ ೨ ॥

ನಾಡೆಯಾವಳೊಡಗೂಡಿದ
ರೂಢಿಯೊಳಪಕೀರ್ತಿ ಮಾಡಿದ
ಗಾಢದಿ ನೀ ಪೋಗಿ ಕಾಂತನಿಗೆ ಕರ
ಜೋಡಿಸಿ ಮಂದಿರ ಸೇರಿಸೆ
ಪ್ರೌಢನ ಕರತಂದು ತೋರಿಸೆ ॥ ೩ ॥

❑ ❑

೧೭೭

ರಾಗಃ ಮೋಹನ ಕಲ್ಯಾಣಿ

ಬೆಳಗಿರಾರತಿಯ ದು[ರ]ದುಂಡೀಶಗೊಲಿದು ನಿ
ರ್ಮಲ ನಿಖಿಲ ನಿಗಮಾಗಮಸ್ತುತಗೆ ನಲಿದು ॥ ಪಲ್ಲ ॥

ಭುವನ ಪಾವ[ನ]ವ ಮಾಡುವ ನೆವದಿ ಶ್ರೀ ಸದಾ
ಶಿವ ಚಿತ್ಕ[ಲಾ]ರೂಪಮವನಿಯೊಳು ಬಂದು
ಅವಯವ[ವ]ನಾಂತು ಶಿವಲಿಂಗೇಶನಾದ ಭವ
ದವದಾವಾ[ನ]ಲದ ದೀರ್ಘಲೋಚನಗೆ ॥ ೧ ॥

ನೂರೊಂದುಸ್ಥಲವಿಚಾರವನರುಹಿ ಶಿವಯೋಗಿ
ವಾರಿಜಮಣಿಯೆನಿಸಿ ಮಹಿಮಾಗಾರದಿ
ಕಾರುಣ್ಯದಿಂದಲರಭಾವಿಶೈಲದ ಮಠವೆ
ಭೂರಮ್ಯ ಕೈಲಾಸವೆನಸಿ ನೆಲಸಿದ[ಗೆ] ॥ ೨ ॥

ಮುರಿಗಾ ಜಗದ್ಗುರು ಪರಾನಂದಕರ ಪುಣ್ಯ
ಚರಿತ ತತ್ಕರಜಾತ ಲೋಕವಿಖ್ಯಾತ
ಧರಣೀಂದ್ರ ಚಂದ್ರ ಮಲ್ಲೇಂದ್ರ ವೈಭವದ ಶ್ರೀ
ಕರ ಸಿದ್ಧಲಿಂಗ ಭವಭಂಗ ಭಾಸ್ವರಗೆ ॥ ೩ ॥

❑ ❑

೧೭೮

ಶೀಘ್ರದಿಂದ ಸಲಹೊ ಎನ್ನನು ಶ್ರೀ ಸಿದ್ಧರಾಮ
ಶೀಘ್ರದಿಂದ ಸಲಹೊ ಎನ್ನನು ॥ ಪಲ್ಲ ॥

ನೀನು ದಯಾಭರಿತ ಮೂರ್ತಿ
ದೀನರ ದುರಿತಾಪಹಾರಿ
ಹೀನಕ್ಲೇಶ ಕಳೆದು ಬಹು ನಿ
ಧಾನನೆನಿಸಿದಯ್ಯ ಈಗ ॥ ೧ ॥

ಬಂದ ಕಂಟಕ ಪಾ[ರು] ಮಾಳ್ಪೆ
ಬಂಧುರ ಮಹಿಮಾನು ಚರಿತ
ಬಿಂದು ವಿಗ್ರಹಮೂರ್ತಿ ನಿನ್ನ
ವಂದಿಸಿ ಬೇಡುವೆನು ವರವ ॥ ೨ ॥

ದೇವದುರ್ಗಮಠ ನಿವಾಸ
ದೇವ ದಿವ್ಯ ಮಹಿಮ ಈಶ

ಭಾವಜನರ ಭರಿತ ಪೋಷ
ಭವ್ಯತರ ಪ್ರಕಾಶ ಬಿಡದೆ
ಶೀಘ್ರದಿಂದ ಸಲಹೊನ್ನನು ॥ ೩ ॥

❑ ❑

೧೭೪

ಲಲ್ಲಾ ಲಿಲ್ಲಿ ಲಿಲ್ಲಿ ಲಮ್ಮ ಲಲ್ಲಾ ಲಿಲ್ಲಿ ॥ ಪಲ್ಲ ॥

ಹಸುಮಗನಾದ ಮಸಣದದಲ್ಲಿದ್ದ
ಕುಸಿಲದ ಜಂಗಮನಾದನೆ
ಹಸಿದು ಬಂದು ಸಿಸು[ವನು] ತಿಂದ
ಅಸಮಯ ಸಿದ್ಧ ಮಾಸಾಳು ಬಂದ ॥ ೧ ॥

ಕಟ್ಟಗೆ ಸಿಲ್ಕಿ ಹೊಟ್ಟೊಳಗಾಗಿ
ಬಟ್ಟಬಯಲಾಗಿ ಹೋದನೆ
ಹೊಟ್ಟೆ ಹರಿದು ಬಟ್ಟೆಯ ಮಾಡಿ
ನೆಟ್ಟನ ಖೋಡಿನ ಮಾಸಾಳು ಬಂದ ॥ ೨ ॥

ಇ[ರುಳು] ಹಗ[ಲು] ಸಾಯನೆಂಬ
ದುರುಳ ಹಿರಣ್ಯಕಶ್ಯಪನ
ಕರುಳು ತಾ ಕೊಂಡು ಕೊರಳಿಗೆ ಹಾಕೊಂಡು
ನರಯಣನೆಂಬ ಮಾಸಾಳು ಬಂದ ॥ ೩ ॥

ಕಲ್ಲಲಿಯಿಡುವರು ಕಾಲಲಿ ಒದೆವರು
ಬಿಲ್ಲು ಬಿಲ್ಲಲಿ ಹೊಯ್ವ[ರಮ್ಮ]
ಖುಲ್ಲದೈತ್ಯರನೆಲ್ಲರ ಮರ್ದಿಸಿ
ಬಲ್ಲಿದ ಸಿದ್ಧ ಮಾಸಾಳು ಬಂದ ॥ ೪ ॥

ಹಾಗದಬ್ರಹ್ಮನ [ಸೂ]ರೆಗೊಂಡರು
ಕೂಗಿನ ಮಾರಿತಂದೆಗಳ
ನಾಗಲಿಂಗ [ನ] ಧಾತ ಶಿವ ಶಿವ–
ಯೋಗಿಯೆಂಬ ಮಾಸಾಳು ಬಂದ ॥ ೫ ॥

❑ ❑

## ೧೮೦

ಪಾದಪೂಜೆಯ ಮಾಡುವೆ ಪರಬ್ರಹ್ಮಮೂರ್ತಿಗೆ ॥ ಪಲ್ಲ ॥

ಅಂತರಂಗದರ್ಘ್ಯಣಿಯೊ[ಳು] ಸಂತೋಷದಿ
ಸತ್ಪಾತ್ರದಲಿ ಬೆರಸಿ
ಚಿಂತಿಹರದು ನಾನು ಅಂತಃಕರುಣ ಪಡದು
ಶಾಂತ ಜಂಗಮಲಿಂಗನ ಪಾದಕ್ಕೆರಗಿ ನಾನು ॥ ೧ ॥

ಅಷ್ಟಮದಗಳನೆಲ್ಲ ಅಷ್ಟಾಂಗದಿ
ಸುಟ್ಟು ಭಸ್ಮವ ಮಾಡಿದೆ
ನಿಷ್ಠೆಯಿಂದಲಿ ನಿಜದೈಕ್ಯವಾಗಿರುತಿರೆ
ಶ್ರೇಷ್ಠ ಜಂಗಮಲಿಂಗನ ಪಾದಕ್ಕೆರಗಿ ನಾನು ॥ ೨ ॥

ತ್ರಿಣಯನೆಂಬೊ ತ್ರಿಪುರವೇರಿ ತ್ರಿಗುಣವನಳಿದು
ತ್ರಿ ಬಿಲ್ವ ಪತ್ರ [ಪೂಜೆ] ಮಾಡಿ
ತ್ರಿನೋಟದಲಿ ನೋಡಿ ತ್ರಿಕೂಟದಲಿ ಕೂಡಿ
ತ್ರಿಣಯ ಜಂಗಮಲಿಂಗನ ಪಾದಕ್ಕೆರಗಿ ನಾನು ॥ ೩ ॥

ಧಾತು ದಾವಾಗ್ನಿಯಿಂದ ದಶವಿಂದ್ರಿ ತೆಗದು
ದಶಾಂಗವನು ಮಾಡಿದೆನು
ದೃಷ್ಟ ದುರ್ವಾನೆಂಬ ದುರ್ವಾಸನಿಯ ತೆಗದ-
ದೃಯ[ದೆ] ಜಂಗಮಲಿಂಗನ ಪಾದಕ್ಕೆರಗಿ ನಾನು ॥ ೪ ॥

ಕತ್ತಲೆ ಬೆಳಗೆಂಬೊಂದು ಕಲೆಗಳನು ತೆಗದು
ಕರ್ಪೂರವನು ಮಾಡಿದೆ
ಕಲಿ ಚೆನ್ನವೀರಾರ್ಯ ಕರುಣಜ್ಯೋತಿಯ ತುಂಬಿ
ಶಾಂತ ಶ್ರೀ ನಾಗೇಶನ ಪಾದಕ್ಕೆರಗಿ ನಾನು ॥ ೫ ॥

❑ ❑

## ೧೮೧

ಶ್ರೀ ಗುರು ಬಸವಲಿಂಗಾಂಗದ ಸುಖವರಿದ-
ಭಂಗರು ನೀವೆ ಲಿಂಗಯ್ಯ ॥ ಪಲ್ಲ ॥

ತನುವಿರೆ ಲೌಕಿಕ ಪ್ರಪಂಚಲಿ
ಮನವನು ಲಿಂಗದ ಸಂಗದಲಿ
ಅನುವರಿದೈಕ್ಯವ ಮಾಡಲು ಬಲ್ಲ
ಅನಘರು ನೀವೆ ಲಿಂಗಯ್ಯ ॥ ೧ ॥

ಪ್ರಾಣವು ಪ್ರಪಂಚಲಿ ಹೋಗಲೀಯದೆ
ಮಾಣದೆ ಸಂಗದಲಿ
ಕೇಣವಿಲ್ಲದೆ ನಿಂದಚಲಿತರಾದ
ಜಾಣರು ನೀವೆ ಲಿಂಗಯ್ಯ ॥ ೨ ॥

ಕಂಗಳು ನೋಡುತ ಮನ ತಾ ಕೂಡುತ
ಹಿಂಗದೆ ಸಾವಧಾನಿಯಾಗಿ
ಸಂಗವನೈದಲು ಬಲ್ಲ
ಮಂಗಳಮಹಿಮರು ಲಿಂಗಯ್ಯ ॥ ೩ ॥

ಹೃದಯಕಮಲಮಧ್ಯದಿ ನೆಲಸಿರ್ಪ
ಚಿದಾದಿತ್ಯನ ಬೆಳಗಿನಲಿ
ಮುದದಿಂದ ಓಲಾಡುತ ನಿರುಪಮ ನಿಜ
ಸದಮಲಾನಂದರು ನೀವೆ ಲಿಂಗಯ್ಯ ॥ ೪ ॥

ತ್ರಿಜಗದಾದಿಯಾದಖಿಳ ಸುಖಂಗಳ
ತ್ಯಜಿಸಿ ಮಾಯಾಶಕ್ತಿಯನು
ನಿಜಗುರು ಶಾಂತಮಲ್ಲೇಶನೊಳ್ಬೆರೆದಿದ
ಅಜಡದದ್ವೈತರು ನೀವೆ ಲಿಂಗಯ್ಯ ॥ ೫ ॥

☐ ☐

೧೮೨

ಎನ್ನನುಳಿದೇನು ಕಾರಣ ಪೋದೆ ಪೇಳು ಜಗ-
ದನ್ನ ಜನಿಮೃತಿ ನಾಶ ಜಂಗಮ ಸುವೇಶ ॥ ಪಲ್ಲ ॥

ಶರೀರಭೋಗವ ನೆಚ್ಚಿ ಮರದನಿವನೆಂದೆನ್ನ
ಪರಮಭಕ್ತನ ಬಳಿಗೆ ದೂರಲೈದಿದೆಯೊ ?

ಅರುಹಿಲ್ಲದನ ಸಂಗ ಭಂಗವೆಂದರಿದು ನಿಜ–
ವರಿತನೊಡಗೂಡಿ ಸುಖಿಸಲು ಹೋದೆಯೊ ? ॥ ೧ ॥

ಅರಿದು ಸಪ್ತಾವರಣ ಸಪ್ತಭಾವನೆಯೊಳ–
ವೆರದು ಭೇದಾಶ್ರಯವೆನಿಪ್ಪನಿವನ
ಪೊರೆಯೊಳಿರಲೆನ್ನ ಪೂರ್ಣತೆಗೆ ಕುಂದೆಂದು ನಿಜ–
ವರಿತವನೊಡಗೂಡಿ ಸುಖಿಸಲು ಹೋದೆಯೊ ? ॥ ೨ ॥

ಅರಿವರ್ಗ ಮದ ವೆಸನವಿಂದ್ರಿಯವಿಷಯ ಮುಖ್ಯ
ಶರಿರಗುಣವಾತ್ಮಕೆಂದಳದಿ ವಾಗ್ಬಾ
ನರನ ಸಮ್ಯಾಳವಿದು ಸ್ಥಿರವಲ್ಲವೆಂದು
ಚಿದಾಂಬುಧಿಯೊಳಿರ್ದು ಬಾಳಲ್ಕೆದಿದೆಯೊ ? ॥ ೩ ॥

ಊಡುವಲ್ಲಿ ಉಡುವಲ್ಲಿ ಘ್ರಾಣಿಸುವ ಕಾಲದಲ್ಲಿ
ನೋಡುವೆಡೆಯಲ್ಲಿ ಕೇಳುವ ಸಮಯದಿ
ಮೂಢತನದಿಂ ನಿನ್ನ ಮರದನಿವನೆಂದೆನ್ನ–
ದೂಡಿ ಚಿದ್ರೂಢರೊಡನಾಡಲ್ಕೆದಿದೆಯೊ ? ॥ ೪ ॥

ಮನಕೆ ಮಂಗಳವಾದ ಇನ ಚಂದ್ರ ಗಮನ
ಪುರವನು ಹೊಕ್ಕು ಸೂಕ್ಷ್ಮದ್ವಾರದ ಯೋಗಪುರದಿ
ತನಗೆ ತಾ ರಾಜಿಸುವ ರಾಜಯೋಗಿಯ ಕೂಡೆ
ಘನ ನಿರಂಜನಲಿಂಗ ಮೆರೆಯಲ್ಕೆದಿದೆಯಾ ? ॥ ೫ ॥

 

## ೧೮೩

### ರಾಗಃ ಮುಖಾರಿ

ಕಂಡೆ ಪುಸಿಯಲ್ಲ ಪುಸಿಯಲ್ಲ ತಿಳಿಯಲರಿಯದೆ[ನ]ಗೆ ಸುಳ್ಳಂ
ಪುಂಡರೀಕದಿ ಕನಕರಜತಾಚಲಗಳಂ ॥ ಪಲ್ಲ ॥

ನಳಿಯೊಳಗಣ ಕೊಳದಿ ತಿಳಿನೀರು ತುಂಬಿ ಸಂ–
ಚಳಿಸದಿರೆಯದರೊಳಗೆಯಳಿರತ್ನವ

ತಳೆದು ರವಿ ಶಶಿ ಶಿಖಿಯ ಬೆಳಗಿನ ಬಳಸಿನಂತೆ
ಪೊಳೆವಾಣಿಮುತ್ತ ಮಧ್ಯದಿ ತೋರುವಿರವ ॥ ೧ ॥

ಕಾಳೋರಗಗೇಳು ಗಂಟಿಕ್ಕಿ ಬೆಂಕಿಯಪುರದಿ
ಕೋಳುಗೋಲೆಯೊಳು ಶಿರವಿಟ್ಟು ಲಾಂಗುಲವ
ಮೇಲು ಸೋಟೆಯೊಳಿರಿಸೆ ನೆಲನುರಿಗೆ ಸೈರಿಸದೆ
ಏಳುತಲಿ ಮೂವೆಸರನಾಂತು ರಂಜಿಪುದ ॥ ೨ ॥

ಹುಟ್ಟುಬಂಜೆಯ ಮಗನು ಹಿರಿಯ ಬೀಜವ ಬೆಳೆದು
ಸುಟ್ಟು ಗಿರಿಗಳ ಮೊಲನ ಕೋಡಕಿತ್ತು
ಕಟ್ಟಿ ಗಗ[ನ]ದಿ ಕೆರೆಯ ತಿಳಿನೀರ ಕುಡಿದು ನೆರೆ
ಬಟ್ಟಬಯಲೊಳಗೆ ಸತ್ತವನ ನೆರೆದ ಪರಿಯ ॥ ೩ ॥

ತುಂಬಿದ ಕೆರೆಯೊಳಗಷ್ಟಕುಂಭಗಳು ಹರಿಯೊಡನೆ
ಬೆಂಬಿಡದೆ ಸೆಣಸುತಿರೆ [ಹೆ]ಳೆವನೊಬ್ಬ
ಕಂಬಳಿಯ ಮುಸುಕಿಟ್ಟು ಕಮಲಗುಣದಿಂ ಕಟ್ಟಿ
ಕುಂಭದೊಳು ಸೆರೆಗೆಯ್ದು ಖೇಚರಿಯೆನಿಪುದ ॥ ೪ ॥

ಬೇರುಮೇಲಣ ಸಸಿಯು ನೀರಿನಿಂ ಕೊರಗುತಿರೆ
ಭೂರಿ ಗಂಟಿಕ್ಕಿ ಪೊರೆಯಲು ಬುಡದೊಳು
ಸಾರ ಫಲವಾಗೆ ಸವಿದವ ನಿರಂಜನಲಿಂಗ
ಓರಂತೆಯಾಗಿ ಉರಿವತಿಶಯ[ದ] ವನವ ॥ ೫ ॥

೧೮೪

ಬೆಳಗುತಲಿದೆ ಜ್ಯೋತಿ ನೋಡಿರೆ
ದಳದೊಳು ಚಲಿಸದೆ ಮನವ ಮೇಲಿಟ್ಟು ॥ ಪಲ್ಲ ॥

ನೆಲ ಜಲಗಳ ನೆಲೆಗಳ ನೋಡಿ[ಯ]ಲ್ಲಿ ಅ–
ನಿಲನಾಳಗಳನಾಗಸದೆ ಕುತ್ತಿ ನಾಸಿ[ಕ]–
ದೆರಡು ಬಟ್ಟೆಗಳ ಕಟ್ಟಿ ನಡು
ಬಿಲದೊಳು ನಾಗರ ಪುಗಿಸಿಯಗ್ರದೊಳು ॥ ೧ ॥

ಮೊರದೇರನ ಮೊಗವನು ಕ[ಂಡು] ನಡುಮೇಲೆ
ಹಾರುವ ಹಂಸ[ನ]ನಂಬು[ಧಿ]ಯೊಳಿಟ್ಟು ಬಲು
ಽರಫಣಿಯ ಗಂಟನು ಬಿಡಿಸಿಯವನು ಮಧ್ಯ
ದ್ವಾರದೊಳಗೆ ಸದೆವಿಡಿಯ ಸ್ಥಾನಗಳೊಳು ॥ ೨ ॥

ವಾರಕಮನಸ್ಕಮುದ್ರೆಗಳಿಗೆ ತಾನೆ
ಸಾರವೆನಿಪ ರಾಜಯೋಗದಿಂದೆ ದಿವ್ಯ
ಮೇರು ರಜತಗಿರಿಗಳನೆತ್ತಿ ಪಿಡಿದಗ್ರ
ವಾರಣಾಸಿಯೊಳು ಕೂಡಿಸುತ ಶಿರದೊಳು ॥ ೩ ॥

ಸಿದ್ಧಾಸನೊಡ್ಯಾಣ ಮಹಬಂಧ ಮೂರು
ಬುದ್ಧಿ ನಾಗಣೆಯನು ರಾಜಾರ್ಮದಿಯವ-
ಳೆದ್ದು ಗಗನಕೆ ಹಾರಲೇಕೆ ಶಿರದೊಳ
ಗಿದ್ದ ರತ್ನವು ಪ್ರಜ್ವಲಿಸೆ ತದ್ಬೆಳಗಿನೊಳು ॥ ೪ ॥

ಹಲವು ಮುದ್ರಾಸನ ಕರಣಂಗಳ ಸಹಿತ
ನೆಲೆಯೆನಿಪುತ್ತರ ಶಾಂಭವಿಯ ಮಹಾ
ಬಿಲದೊಳು ನಿಂದ[ರಿ]ವನೊಳಗೊಂಡು ಪ್ರ-
ಜ್ವಲಿಸೆ ನಿರಂಜನಲಿಂಗವೆನಿಸುತೆ ॥ ೫ ॥

## ೧೮೫

ಮೂಗುತಿ ಸಿಕ್ಕಿತಾಹಾ ಎನಗೊಂದು
ಮೂಗಿನ ಕೊನೆಯೊಳು ತಾನೆ ಬೆಳಗಿ ವೇ
ದಾಗಮ ಸಿದ್ಧಾಂತವೆನಿಸಿ ರಾಜಿಸುತಿರ್ಪ ॥ ಪಲ್ಲ ॥

ಸ್ಥಿರಪುರುಷನ ಪರತರ ಸುಖದನುಭಾವ-
ದಿರವಿನಿಂದಲಿಯನ್ಯವರಿಯದಿಹ
ಶರಣಸತಿಯ ಲಿಂಗಾಂಗದ ಸಮರಸದ ತಾ
ಪರಮಭೂಷಣವಾಗಿಯೊಪ್ಪುತಿಹ ॥ ೧ ॥

ಜ್ಞಾನದೇವತೆ ಕೈವಲ್ಯವುಯೆನುತಲಿ ಮತ್ತೆ
'ನಾನ್ಯಪಂಥಾ' ಎನುತಲಿ ಶ್ರುತಿಯು

ತಾನೆ ಸದ್ರೂಪಾಗಿ ಕರತಳದೊಳು ನಿಂದು
ಧ್ಯಾನಿತ ಯೋಗಿಯ ಹೃದಯದೀಪವಾದ ॥ ೨ ॥

ಹಳದಿ ಹಸಿರು ಕೆಂಪು ಬಿಳಿದು ಪಾಟಲ ನೀಲ–
ದೊಳಗಲ್ಲದವನೆಲ್ಲ[ವ]ನೊಳಕೊಂಡು
ನಳಿನಸಖೇಂದುವಹ್ನಿಗಳನೀಕ್ಷಿಸಿ
ತಳತಳಿಸುವ ತೋರ ತಾರಕಿಯಂದದ ॥ ೩ ॥

ಗಂಗೆಯ ತಡಿಯಲ್ಲಿ ಕಂಗಳೆರಡನಿಟ್ಟು
ಹಿಂಗದೆ ನಾ ನೋಡುತಿರಲಾಗಿ
ತಿಂಗಳನೊಳಕೊಂಡು ತಿಳಿಜೊನ್ನದಿ ಶಿವ
ಜಂಗಮ ತೋರಿದ ನಿಜಮುತ್ತಿನ ॥ ೪ ॥

ನವಮಣಿಯೆನಿಸಿ ನಾನಾದೇಶವನು ಸುತ್ತಿ
ಶಿವಮಯವೆನಿಸಿ ನೇತ್ರದೊಳು ನಿಂದು
ಅವಿರಳದ್ವಯಮೆನುತ ಸರ್ವಕಾರಣ
ಭವ ವಿಮೋಚನ ನಿರಂಜನಲಿಂಗವೆನಿಸುವ ॥ ೫ ॥

೧೮೩

ಮಂಗಳಂ ಮದನ ಸಂಹಾರನಿಗೆ ದಿ
ವ್ಯಾಂಗ ಗುಬ್ಬಿಯ ಚೆನ್ನಬಸವೇಶಗೆ
ಮಂಗಳಂ ಮದನ ಸಂಹಾ[ರನಿಗೆ] ॥ ಪಲ್ಲ ॥

ಯತಿರಾಜರಾಜಗೆ ರತಿರಾಜಭಂಗಗೆ
ಕ್ರತುರಾಜಸುತ ಯುದ್ಧಪ್ರೀತನಿಗೆ
ಸೃತಿಸಿರೋದ್ಭೂಷಗೆ ಸೂರ್ಯಪ್ರಕಾಶಗೆ
ಪ್ರತಿಯಿಲ್ಲದಗೆ ಪರಿಪೂರ್ಣನಿಗೆ ॥ ೧ ॥

ಫಣಿಪತಿಭೂಷಗೆ ಪರಮ ಯೋಗೀಶಗೆ
ತ್ರಿಣಯಗೆ ತ್ರಿಪುರ ಸಂಹಾರನಿಗೆ
ಅಣಿಮಾದಿ ದೂರಗೆ ಅನಘ ಚರಿತನಿಗೆ
ಪ್ರಣಮಪೀಠಾಂಚಿತ ಪರಬ್ರಹ್ಮಗೆ ॥ ೨ ॥

ಮೂರಾರುಚಕ್ರ ನಿವಾಸ ಮಹೇಶಗೆ
ನೂರೊಂದುಸ್ಥಲಕುಲದಧಿಪನಿಗೆ
ಮೂರುಮಂಡಲ ಮಧ್ಯ ತಾರಕರೂಪಗೆ
ಮೂರುದೇವರ ಮೂರ್ಧ್ನಿಕಾಂತನಿಗೆ ॥ ೩ ॥

ಜಂಗಮರೂಪಗೆ ಜನಿಮೃತಿ ಲೋಪಗೆ
ಶೃಂಗಾರಸಾರ ಸು ನಿವಾಸನಿಗೆ
ಅಂಗಜಪುರದಧಿಪತಿಯ ಸಲಹುತಿರ್ಪ
ತುಂಗ ಶ್ರೀ ಗುರು ಚೆನ್ನಬಸವೇಶಗೆ ॥ ೪ ॥

ಪರಮವಿರಕ್ತಗೆ ಪಾಪನಿರ್ಮುಕ್ತಗೆ
ಗುರುತಿಲಕಗೆ ಗುಹತಾತಗೆ
ಕರಿಯತಾರೆಯ[ಮಧ್ಯದ] ಮನೆಯ ಶಿಖರದಲಿ
ಮೆರವ ನಿರಂಜನಲಿಂಗೇಶಗೆ
ಮಂಗಳಂ ಮದನ ಸಂಹಾರನಿಗೆ ॥ ೫ ॥

 

೧೮೭

ಜಯಮಂಗಳಂ ಭವತು ಶುಭಮಂಗಳಂ
[ಜಯ] ಜಗದಧಿಪತಿಗೆ ಜನ್ನಸಂಹಾರನಿಗೆ ॥ ಪಲ್ಲ ॥

ಶ್ರೀ [ಶ] ವಾಣೀಶ [ಜಗ]ದೀಶಯಜಸುರ ನಮಿತ
ಮಾ ಸಹೋದರ ಭೋಗಭೂಷಿತನಿಗೆ
ಕೇಶವನಯನ [ನ]ತಪಾದ ಪಂಕಜನಿಗೆ
ಭಾಸುರ ಕನಕಗಿರಿವಾಸನಿಗೆ ॥ ೧ ॥

ಮೂರುಪುರಗಳ ಸುಟ್ಟ ಆರುಗುಣಗಳ ಗೆದ್ದ
ಮೂರುಮಲಗಳ ಬಿಟ್ಟ ಮುನಿವರ್ಯಗೆ
ಮೂರುಲೋಕವನಾಳ್ವ ಮೂರುದೇವರ ದೇವ
ಮೂರುಜಗದೊಳು ಮೆರೆವ ಮಾಲಿಂಗಗೆ ॥ ೨ ॥

ಶ್ಯಾಮಕಂಧರನಿಗೆ ಶ್ಯಾಮಚರ್ಮಾಂಬರಗೆ
ಶ್ಯಾಮಲಾಂಗಿಗೆ ಸಂಗಸುಖವಿತ್ತಗೆ
ಶ್ಯಾಮಕಂಧರನನೇರಿದ ಪಿತನಿಗೆ
ಶ್ಯಾಮಲಾಂಗನ ದಹಿಸಿದನಿಗೆ ॥ ೩ ॥

ಆಧಾರಮಂಟಪದ ಆದಿಶೇಷನ ತುಳಿದು
ಮೇದಿನಿಯೊಳೊಪ್ಪುತಿಹ ಮೂಲಾಗ್ನಿಯಂ
ಮೋದದಿ[ಂ] ಸ್ಫುಟ ಮಾಡಿ ಆದಿಮಾರ್ಗವ ಸುಟ್ಟು
ಸಾಧಿಸಿ ತೋರ್ಪ ತಾರಕರೂಪಗೆ ॥ ೪ ॥

ಮೇರುಗಿರಿಯಗ್ರದಿಂದೊಪ್ಪುತಿಹ ಮುಪ್ಪುರದಿ
ಸೂರರಮಿತ ಪ್ರಕಾಶವ ಬೀರುತೆ
ಭೂರಿವಾದ್ಯದ ರವದಿ ಮೆರವುತಿಪ್ಪತುಳ ಮಹ
ಗುರು ನಿರಂಜನ ಸಿದ್ಧಲಿಂಗೇಶ ನಿಮಗೆ ಸತತಂ ॥ ೫ ॥

❑ ❑

## ೧೮೮

*ಕರ ಜೋಡಿಸುವೆನು ಗುರುವೆ ಮೂರು
ಕರಣದಿ ಭಾರಿ ಹೃದಯದಿ
ಪಾರಮಾರ್ಥ ಸುಖ ಸೇರಿಸುವನು ಗುರು ॥ ೧ ॥

ಅಧಿಕವಾದ ವಿಧ ವಿಧ ಛಂದ
ಮಧುರ ಮುಕ್ತಿಯನ್ನು ಬೆದರದೆ ಶ್ರೀ ಗುರು ॥ ೨ ॥

ನಿರುಪಾಧಿ ಮಾತು ಮರತರೆ ಥೂ ಥೂ
ಅರಿತು ಬ್ರಹ್ಮವನ್ನು ಗುರುತಿನೊಳಗೆ ಗುರು ॥ ೩ ॥

## ೧೮೯

ಯಂತ ಶಿವಯೋಗಿ ಬಂದಾನೆ ಊರ ಹೊರಗೆ ಹಾನೆ
ನಿಂತರೆ ನೆರಳು ಮೊದಲಿಲ್ಲ ನಾ ನೋಡಿ ಬಂದೆ ॥ ಪಲ್ಲ ॥

---

* ಗುರುನಾಥನ ಚರಿತ – ಎಂದು ಆದಿಯಲ್ಲಿ ಬರೆದಿದ (ಸಂ)

ಚಿಕ್ಕ ಪ್ರಾಯದ ಪರದೇಶಿ ಬೈಲೊಳಗೆ ಹಾನೆ
ಅಕ್ಕ ಅವನಂದ ಬಹು ಛಂದ ನಾ ನೋಡಿ ಬಂದೆ
ಮುಕ್ಕಣ್ಣನವತಾರದವನೆ ಆ ಶಿವಯೋಗಿ
ಮುಕ್ತಿದೊರಕುವದು ಅವನಲ್ಲಿ ನಾ ನೋಡಿ ಬಂದೆ ॥ ೧ ॥

ನಡೆ ನುಡಿ ಎರಡು ಇಲ್ಲವೆ ನಿಂತಲ್ಲಿ ಹಾನೆ
ಹಿಡಿದೇನೆಂದರೆ ಸಿಗವೊಲ್ಲ ನಾ ನೋಡಿ ಬಂದೆ
ಪಡದವರಿಗವನ ದರುಷನವೆ ಸುಳ್ಳಿಲ್ಲವಮ್ಮ
ಒಡೆಯ ದೊರಕುವದು ಸುಮನಲ್ಲ ನಾ ನೋಡಿ ಬಂದೆ ॥ ೨ ॥

ಅರಿಯದವರರಿಯರೆಯಮ್ಮ ಆನಂದರೂಪ
ಮರವೆ ಜನಗಳಿಗೆ ಕಾಣಿಸನೆ ನಾ ನೋಡಿ ಬಂದೆ
ನಿರುಪಾಧಿ ಕರುಣವಾಗಲಿಕೆ ಕಾರುಣ್ಯಮೂರ್ತಿ
ಗುರುತ ಅರಿವದು ನಿಶ್ಚಯವೆ ನಾ ನೋಡಿ ಬಂದೆ ॥ ೩ ॥

❑ ❑

## ೧೯೦

ಲಜ್ಜೆ ನಾಚಿಕೆಯಿಲ್ಲದ ಕೋಚೆ ಮೂಳಿ
ಛೀ ಛೀಯೆಂದರೆ ನಾಚಳು ॥ ಪಲ್ಲ ॥

ಹೊಸ್ತನುಟ್ಟುಕೊಂಡು ಹೊಸ್ತ ಹೊದ್ದುಕೊಂಡು
ಹೊಸ್ತಲಿಗೊಮ್ಮೆ ಶರಣೆಂಬಳು
ಅತ್ತತ್ತಲಿ ಹೋಗಿ ಅದನೆ ದಾಟುವ
ಕತ್ತೆ ಸೂಳೆಗಿನ್ನೆಲ್ಲಿಯ ದೈವ ? ॥ ೧ ॥

ಕುಂಭದ ಗಡಿಗೆಗೆ ಅಂಬಿಲವನೆ ಹೊಯ್ದು
ಗಂಧದ ಬಟ್ಟೆಕ್ಕಿ ಶರಣೆಂಬಳು
ಅಂಬಲಿಯನೆ ಕಾಸಿ ಅದನೆ ಕುಡಿವಳು
ಡೊಂಬಿನ ಸೂಳೆಗಿನ್ನೆಲ್ಲಿಯ ದೈವ ? ॥ ೨ ॥

ಒರಳನರ್ಚಿಸಿ ಒನಕೆಯ ಪೂಜಿಸಿ
ನರಳುತ ನರಳುತ ಪಾಡುವಳು
ಒರಳನೊದ್ದು ಕಾದು ಒನಕೆಯ ಬಿಟ್ಟುವ ?
ಮರುಳು ಸೂಳೆಗಿನ್ನೆಲ್ಲಿಯ ದೈವ ? ॥ ೩ ॥

ಹಳ್ಳದ ಹುಸುಕನು ಹಾಕಿ ಬಾಯೊಳು
ಹೋಳು ಸೆರೆಹಿಟ್ಟನಳಕೊಂಬಳು
ಸುಳ್ಳನಾಡಿ ತನ್ನ ಹೊಟ್ಟೆಯ ಹೊರವಳು
ಕಳ್ಳ ಸೂಳೆಗಿನ್ನೆಲ್ಲಿಯ ದೈವ ॥ ೪ ॥

ಹಿಂಗದೆ ಮಾಲೆಯ ಕಟ್ಟುವಲ್ಲಿಗೆ ಹೋಗಿ
ಗಂಗಳದೊಳು ನೀರನೆ ಹೊಯ್ದು
ಕಂಗಳಲ್ಲಿ ಆನೆ ಕುದುರೆಯ ಕಂಡೆನೆಂಬ
ಕೊಂಗಿ ಸೂಳೆಗಿನ್ನೆಲ್ಲಿಯ ದೈವ ? ॥ ೫ ॥

ಮುತ್ತಿಲ ಬಾರಿಸಿ ಕೊಳಲ ಹಿಂಗಿಸಿ
ಬತ್ತಲೆ ಬಾರಿಸಿಕೊಳುತ ಬರುವಳು
ಸತ್ಯಳೆಂದು ದೆವ್ವಕಾರಿತಿ ಕೇಳ್ವಳು
ಕತ್ತೆ ಸೂಳೆಗಿನ್ನೆಲ್ಲಿಯ ದೈವ ॥ ೬ ॥

ಜಂಗು ಳಿದೈವದ ಕರ್ತದ ಬೋನವ
ಲಿಂಗಕರ್ಪಿತವ ಮಾಡುವಳು
ಭಂಗಗೇಡಿಯ ಕಂಡು ನಿರ್ವಾಣಪ್ರಿಯ
ಲಿಂಗ ಹೀನ[ಳೆ]ಂದು ನಗುತಿರ್ದನು ॥ ೭ ॥

❑ ❑

## ೧೯೧

ರಾಗ : ಸೌರಾಷ್ಟ್ರ

ಅಂತರಂಗದ ಕೀಲು ಆರಿಗೆ ತಿಳಿಯದು ಚಂದಮಾಮ ಗುರು
ಶಾಂತನಲ್ಲಮಪ್ರಭುರಾಯನು ತಾ ಬಲ್ಲ ಚಂದಮಾಮ ॥ ಪಲ್ಲ ॥

ಆರು ಸೋಪಾನವ ಏರಿ ಮೀರಿ ನೋಡೆ ಚಂದಮಾಮ ಅಲ್ಲಿ
ಮೂರುವರೆಕೋಟಿ ಲಿಂಗದ ಸುತ್ತ ಮುತ್ತ ಚಂದಮಾಮ
ತೋರಿ ಸ್ಪಟಿಕ ಸುವರ್ಣ ಸಿಂಹಾಸನ ಚಂದಮಾಮ ಅಲ್ಲಿ
ಕಾರಣೀಕದ ಜ್ಯೋತಿಯಂತೆ ಕಾಣಿಸುತಿದೆ ಚಂದಮಾಮ ॥ ೧ ॥

ವಂಚನಿಲ್ಲದೆ ಬಂದು ಒಲಿದ ರಾಯನ ನೋಡು ಚಂದಮಾಮ ದೊಡ್ಡ
ಪಂಚತತ್ವ ಪರಬ್ರಹ್ಮ ಸ್ವರೂಪನು ಚಂದಮಾಮ
ಸಂಚಿತ ಪಾಪ ಸಂಹರ ಸಾರುತ ಬಂದ ಚಂದಮಾಮ
ಪಂಚನಾಶ ತನ್ನ ಕೈವಶವಾದನು ಚಂದಮಾಮ ॥ ೨ ॥

ನೆನವರ ಹೃದಯಕಮಲದೊಳಗಾನಂದ ಚಂದಮಾಮ ನಿನ್ನ
ಮನವ ಬಲಿದು ನೋಡು ಬೆಳಗಿನೊಳನುವಾಗಿ ಚಂದಮಾಮ
ಅನುಶ್ರುತ ಗುರುಬಸವೇಶನ ಪ್ರಣಮದಿ ಚಂದಮಾಮ ದೊಡ್ಡ
ದಿನಕರ ತೇಜ ನಿರ್ವಾಣಿ ಅಲ್ಲಮಪ್ರಭು ಚಂದಮಾಮ ॥ ೩ ॥

❑ ❑

೧೯೨

ಹರ ಹರ ಮಾಂ ಪಾಹಿ ಶಂಕರ
ಪರಮಕರುಣಾಸಾಗರ
ಗಿರಿಕುಮಾರಿಯ ರಮಣ ಮೃಗಧರ
ಪರಮನ ಮನ ಮಂದಿರ ॥ ಪಲ್ಲ ॥

ಧುರವಿಜಯ ದಾನವಕುಲಾಂತಕ
ಶರಣು [ಶರಣು] ಗಂಗಾಧರ ॥ ೧ ॥

ಇಂದು ರವಿ ಶಶಿವೃಂದ ರಕ್ಷಾ–
ನಂದ ಬಹು ವಿಷಕಂಧರ ॥ ೨ ॥

ಧಾರುಣಿ ನೀಲವತಿಪುರಧಾಮ ಕಾಶಿ ಚೆನ್ವೀರ
ಚಾರುತರ ಶೈವ ಸುಮತೋದ್ಧಾರ ಭೀಮ ಗುಣಾಕರ ॥ ೩ ॥

❑ ❑

೧೯೩

ರಾಗ : ಸುರುಟಿ

ನಮಃಶಿವಾಯ ಶಂಭೋ ನಮಃಶಿವಾಯ
ಓಂಕಾರರೂಪನೆ ವಸುಧೆಪಾಲಕನೆ
ಕಿಂಕರ ಜನರನು ಶಂಕರ ಸಲಹೈ ॥ ೧ ॥

ಶೀಲನೆ ಸಜ್ಜನ ಪಾಲನೆ ತ್ರಿಗುಣ ವಿ
ಶಾಲ ಕುಶಲ ಕಾಲಕಮ್ಮಾರ || ೨ ||

ಮುಕ್ತಿದಾಯಕನೆ ಮುನಿಜನವಂದ್ಯ
ಯುಕ್ತಿ ಮುಕ್ತಿ ಸದ್ಭಕ್ತ ಮನೋಹರ || ೩ ||

ಯಂತ್ರವಾಹಕವೀರೇಳುಲೋಕ ಸ
ರ್ವಾಂತರಂಗ ಸ್ವತಂತ್ರ ಸೂತ್ರಹರ || ೪ ||

ಕಾಶಿಗಧಿಕ ಚೆಲ್ವ ನೂತನಪುರಿಯ ಧೀರ
ಚೆನ್ನ ಶ್ರೀ ವೀರಭದ್ರನೆ ನಮಃಶಿವಾಯ || ೫ ||

❑ ❑

## ೧೯೪

ಸದಾಶಿವಗೆ ಶಂಕರಗೆ ಜ-
ಗದೀಶ ಮಹೇಶಗಾರತಿಯೆತ್ತಿರೆ || ಪಲ್ಲ ||

ಭಾಗೀರಥಿಯ ಹೊತ್ತಗೆ ಭಾಳನೇತ್ರಂಗೆ
ಶ್ರೀ ಗೌರಿಯ ಮನೋಹರಗೆ
ನಾಗಭೂಷಣಗೆ ನಾರಾಯಣ ಪ್ರೀಯಂಗೆ
ನಾಗಕರ್ಣಗೆಯಾರತಿಯೆತ್ತಿರೆ || ೧ ||

ಕಾಲಹರಗೆ ಕರ್ಮನಿರ್ಮಳ ರೂಪಂಗೆ
ಬಾಲಚಂದ್ರನ ಸೂಡಿದಭವಂಗೆ
ಬಾಲೆಗೊಲಿದು ನೊರೆವಾಲನು ಸವಿದಂಗೆ
ಭಾವಜಮುಖಿಯರಾರತಿಯೆತ್ತಿರೆ || ೨ ||

ಭಾನುಕೋಟಿ ದಿವ್ಯತೇಜ ಪ್ರಕಾಶಂಗೆ
ಆನಂದಮಯಗೆ ಚಿನ್ಮಯಗೆ
ಮಾನಸದೊಳು ನೆನವರ ಕಾಯ್ವ ದೇವಂಗೆ
ಮಾಯಾಂಗನೆಯರಾರತಿಯೆತ್ತಿರೆ || ೩ ||

ಕಂಗಳು ಮೂರುಳ್ಳ ಮಂಗಳ ಮಹಿಮಂಗೆ
ಲಿಂಗ ಮಹಘನ ಶಾಂತನಿಗೆ–
ನ್ನಂಗ ಭವಗಳ ಹಿಂಗಿಪ್ಪ ದೇವಗೆ
ಗಂಗೆ ಪಾರ್ವತಿಯರಾರತಿಯೆತ್ತಿರೆ ॥ ೪ ॥

ದೇವರ ದೇವಂಗೆ ದೇವಶಿಖಾಮಣಿ
ದೇವ ಸನ್ಮೋಹ ಸ್ವಾಮಿಗೆ
ದೇವ ಪಂಪಾಪತಿ ವಿರೂಪಾಕ್ಷಲಿಂಗಂಗೆ
ದೇವಗನ್ನಿಕೆಯರಾರತಿಯೆತ್ತಿರೆ ॥ ೫ ॥

❑ ❑

೧೪೫

ರಾಗ : ದೇಶಿ

ಅತಿಶಯವ ನೋಡಿ ಯತಿರಾಯ ಶಿವಯೋಗದಲಿ
ಕ್ಷಿತಿಯ ಹಂಗಿಲ್ಲದಿರುತಿರ್ಪನೆಡೆವಿಡದೆ ॥ ಪಲ್ಲ ॥

ರುದ್ರಾಕ್ಷಿಮಂಟಪದಿ ಸಿದ್ಧಾಸನವ ಬಲಿದು
ರುದ್ರಾಕ್ಷಿಗಳ ಕಂಠ ಕರ್ನ ಕರಗಳಲಿ
ಭದ್ರದಿಂದಲಿ ಧರಿಸಿ ಭವರೋಗಗಳ ತೆಜಿಸಿ
ರುದ್ರನೀತನುಯೆಂಬ ತೆರದೊಳಿರುತಿಹನು ॥ ೧ ॥

ಚಂದ್ರ ಸೂರ್ಯರ ಗತಿಯನೊಂದೆಸ್ಥಾನದಿ ನಿಲಿಸಿ
ಚಂದದಲಿ ನಾಸಿಕಾಗ್ರದ ದೃಷ್ಟಿಯಿಂದೆ
ಕಂದದಿಹ ಕರರುಹದ ಲಿಂಗವನು ನೋಡುತಲಿ
ನಿಂದನೀತನು ಪರಮಕಾಷ್ಠಿಭಾವದಲಿ ॥ ೨ ॥

ಅಂಗದಲಿ ಭಸಿತ ಸರ್ವಾಂಗದಲಿ ರುದ್ರಾಕ್ಷಿ
ಮಂಗಲಾತ್ಮಕ ಮಂತ್ರ ಜಿಹ್ವೆಯಲ್ಲಿ
ಹಿಂಗದೆ ಲಿಂಗ ಪೂಜೆಯಲಿವೊಪ್ಪಿರುವೀತ
ತುಂಗ ಶಿರದಲಿ ಗಂಗೆ ತಳೆದಾತನಹುದು ॥ ೩ ॥

[ನೆನ್ನೆ] ನಮ್ಮಯ ಗೃಹಕೆ ನಾಗಭೂಷಣ ಬಂದು
ಉನ್ನತದಿ ಶಿವಪೂಜೆಯಾರ್ಯನೆಂದೆನಿಸಿ
ಭಿನ್ನವಿಲ್ಲದೆ ಲಿಂಗಪೂಜೆಯ ನಮಗೆ ಕಲಿಸಿ
ಚನ್ನಾಗಿ ತಾನು ಇರುತಿಹನದೆ ತೆರದಿ || ೪ ||

ಎನುತ ಲಿಂಗಮ್ಮಾಜಿ ತನುಜ ಕೆಂಚಬಹದೂರ
ನನುಜೆಯರ ಸಹಿತ ತೋಳೆತ್ತಿನಿಂದು
ಘನಮಹಿಮ ಪಾರ್ವತಿಪತಿ ನೀನೆಯೆಂದೆನುತ
ವಿನಯದಿಂದೆತ್ತಿ ಕೀರ್ತಿಸುತ್ತಿಹರುಯೆಡೆವಿಡದೆ || ೫ ||

❑ ❑

೧೯೬

ಆರತಿ ಬೆಳಗಿದೆನೆ ನಾನೊಂದಾರತಿ ಬೆಳಗಿದೆನೆ
ಮೂರುಕಣ್ಣವನಿಗೆ ಮೂಜಗದೊಡೆಯಗೊಂದಾರತಿ ಬೆಳಗಿದೆನೆ || ಪಲ್ಲ ||

ನಂದಿಯನೇರಿದಗೆ ನ[ಮ್ಮ] ಮುಕುಂದ ವಿನುತ ಪದಗೆ
ಮಂದರನಿಲಯಗೆ ಮದನಸಂಹಾರಗೊಂದಾರತಿ ಬೆಳಗಿದೆನೆ || ೧ ||

ಬಾಗೀರಥಿಯ ಧರಗೆ ಭವಹರ ಯೋಗಿಮನೋರಥಗೆ
ಆಗಮಾತೀತಗೆ ಅದ್ವೈತಾಂತಗೊಂದಾರತಿ ಬೆಳಗಿದೆನೆ || ೨ ||

ಹರಿಯಜ ನಮಿತನಿಗೆ ಹರನಿಗೆ ಕರಿಚರ್ಮಾಂಬರಗೆ
ಕರಿಗೊರಳಾತಗೆ ಕಾಲಾಂತಕನಿಗೊಂದಾರತಿ ಬೆಳಗಿದೆನೆ || ೩ ||

ಬಿಸಜಜ ಸಿರವರಿದು ಪಿಡಿದು ಭೂಸಕಲವ ತಿರಿದವಗೆ
ಸಸಿಸೂರ್ಯಾಗ್ನಿ ತ್ರಿಲೋಚನಮೂರ್ತಿಗೊಂದಾರತಿ ಬೆಳಗಿದೆನೆ || ೪ ||

ಬಾಣನು ಭಜಸಿದಗೆ ಭಕ್ತರ ಬಾಗಿಲ ಕಾಯ್ದವಗೆ
ಪ್ರಾಣಲಿಂಗೇಶಗೆ ಪಾವನಮೂರ್ತಿಗೊಂದಾರತಿ ಬೆಳಗಿದೆನೆ || ೫ ||

❑ ❑

೧೯೭

ಅವಳೊಡನೆ ಮುನಿವುದಾವಂಗ ಬಾರೊ
ನಮ್ಮ ಮೋಹನಾಂಗ ಬನವಸೆ ಮಧುಲಿಂಗ ॥ ಪಲ್ಲ ॥

ಅವಳ ಚೊಲ್ಲೆಹದ ಘಾನ ಅರಡಿಗಳುದ್ಯಾ[ನ] ವನ
ಅವಳ ಭಾಳದ ಜೋಕೆ ಮೃಗಲಾಂಛನದ ರೇಖೆ
ಅವಳ ಭ್ರೂಲತೆಯದು ಅಮರೇಶ್ವರನ ಧನು
ಅವಳುಭಯ ಶ್ರವಣ ಸುಶ್ರವಣ[ದ] ? ॥ ೧ ॥

ಅವಳ ದೃಗಯುಗದಾಯ ಅಬ್ಜಪತ್ರದ ಛಾಯ
ಅವಳ ನಾಸಿಕದ ಬಗೆ ಅಳಿವಿಂಡುಗಳಿಗೆ ಪಗೆ
ಅವಳ ಸೋಭಿತ ವದನ ವಾಗ್ದೇವತೆಯ ಸದನ
ಅ[ವ]ಳ ನುಡಿಯರಗಿಳಿಗೆ ಪ್ರಹುಡಿ ॥ ೨ ॥

ನಿನ್ನವಳ ರದನದ ಪಂಕ್ತಿ ವಜ್ರಮಣಿಕಾಂತಿ

 

೧೯೮

ಕಂಡೆ ಕಂಡೆ ಬಸವರಾಜನ
ಕಂಡೆ ಕಂಡೆನಖಂಡ ಪರಶಿವ
ಕಂಡೆನೆನ್ನಯ ಕಾಮಸಿದ್ಧಿಯ
ಕಂಡೆ ಜಗದಾರಾಧ್ಯ ಶ್ರೀ ಗುರು
ಕಂಡೆ ಬಸವನ ಚರಣ ಕಮಲವ ॥ ಪಲ್ಲ ॥

ಸಕಲ ದೈವದ ಜಗದ ಕರ್ತನ
ಸಕಲವನು ಸಲಹುವ ಸಮರ್ಥನ
ಸಕಲ ಭಕ್ತರ ಮನದ ಬಯಕೆಯ
ನುತಿಸಿ ಮೆರೆವೊ ಬಸವರಾಜನ ॥ ೧ ॥

ಅಖಿಳ ಶ್ರುತಿ ವೇದಾದಿ ಆಗಮ
ನಿಕರವರಿಯದ ನಿಗಮವೇದ್ಯನ

ಮುಕ್ತಿಗೊಡೆಯನ ಮೂಲಕರ್ತನ
ಸಕಲ ಬ್ರಹ್ಮಾಂಡಾದಿಗೊಡೆಯನ ॥ ೨ ॥

ವೇದನಾಲ್ಕರೊಳೆಸೆವ ಪಾದನ
ಆದಿಮೂರುತಿ ಅಮರರೊಡೆಯನ
ನಾದಬಿಂದುಕಳೆ ವಿಶೇಷದಿ ವಿ
ನೋದನ ನರ ಸುರ ನಮಿತ ಪಾದನ ॥ ೩ ॥

ಧರ್ಮರೂಪನ ದಾನಶೀಲನ
ಕರ್ಮರಹಿತನ ಕಾಂತಿಯುಳ್ಳನ
ನಿರ್ಮಳಾತ್ಮಕನಿಳೆಸಮಸ್ತ[ವ]
ನಿರ್ಮಿಸುತ ಸಲಹಿದ ಸಮರ್ಥನ ॥ ೪ ॥

ಎನ್ನಯ ಗುರುಬಸವರಾಜನ
ಚೆನ್ನಸಂಗನನೊರದಿ ಜನಿಸಿದ
ನನ್ನಿಯಿಂದಲಿ ಎನ್ನ ಪೊರೆವನ
ಕಣ್ಣು ಮೂರುಳ್ಳ ಬಸವರಾಜನ ॥ ೫ ॥

೧೯೯

ಮಂಗಳಾರತಿ ಪದ
ಜಯಮಂಗಳಂ ನಿತ್ಯ ಶುಭಮಂಗಳಂ
ಜಯ ಬಸವರಾಜದೇವರ ಪಾದಕೆ
ಜಯಮಂಗಳಂ ನಿತ್ಯ ಶುಭಮಂಗಳಂ ॥ ಪಲ್ಲ ॥

ಮಾದಲಾಂಬಿಕೆಗೆ ತಾ ಮಗನಾಗಿ ಮರ್ತ್ಯದೊಳು
ವಾದವನು ಗೆಲಿದು ವಾದಿಗಳೆಲ್ಲರ
ಸಾಧಿಸಿ ಕಲ್ಯಾಣದೊಳು ಲಿಪಿಯು ಬಿದ್ದಿರಲು
ಓದಿ ಬಲ್ಲಿದನಾದ ಬಸವೇಶಗೆ
ಜಯಮಂಗಳಂ.......... ॥ ೧ ॥

ಕಲ್ಯಾಣದೊಳಗಣ ಕರಿಗೊರಳ ಭಕ್ತರಿಗೆ
ಎಲ್ಲ ಭಕ್ತರಿಗೆ ತಾ ಕರ್ತನಾಗಿ

ಬಲ್ಲಿದ ಬಿಜ್ಜಳನ ಬಲವೆಲ್ಲ ಕೆಡೆಮೆಟ್ಟಿ
ಅಲ್ಲೆ ಪವಾಡವ ಮೆರದ ಬಸವೇಶಗೆ
ಜಯಮಂಗಳಂ......... ॥ ೨ ॥

ಲಕ್ಷದಮೇಲೆ ತೊಂಬತ್ತಾರುಸಾವಿರ
ಮೋಕ್ಷಜಂಗಮಕೆ ಭಿಕ್ಷವನೂಡುತ
ಸಾಕ್ಷಾತು ಸಂಗಮೇಶ್ವರನೊಳೈಕ್ಯವಾದ
ಆ ಕ್ಷಣದಿ ಬಯಲಾದ ಬಸವೇಶಗೆ
ಜಯಮಂಗಳಂ.......... ॥ ೩ ॥

❑ ❑

೨೦೦

ಆವಾಗ ಶಿವಮಂತ್ರ ನೆಲೆಯಾಗಿ ನಮ್ಮ ಗುರು
ದೇವ ಹೇಳಿದ್ದು ಗುರಿಯಾಗಿ ॥ ಪಲ್ಲ ॥

ಆಸನಬಲಿದೂರ್ಧ್ವಮುಖನಾಗಿ ತುದಿ
ನಾಸಿಕದಲಿ ಪೊಕ್ಕು ಲಯವಾಗಿ
ಸೂಸುವ ಮನವು ಒಬ್ಬುಳಿಯಾಗಿ ಶಿವ
ಗೋ[ಸ]ದೊಲು ಪೊಕ್ಕು ಲಯವಾಗಿ ॥ ೧ ॥

ಚಂದ್ರ ಸೂರ್ಯರು ಒಂದು ಮುಖವಾಗಿ ನಾ-
ಗೇಂದ್ರನು ಎಡಯಕೆ ಮೇಲಾಗಿ
ಸಾಂದ್ರ ಮಾಣಿಕ ಮುತ್ತು ಬೆಲೆಯಾಗಿ ದೇ-
ವೇಂದ್ರನ ಸಭೆಯೆಲ್ಲ ಬೆಳಗಾಗಿ ॥ ೨ ॥

ಬ್ರಹ್ಮ ವಿಷ್ಣುಗಳೊಂದು ಮುಖವಾಗಿ ಪರ-
ಬ್ರಹ್ಮದೊಳಗೆ ಪೊಕ್ಕು ಲಯವಾಗಿ
ನಿರ್ಮಲ ನಿಜಸುಖ ಘನವಾಗಿ ಪರ-
ಬ್ರಹ್ಮ ಬೆರಟೂರಪತಿಯಾಗಿ ॥ ೩ ॥

೨೦೧

ನಿವ್ವಾಳಿ[ಯೆ] ಆರತಿ ನಿವ್ವಾಳಿಯೆ
ಶಿವಲಿಂಗ ಮಹೇಶಗೆ ನಿವ್ವಾಳಿಯೆ ॥ ಪಲ್ಲ ॥

ಕಾಲಾರಿ ಕರುಣಗೆ ಕಾಮವಿದೂರಗೆ
ಬಾಲಾರ್ಕಮೌಳಿಗೆ ನಿವ್ವಾಳಿಯೆ
ಸಾಲಮಗನಪಿತ ಸೂಲಾಂತಕದೇವಗೆ
ನೀಲಕಂಠನಿಗೆ ನಿವ್ವಾಳಿಯೆ . ॥ ೧ ॥

ಹರಿನುತ ಪ್ರಿಯಗೆ ಪುರಸಂಹಾರಗೆ
ದುರಿತವಿದೂರಗೆ ನಿವ್ವಾಳಿಯೆ
ಸುರಮುನಿತಾತಗೆ ಮರಣವಿರಹಿತನಿಗೆ
ಕರುಣಾಸಾಗರನಿಗೆ ನಿವ್ವಾಳಿಯೆ ॥ ೨ ॥

ಷಟ್ಸ್ಥಲದ ಶರಣ ಸಿದ್ಧಲಿಂಗೇಶಗೆ
ಕಟಕ ಕುಂಡಲನಿಗೆ ನಿವ್ವಾಳಿಯೆ
ದಿಟ್ಟಿಗೆ ನಿಲುಕದ ನಿಟಿಲಾಕ್ಷಭವನಿಗೆ
ಶ್ರೇಷ್ಠ ಬೆರಟೂರಪತಿ ಗುರುವರ್ಯಗೆ
ನಿವ್ವಾಳಿಯೆ.......... ॥ ೩ ॥

❑ ❑

೨೦೨

ಶಿವ ಶಿವಯೆನ್ನಿರೆ ಶಿವಪದ ಕಾಣದೆ
ಭವಸಾಗರ ದಾಟುವದ್ಯಾಂಗ ॥ ೧ ॥

ದೇವರ ದೇವನ ಸ್ಮರಣೆಯ ಮಾಡದೆ
ಕಾಮನಬಲೆ ಹರಿವುದ್ಯಾಂಗ ? ॥ ೨ ॥

ಸಾವಿಗೆ ಹೆದರುವ ಗಾವದಿಯ ಮನುಜರು
ಹಾವಿನ ಹೆಡೆ ಹಿಡಿ[ಯು]ವದ್ಯಾಂಗ ? ॥ ೩ ॥

ಸ್ಮರಣೆಯ ಮಾಡದೆ ಶ್ರೀಗುರು ಚರಣವ
ಭಾವಿಸದೆ ದೊರಕುವದ್ಯಂಗ ? ॥ ೪ ॥

ಪಾವನ ಮಾಡಿದ ಬೆರಟೂರಪತಿಗೆ
ಶಿವಶಿವಯೆನದೆ ಗತಿಹ್ಯಾಂಗ ? ॥ ೫ ॥

೨೦೩

ಏನೇನು ಅರಿಯನಲ್ಲ ಗಂಡ ಈ
ಮಾನಿನಿಯ ಮರದು ಹೋದಮೇಲೆ ಮಾಡಿದೆಲ್ಲ ದಂಡ ॥ ಪಲ್ಲ ॥

ಮೂರಾರು ಕದದ ಮನೆಯ ಕಟ್ಟಿ ಮನೆಯು
ಸೋರಿ ಸೋರಿ ಹೋಗುತಾಂತ ಮಾಡಲಿಲ್ಲ ಗಟ್ಟಿ
ಮರದ ಕಂಬಕ ಪಾಟಿ ಕಟ್ಟಿ ಮನಿಯ ಮುಚ್ಚಿ
ನೀರಿಗೆ ಹೋದೇನೆಂದರೆ ದೊರಕಲಿಲ್ಲ ತಟ್ಟಿ ॥ ೧ ॥

ಎತ್ತ ನೋಡಿದರೆ ಬತ್ತದ ರಾಶಿ ನಾ
ಒತ್ತಲಿಕ್ಕೆ ಕೇರಿದೆ ನಾ ಒಮ್ಮನಕ್ಕೆ ತಳಿಸಿ
ಮತ್ತೆ ಪಾಯಿಸ ಮಾಡಿ ಬಡಸಿ
ತುತ್ತು ಕೂಸಿಗೆ ಉಳಿಯದಾಂಗ ಉಂಡು ॥ ೨ ॥

ಬಾಳಕಾಲಕ್ಕೆ ಮೂಗುತಿಟ್ಟ
ಅಂದಗಿ ಇಂದಿಗಿ ಮುಟ್ಟಲಿಲ್ಲ ದಿಟ್ಟ
ಸಾಲಿ ಸೆಳದು ಮುದ್ದ ಕೊಟ್ಟ ಎನ್ನ ಮನಕ
ಬೆರಟೂರೇಶ ಮುಟ್ಟಿ ಭಾಷೆ ಕೊಟ್ಟ ॥ ೩ ॥

೨೦೪

ಸದಾಶಿವನಪೇಟೆಯೆಂಬುದು ಭುವನಕೆ ಛೋದ್ಯ ಕಾಣುತದೆ
ಚದುರ ಜಾಣರು ತಿಳಿದು ನೋಡಲು ಭೇದವು ಬಾರದೆ ॥ ಪಲ್ಲ ॥

ಮಾಯಾಸಂಸಾರವೆಂಬೊ ಕಂದಕ ಸುತ್ತಿ ಬಳಸದೆ
ದೇಸಕೆ ತಾಮಸ ತಬ್ಬಿದ ತೈರದಿ ಕಳ್ಳಿ ಮುತ್ತಿ ಅದೆ
ಪ್ರೀಯರ ಸತಿ ಸುತ ಬಾಂಧವ ನಂಟಿಗೆ ಜಂಪು ಕಾಣುತದೆ
ಬಯಕೆ ತೀರದ ಮಾನವಗೆಲ್ಲ ಬಯಲಿಗೆ ಬಯಲದೆ ॥ ೧ ॥

ಐವತ್ತೆಸಳಿನ ಕಮಲದ ನಡುವೆ ಸದುರುಚಿವಾದ್ಯೆಡೆ
ಚವುಬೀದಿ ದರವಾಜ ಚಕ್ರ ಪನ್ನೆರಡು ಕಾಣುತವೆ
ನವನಾಳದ ಕೆರೆ ಪರಿಪರಿ ಪಲಕುತವೆ
ದೇವ ಸಂಗನ ಶಿಖರದ ಮೇಲಣ ಜೋತಿ ಕಾಣುತದೆ ॥ ೨ ॥

ಇಂದ್ರದಿಕ್ಕಿನ ನಂದಿಯಕಟ್ಟೆಯಲಿ ಜಾತ್ರೆಯಾಗುತದೆ
ಮೇಲೆ ಮೊಗ್ಗಲಿಗೆ ಸದಾನಂದ ನಕ್ಷತ್ರವೊಪ್ಪುತದೆ
ಸಂದು ಸಂಧಿಗೆ ಸಾಲುಮಾಳಿಗೆ ಮೇಲೆ ಕಾಣುತವೆ
ಚಂದ್ರ ಸೂರ್ಯರು ಒಂದುಗೂಡಿ ಪುರಹೊಕ್ಕು ಹೊರಡುತರೆ ॥ ೩ ॥

ಸೆಟ್ಟಿ ಸೋದರ ಸಮುಸ್ತದೈವ ವಾಸವಿಗಿದೆ ಹರಹಿ
ವಿಷ್ಟಿ ಹಿಕ್ಕಿನ ಬಂಧ ಕೇಣವು ಇಟ್ಟು ಮಾರುತರೆ
ಕೊಟ್ಟು ನಡಸುವ ವಾಕ್ಯ ದಂಡಿಗೆ ಮುಟ್ಟಿ ತೂಗುತರೆ
ಕೆಟ್ಟಕಾಲಕೆ ಮಹಲಿಂಗನ ನಿಷ್ಠೆಯಲ್ಲಿಹರೆ ॥ ೪ ॥

ರಾಜ್ಯವಾಳುವ ಶಂಕರೇಶನ ಕವುಲು ಹೇಳುತರೆ
ಬಾಜಬಾಜಿಗೆ ಸಾಂತ ಸ್ಮರಣೆ ಮಾಡಿ ಕೊಡುತರೆ
ತೇಜ ಮನ್ನಣೆ ಕೊಟ್ಟ ಕೊಂಡು ತಾವಾಜಿಯಲ್ಲಿಹರೆ
ಸಾಜಭಾವದಿ ಬೆರಟೂರೇಶನ ಸ್ಮರಣೆ ಮಾಡುತಹರೆ ॥ ೫ ॥

## ೨೦೫

ಸಾಧಿಸಿದಡೆ ಸಾಧ್ಯವಾಗದು ಐ ಶಿವ ಶಿವ
ಸಾಧಿಸಿದಡೆ ಸಾಧ್ಯವಾಗದು ಹೃದಯನಾಳಾ–
ರಿಂದ್ರಿದಲ್ಲಿ ಹೊಳೆವುತಿರ್ಪ ಲಿಂಗವು ॥ ಪಲ್ಲ ॥

ಡೊಂಬ ಗಣೆಯಹತ್ತಿ ಕೊಂಡನು ಅಂಬರದ ಮೇಲ
ಕಂಬ ಸೂತ್ರ ಪಿಡಿದು ಕೊಂಡನು ಐ ಶಿವ ಶಿವ

ಬಂಬು ಮುರಿದು ಡೊಂಬ ಬಿದ್ದನು
ಕುಂಭಿನಿಯ ಮೇಲೆ ಡೊಂಬ ಸತ್ತು ನಗುತಲಿರ್ದನು
ಬ್ರಹ್ಮ ವಿಷ್ಣು ರುದ್ರಾದಿಗಳು ಹಾಸ್ಯವಾಡುತಿರ್ದಾರು ॥ ೧ ॥

ಮುಳ್ಳಮೊನಿಯ ಕೊನಿಯ ಮಧ್ಯದಿ ಮೂರು ಪಟ್ಟಣಕ್ಕೆ
ಕಳ್ಳ ಕದಿಯ ಹೋಗುತಿರ್ದನೆ ಏ ಶಿವ ಶಿವ
ಕಳ್ಳ ಮಾಣಿಕವ ಕದ್ದನು
ಅಲ್ಲೊಬ್ಬ ಮುದಿವಿ ಕಳ್ಳನೊದ್ದು ಸ್ಯಳದುಕೊಂಡಳು
ಅಸುರಾಸುರರಿಗೆಲ್ಲ ಹುಲ್ಲುಮಾಜೀವುತಿದ್ದಳು ॥ ೨ ॥

ಮಗನ ತಾಂ ಮದಿವಿಯಾದಳು ಆ ಮಗುವಿಗೆ ಹುಟ್ಟಿ
ಮಗನೆ ಗಂಡನೆಂದು ಕರೆದಳು ಏ ಶಿವ ಶಿವ
ಮಗುವದ್ಯೆರಡು ಕುಚವ ಪಿಡಿದನು
ಆಗಲಲಾರದದೆ ಸೊಗಸು ರತಿಯ ಕೊಡುತಿರ್ದನು
ಬೇಗನೆ ಬೆರಟೂರೇಶನೊಳು ಬಯಲು ಬೆರವುತಿರ್ದನು ॥ ೩ ॥

❑ ❑

೨೦೩

ಎಂತು ಮರೆಯಲಿ ಬಹುದೊ ಶಿವನೆ ಪುರುಷ–
ರಂತರಂಗವನರಿತು ಕೂಡಿ ಕೊಂಡಾಡುವಳ ಚೆಲ್ವ
ಕಂತುಹರಗೆಣೆಯಾದ ಕಟ್ಟಾಣಿಮಣಿಯ ॥ ಪಲ್ಲ ॥

ಅಳಿಯಂಚೆ ನಡೆಯವಳ ಅರಗಿಣಿಯ ನುಡಿಯವಳ
ಕಳಸ [ಚೊ]ಚಕದಿಂದಿರಿದು ಕಳವಳಿಸಿ ಕೊಡು–
ವಳ ಕನಸಿನೊಳು ತೊಳಲಿ ಬಳಲುವಳ ಒಂದಿ
ನಸ ಬಿಟ್ಟಿರಲಾರೆ ಹಿತದೋರುವಳ ನಡೆವವಳ ॥ ೧ ॥

ಮುಡಿವಿಡಿದು ಮುಂಗುರುಳು ಪಿಡಿವವಳ
ಕಣ್ಣರೆವೆಗಳಮುಚ್ಚಿ ಕಾಮಾತುರಕೆ[ಳಸು]ವಳ
ಸಂಗಸುಖವನೆ ಬಯಸಿ ಸವಿಯಾಂತು ಕೂಡುವವಳ
ಹಿಂಗಿ ಜೀವಿಸಲಾರೆ ಹಿತದೋರುವವಳ ॥ ೨ ॥

ಎದೆವಿಡಿದು ಕೂಡುವಳ ಎಲ್ಲ ಕಲೆ ಬಲ್ಲವಳ
ಸಡಗರದ ತಕ್ಕೆಯೊಳು ಸಡ[ಲ]ಲೀಯದೆ ಬಿಡದವಳ
ಬಿಡದೆ ಎದೆಯನೆ ಹಿಡಿದು ನಲ್ಲ ಹ ಹಯೆಂದು
ಅಡಿಗಡಿಗೆ ದೈನ್ಯಗರೆವುವಳ ಎ-
ನ್ನೊಡೆಯ ಬೆಂಗಳೂರು ದೊಡ್ಡ ಬ[ಸವನ]
ಎಂತು ಮರೆಯಲಿ ಬಹುದೊ ಶಿವನೆ ॥ ೩ ॥



೨೦೭

ಊರ ಒಳಗಣ ಹೊಲೆಯ[ನಾ]ರೆಂದೊಡಾಂ ಪೇಳ್ವೆ
ಭೂರಿಯೊಳಗಿರ್ಪನ ಜನರೊಲಿದು ಕೇಳಿ ॥ ಪಲ್ಲ ॥

ಶಿವನಿಲ್ಲ ಸರ್ವರೊಳಗೆಂಬುವಧಮನು ಹೊಲೆಯ
ಶಿವನೆ ಶಾಸನನೆಂದು ತಿಳಿಸದವ ಹೊಲೆಯ
ಶಿವಶರಣರೊಚನಕ್ಕು ಸರೆಯ ಸೇರಿಪನೊಲೆಯ
ಶಿವಮತದೊಳುದಿಸಿ ಶಿವನರಿಯದವ ಹೊಲೆಯ ॥ ೧ ॥

ತನ್ನಮತ ಜರಿದು ಪರರನ್ನ ಪೊಗಳ[ುವವ ಹೊ]ಲೆಯ
ತನ್ನ ತಾ ಕೊಂಡಾಡುತಿಹನೊಬ್ಬ ಹೊಲೆಯ
ಅನ್ಯಶಾಸ್ತ್ರಕ್ಕೊಲಿದು ಅವಧರಿಪನವ ಹೊಲೆಯ
ಮಾನ್ಯರಿಗೆ ನಿಂದಿಸುವನವ ಶುದ್ಧಹೊಲೆಯ ॥ ೨ ॥

ಅಕ್ಕರಾಡಂಬರ ವಿತರ್ಕ ಮಾಡುವನೊಲೆಯ
ಚಕ್ಕಮುಲಿಕಲಿ ಛೇ[ಡಿ]ಸುವನೊರ್ವ ಹೊಲೆಯ
ಅಕ್ಕಟಕಟ ಮುರಡಿ ಬೊಕ್ಕಸಿದ್ಧನ ಪದವಿ
ಕಕ್ಕುಲತಿಯಿಲ್ಲದವನವ ಪೂ[ಣ]ರ್ ಹೊಲೆಯ ॥ ೩ ॥



೨೦೮

ಧರಿಸಿದೆ ನಾಂ ಶಿವಬಿರಿದಾ ನಮ್ಮ
ಶರಣಗಣಂಗಳೀರೇಳ್ಜಗದ್ಗುರುವೆಂದು ॥ ಪಲ್ಲ ॥

ಗುರುವಿತ್ತಲಿಂಗ ತನ್ನುರದೊಳಗಿರುತಿರೆ ಮಾರಿ
ದುರಗಿ ಮಾಯಿರಾಣಿಗಳ ಬೀರ ಜಟ್ಟಿಗ ಜಿನ್ನ
ಭೈರವ ಮೈಲಾರಗೆರಗಿ ಪೂಜಿಸುವಂಥ
ಪರವಾದಿಗಳಮೇಲೆ ಧರಿಸಿದೆ ॥ ೧ ॥

ಮುನ್ನ ಶ್ರೀ ಗುರುವಿತ್ತ ಲಿಂಗವುಯಿರುತಿರೆ
ಚಿನ್ನದ ಚರ್ಮದ ಕೆರಹುಗಳ
ತನ್ನಿಚ್ಛೆಯಿಂದಲಿ ಕೊರಳಿಗೆ ಕಟ್ಟಿರುವ
ತೊನ್ನು ಮಾದಿಗ ಸೂಳಿಗ್ಯೇಕೆ ಲಿಂಗವು ಎಂದು ಧರಿಸಿದೆ ॥ ೨ ॥

ಗುರುರಾಯ ಕರುಣದಿ ಕರದಿತ್ತ ಲಿಂಗವು
ಪರಕೆ ಪರವೆಂದು ತಿಳಿ[ಯ]ದೆ ತಾನು
ಕರಿಜಿಟ್ಟಿ ಹಿರಿಯಣ್ಣಿನುರಿಮಾರಿ ಮಾತಂಗಿ
ಗೆರಗಿ ಜೋಗೋಯೆಂಬ ಪರವಾದಿಗಳಮ್ಯಾಲೆ ॥ ೩ ॥

ದೇವರ ದೇವನು ಕರದೊಳಗಿರಲು [ಊ]ರು
ದೇವಿಗೆ ಕುರಿ ಕೋಳಿ ಕೊರಳು ಕೊಯ್ದು
ತಾವೆಲ್ಲ ಹೊಲೆಜಾತಿ ಕೊಡಿ ಪೂಜಿಸಿ
ದೇವರೆಂದು ನಮಿಸುವಂಥ ಶಿವದ್ರೋಹಿಗಳಮ್ಯಾಲೆ ॥ ೪ ॥

ಸರಸಿಜಶಿರಕರಧರ ಮದ್ದಾನೀಶವ
ಚರಣಸರೋಜವ ಪೂಜಿಸುವ
ಪರಶಿವಭಕ್ತರೆ ಧರೆಯೊಳು ಘನವೆಂದು
ಶರಣಬಂದನು ಈಗ ಪರಮತಗಳಮ್ಯಾಲೆ
ಧರಿಸಿದೆ ನಾಂ ಶಿವಬಿರಿದಾ ॥ ೫ ॥

❑ ❑

## ೨೧೯

ರಾಗ : ನೀಲಾಂಬರಿ

ಗುರುವಿನ ಚರಣವಗಲಿ ಇರಲಾರನೆ ತರುಣೆ ನೀ
ಕರದು ತಾರೆ ಮೂರೆರಡುಕೋಟಿಯ ಮಂತ್ರಗಳ ಪೆತ್ತನ
ವರ ಪ್ರಣಮವ ಎನ್ನ ಕರ್ನದೊಳರುಹಿದ[ನ] ॥ ಪಲ್ಲ ॥

ಮೂರೊಂದು ಮನೆಯೊಳಗೆ ಮಿರುಗುತಲಿಹ
ಹೀರದ ಪೀಠಾಗ್ರದಲ್ಲಿ
ತೋರುವ ಪರಾಶಕ್ತಿ ಕ್ಷೀರಸಾರ ಸವಿದು
ವೀರಕ್ತ ರೂಪಿಲಿ ಧರೆಮೂರು ಪೊರೆವಂಥ ॥ ೧ ॥

ಮಂಡಲತ್ರಯದ ನಡುವೆ ರಾಜಿಸುವಂಥ–
ಖಂಡ ಚಿದ್ಘನಲಿಂಗದಿ
ತಂಡ ತಂಡದ ಪ್ರಮಥರ ಸಭೆ ಮಧ್ಯದಿ
ಪುಂಡರೀಕಾಕ್ಷಿಯ ಕಂಡು ಸಮರಸವಾದ ॥ ೨ ॥

ಕರದಿಷ್ಟಲಿಂಗದಲ್ಲಿ ಪ್ರಣಮಗಳಿಂದ–
ಲಿರುವ ಸಾಸಿರದಳದಿ
ಭರಿತವಾಗಿಹ ಶಂಭು ಗುರು ಮದ್ದಾನೀಶ್ವರ
ಕರುಣದಿಂದಲಿ ಎನ್ನ ಕರೆದು ಧಾರ್ಯೆರದಂಥ ? ॥ ೩ ॥

❑ ❑

೨೧೦

ಮಲಹರನ ಭಕ್ತರನು ಕುಲವ ಕೇಳಲು ಮುನ್ನ
ಕುಲಕ್ಕ ನಿನಗೆ ಪಂಥವೇತಕೊ ಕೇಳೆಲೊ ವಾದಿ
ಮಲಹರನ ಭಕ್ತರನಾಕುಲವವೆತ್ತ ಕೇಳೆಲೊ ವಾದಿ ॥ ಪಲ್ಲ ॥

ಮಾದಿಗ ನಿನ್ನವಕುಲದವೇಕ ಶಿವಕುಲದ
ಆದಿಯೆತ್ತ ಅಭಿಮಾನವೆತ್ತ ಕೇಳೆಲೊ ವಾದಿ ॥ ೧ ॥

ಮಾದಿಗನಂಗದೊಳು ಪಾದರಕ್ಷೆ ದೃಷ್ಟಮಾಡಿ
ಭೇದ ತಿಳಿದು ಭಕ್ತ ಶರಣರ ಸೇವಕನೆಂಬುವರು ॥ ೨ ॥

ಬಿರಿದಾಂಕ ಕಲಕೇತ ಶರಣೆನ್ನೊಡೆಯನು
ಮರಿಬಸವಲಿಂಗ ಶರಣರ ಸೇವಕ ತಾನೆಂಬುವರೊ ॥ ೩ ॥

❑ ❑

## ೨೧೧

ಎಂತು ಪೊಗಳ್ವಡಾದೀತಮಮ ಏಕಮುಖದ ಜನರು ಸರ್ವ
ಭ್ರಾಂತಿರಹಿತ ಭಜಕಪ್ರಿಯ ಮರಿಶಾಂತದೇವನಿರವನು ॥ ಪಲ್ಲ ॥

ನಮಿತಜನ ಕುಶೇಶಯಾರ್ಕ ಅಮಿತ ಕರುಣ ವೀರ ಧೀರ
ದಮಿತ ಕರಣ ಶರಣ ಭರಣ ಮರಣಕುಜಕುಠಾರನ
ಯಮ ಸಮಾಧಿಯೋಗ ಯುಕ್ತ ಯಮಿಗಳೊಳಗೆ ಘನ ವಿರಕ್ತ
ಯಮನ ತಾತ ಕಾಂತ ಸ್ವಾಂತ ಚಿಂತಿತಾರ್ಥವೀವನ ॥ ೧ ॥

ಕೀರ್ತಿವನಿತೆಯಾತ್ಮ ಸುಜನರರ್ಥಿ ಭುಜಗತಾರ್ಕ್ಷ್ಯ ಕುಜನ
ಜೂರ್ತಿ ಕ್ಷೀರ ಧೀರ ಧೀಜನಂಗಳಿಂದೆ ವಂದ್ಯನ
ಅರ್ತಿಯಿಂದೆ ಅಮಳ ಅಜಡನಾದ ಕರದ ಇಷ್ಟಲಿಂಗ
ಮೂರ್ತಿಯನ್ನು ಭಜಿಸುವಂಥ ಮುಕ್ತಿಯೋಪನ ॥ ೨ ॥

ಮಾನಸಾದಿ ಕರಣ ಚೈತ್ರ ಮಲಲತಾ ಲವಿತ್ರ ಚಿತ್ರ
ನಾನಾ ದೋಷಕಾನನಾಗ್ನಿ ಭೂನುತಯಗಜೆಯರಸನ
ಧ್ಯಾನದಲ್ಲಿ ಲೀನ ಪರ ಸು ಜ್ಞಾನಭೂಜ ಧರಣಿ ತರಣಿ
ಜಾನತಾಂಘ್ರಿ ಪದ್ಮಯುಗ್ಮ ಸಾನುರಾಗ ಚಿತ್ರನ ॥ ೩ ॥

❑ ❑

## ೨೧೨

ರಾಗ : ಮುಖಾರಿ

ಮೋಹಿಗಳು ತಾವೆ ಬಲ್ಲರು ವಿಯೋಗದ ವ್ಯಥೆಯ ನಿ–
ರ್ಮೋಹಿಗಳು ಆ ಹದನನಱಿಯರಯ್ಯೋ ॥ ಪಲ್ಲ ॥

ಸುರೆಯನೀಂಟದ ಸೊಕ್ಕು ಸುರಗಿ ಇಱಿಯದ ಘಾಯ
ಬಱಿದೆ ರಕ್ತದೋಱದಿಪ್ಪ ಕಿಚ್ಚು
ಉರಗನಗಿಯದ ನಂಜು ಉಸುರಳಿಯದಿಹ ಮರಣ
ಪರರಱಿಯದಿಹದೊಂದು ರೋಗ ರಮಣಿ ॥ ೧ ॥

ತೊಡರದಿಹ ಸಂಕೋಲೆ ತೋರ್ಪಡಿಲ್ಲದ ಪುಣ್ಣು
ಒಡವೆ ಪೋಗದೆ ಪೋದ ನೋವಿನಿಂದ
ಬಿಡದೆ ಸೀಳದೆ ಭದ್ರಪತನವಿದು ಬಲು ಭೂತ
ಹೊಡೆಯದಿಹುದೊಂದು ರೋಗ ರಮಣಿ ॥ ೨ ॥

ಹೊಲ್ಲತನಗಿದು ಹೊಲ್ಲಯೆಲ್ಲ ದುಃಖ ದುಃಖ
ತಲ್ಲಣಗೊಂಬ ತಲ್ಲಣದಂತಲ್ಲ
ಎಲ್ಲ ನೋವಿನ ತೆಱದಂತಲ್ಲ ಮಸ್ತಕವಾಸ
ಮಲ್ಲೇಶನಗಲ್ದ ವಿರಹದ ವ್ಯಥೆಯನು ॥ ೩ ॥

❑ ❑

೨೧೩

ಬಾರೆ ಸುಗುಣಮಣಿಹಾರೆ ಕಾಂತನ ಕರ
ತಾರೆ ಸೈರಿಸಲಾರೆ
ನೀರಜಮುಖಿ ವೈಯ್ಯಾರೆ ನೀ ಸುಗುಣನ
ತೋರಿಸೆ ಮುತ್ತಿನಹಾರವನೀವೆನು
ಬಾರೆ ಸುಗುಣಮಣಿ ॥ ಪಲ್ಲ ॥

ಯಾತಕೆನ್ನೊಳು ಪಂಥ ನೀತವೆ ಅವನಿಗೆ
ಜಾತಿನಾಯಕಿ ಮುನಿಸ್ಯಾತಕೆನ್ನೊಳು ಪೇಳೆ
ಮಾತುಮಾತಿಗೆ ಮುನಿಸ್ಯಾತಕೆ ನೀತವೆ ಅವನಿಗೆ
ಸೋತೆನು ಸುಗುಣೆ ॥ ೧ ॥

ತರುಣೀನಾಯಕಿ ಪ್ರಾಣದೆರೆಯ ಮನಿಗೆ ಬಾರದಿರಲು
ಸೈರಿಸಲಾರೆ ಗರುವರರಸಯೆನ್ನ ಸ್ಮರನ ಬಾಧೆಗಿತ್ತು
ಗುರಿಯಾಗಿ ಪೊಗಿಸೆ ಬರದಿಂದ ಪೋಗಿ ಬಾರೆ ॥ ೨ ॥

ಧರೆಯೊಳು ಶ್ರೀ ಮಂತ್ರರಾಜಪುರದ ಸಿದ್ಧೇಶಯೆನ್ನ
ಕರದು ನೆರದು ಲಲ್ಲೆಗ[ರೆಯದಿ]ರುವದಿದು
ತರವೇನೆ ಅವನಿಗೆ ಸರಸಿಜಗಂಧಿ ॥ ೩ ॥

೨೧೪

ಸಖಿ ಮಾರನಂಬಿಗೆ ಗುರಿಯಾದೆನೆ
ಮುದ್ದು ಕೋಮಲಾಂಗನ ಕರದುತಾರೆನೆ
ಸಖಿ ಮಾರನಂಬಿಗೆ ಗುರಿಯಾದೆನೆ ॥ ಪಲ್ಲ ॥

ಸರಸಿಜವದನೆ ಮುಂದರಿಯದಂದಿಗೆಯವನ
ಸರಸಕ್ಕೆ ನಾ ಮರುಳಾದೆನೆ
ಸಖಿ ..... ॥ ೧ ॥

ಚೆಲುವನ ಧ್ಯಾನಿಸಿ ಸಿಲುಕಿತೆನ್ನಯ ಚಿತ್ತ
ಲಲನೆ ಇನ್ನೇನ ನಾ ಮಾಡಲೆ
ಸಖಿ ...... ॥ ೨ ॥

ವರದ ಶ್ರೀಮಂತ್ರರಾಜಪುರದ ಸಿದ್ಧೇಶನೆನ್ನ
ನೆರದು ವಂಚಿಸಿ ಹೋದನೆ
ಸಖಿ ...... ॥ ೩ ॥

೨೧೫

ರಾಗ : ಭೈರವಿ
ಕಾಂತನ ಕಾಣದೆ ನಾ ತಾಳಲಾರೆನೆ
ಭ್ರಾಂತಳಾದೆನು ಇಂದು ಸುಂದರಾಂಗ ಬಾರನೆ ॥ ಪಲ್ಲ ॥

ಇಂದು ಚಂದ್ರಿಕೆಗೆ ಝುಮ್ಮೆಂದಿತು ಕಾಯ
ಮಂದಮಾರುತ ಬಂದು ನೊಂದಾಳೆಂದು ಬಾರನೆ ॥ ೧ ॥

ಅಂಗಜಾತನ ತಾತ ಅಂಗದಲ್ಲಿ ಅತಿಶಯ
ಹ್ಯಾಂಗ ತಾಳಲಮ್ಮ ಮಂಗಲಾಂಗ ಮನಿಗೆ ಬಾರನೆ ॥ ೨ ॥

ಪರಿಮಳದ್ರವ್ಯದಿ ಮರುಗುವೆನೆನ್ನಯ್ಯ
ಅರಸು ಮುಚಖಂಡಿ ವೀರನ ಕರುಣಸಾಗರ ಬಾರನೆ ॥ ೩ ॥

## ೨೧೬

ಬೇಡುವೆದೇನು ನಾ ನಿಮ್ಮ ಶಿವನೆ ಓ ಸಾಂಬ ಶಿವನೆ
ಬೇಡುವದೇನು ನಾ ನಿಮ್ಮ ಶಿವನೆ
ಓಡಿನೊಳ್ತಿರಿದುಂಡು ಕಾಡಿನೊಳ್ಮನೆಮಾಡಿದ ॥ ಪಲ್ಲ ॥

ಅನ್ನವಿಲ್ಲದೆ ವಿಷವನ್ನು ಪಾನ ಮಾಡಿದಿ
ಚನ್ನ ಸೂಳೆರೆಂಜಲವ ಮುನ್ನೀಕ್ಷಿ..ದಲೆ ಸವಿದನೆ ॥ ೧ ॥

ವಸನವಿಲ್ಲದೆ ಗಜದ ಹಸಿಯಚರ್ಮವ ಪೊದ್ದಿ
ಯೆಸವ ಗಂಧೇಭ ಹೆಣದ ಬಸಿಯ ? ತಾಳ್ದನೆ ॥ ೨ ॥

ಹತ್ತಲಿಲ್ಲದೆ ಮುದಿಯೆತ್ತನೇರಿ ಚರಿಸಿದಿ
ತೆತ್ತಿಗರಿಲ್ಲದೆ ಭೂತಮೊತ್ತದೊಳಾಡುತಿಹನೆ ॥ ೩ ॥

ಕನಕವಿಲ್ಲದೆ ಚೋರತನವನಂಗೀಕರಿಸಿದ[ನೆ]
ತನುವಿನೊಳು ತೊಡರ ಹಾವ ಘನವಾಗಿ ತಾಳಿದ್ದವನೆ ॥ ೪ ॥

ಕೊಡುವರೊಳಧಿಕ ನಿಮ್ಮಡಿಯ ಭಕ್ತಿ ಸಂಪದವ
ಕೊಡು ನಿಮ್ಮ ಡಿಂಗರಿಗ ಎನ್ನೊಡೆಯ ಮುಚಖಂಡಿ ವೀರನೆ ॥ ೫ ॥

❑ ❑

## ೨೧೭

ಹೇಳ ಬಂದೆ [ನಾ]ಯಕ ಸುದ್ದಿ ಹೇಳ ಬಂದೆ
ಬಾಲಿಯು ಮನ್ಮಥಜ್ವಾಲೆಯೊಳಗೆ ಸಿಲ್ಕಿ
ತಾಳಲಾರೆನುಯೆಂದು ಓಲೆಯ ಕಳುಹಲು ॥ ಪಲ್ಲ ॥

ಮದನ ಕೋಪವ ತಾಳಿ ಒದಗಿ ಗಿಳಿಯನೇರಿ
ಮದದಿ ಮಾರ್ಬಲವನು ಚದುರೆ ನೆರಹಿಕೊಂಡು
ಕದನಕ್ಕೆ ನಡೆದು ಬಂದು ಕಾಮ ಹೆಡೆಯ

ತೀಡುತಲಿ ಝೇಂಕರಿಸೆ ಪೆರ್ಬಗ ಧ್ವನಿ ರವಳೆ ನೀನು
ಮದನ ಮೂರ್ಛಿತಳಾಗಿ ಮತ್ತೆ ಅಧರ ಚೇತನಗೊಂಡು ಬೇಗದಿ
ಸುದತಿ ನಿನ್ನ ಬಳಿಗೆ ಕಳುಪಲು ಅದು ನಿಮಿತ್ತ್ಯವಾಗಿ
ನಾನು ಹೇಳ ಬಂದೆ ನಾಯಕ ಸುದ್ದಿ ॥ ೧ ॥

ತಿಂಗಳಮುಖಿಗೆ ಅನಂಗ ಕಾಣಲು ಬೆಳು –
ದಿಂಗಳೆಂಬ ಕಿಚ್ಚು ಭಂಗ ಬಡುವುದೀಗ –
ದಂಗನೆಯನ್ನವನ್ನು ಮರದು ಮತ್ತೆ
ಹೆಂಗಳಮಣಿಯೆ ನೀನು ಕೂರಾದ ಖ –
ರಂಗಲೋಚನೆಯಿದನು ತಿಂಗಳಾತ್ಮಕ –
ಳಂಗಕಾಣದೆ ಬೃಂಗನುತಿಯ ಪರಿಯ ಪೇಳಲು
ಹಿಂಗದಲ್ಲಿ ವಿಸ್ತರವಾಗಿ ಹಿಂಗದೆ ಈ ಪರಿಯ ಪೇಳಲು ॥ ೨ ॥

ವಿರಹತಾಪವು ಹೆಚ್ಚಿ ಸೊರಗಿ ಮಂಚದ ಮೇಲೆ
ತರುಣಿ ಮಲಗಿ ಎನ್ನ ಬರಹೇಳಿ ಕಳುಹಲು
ತ್ವರಿತದಿ ಹೋಗಿ ನಾನು ಕಾರ್ಮುಗಿಲವೇಣಿ
ಕರಸಿದ ಪರಿಯಿದೇನೆಂದೆನುತ ನಾನಿ–
ವರಿಗೆ ಕೇಳಿದೆನು ಕರದೆನಗಭಯವನು
ಹರುಷದಿಂದಲಿ ಕೊಟ್ಟು ಎನ್ನಯ
ಹರಣದೊಲ್ಲಭ ಮುರಿಗಿಮೂರ್ತಿಯ–
ರಸಿಯೆಂದು ನೀ ಪೇಳಲು ಅರಸಿ ಹೋಗಿ ನಲ್ಲನ ಶೀಘ್ರದಿ ॥ ೩ ॥

೨೧೮

ಬಿಲ್ವವನದೊಳಿರುವನ್ಯಾರೆ ಬಿಲ್ವವನದೊಳಿರುವನ್ಯಾರೆ
ಇರುವನ್ಯಾರೆ ಇರುವನ್ಯಾರೆ ॥ ಪಲ್ಲ ॥

ಪರಮ ಪಾವನ ಪರಂಜ್ಯೋತಿ ಕಾಣೆ ಸ್ವಾಮಿ
ಹುಲಿಯ ಚರ್ಮವ ಪೊತ್ತ ಹರನು ಕಾಣೆ
ಉರಗಭೂಷಣನಾಗಿ ಮೆರವ ಕಾಣೆ
ಸುರರಿಗೆಲ್ಲರಿಗೆ ಬರು ಹಿರಿದು ಕಾಣೆ

ಮೃತ್ಯುಂಜಯನು ಕಾಣೆ ಸದಾಶಿವನು ಕಾಣೆ
ಮಹಾದೇವ ಕಾಣೆ ಸಿದ್ಧರಾಮ ಕಾಣೆ ಮುರಿಗಿ ಶಾಂತ ಕಾಣೆ ॥ ೧ ॥

ಮೈಯ್ಯಳು ಪೂಸಿದ ಭಸಿತ ಕಾಣೆ ಸ್ವಾಮಿ ಬಲದ
ಕೈಯ್ಯಲಿ ಬೆತ್ತದ ಸೊಗಸು ಕಾಣೆ
ಮಾಯಾರಹಿತ ಮಾಹೇ[ಶ್ವರನು] ಕಾಣೆ
ಸ್ವಾಮಿ ತಾಲು ಕಂದಿಲ್ಲದ ಶಿವನು ಕಾಣೆ ॥ ೨ ॥

ಹುಲಿಯವಾಹನವೇರಿ ಮೆರವ ಕಾಣೆ ಸ್ವಾಮಿ
ಛಲದ ಬಿರಿದಾಂಕ ಚಂದಿರನು ಕಾಣೆ
ನಲವಿನಿಂದಲಿ ನಲಿದಾಡುವ ನಂದಿಯ
ಒಲಿದೇರಿ ಬರುವನೆನ್ನೊಡೆಯ ಕಾಣೆ
ಮೃತ್ಯುಂಜಯನು ಕಾಣೆ ॥ ೩ ॥

ಕುಲದುರಿತ ಕೋಳಾಹಳನು ಕಾಣೆ
ಪ್ರಕಟಸಿದ್ಧಿಗೆ ಮೂಲಕರ್ತು ಕಾಣೆ
ಪ್ರಕಟಿಸಿದಾನಂದ ಮಹಿಮ ಕಾಣೆ ಸ್ವಾಮಿ
ಸಕಲ ಲೋಕತೇಜನಂತೆ ಕಾಣೆ ॥ ೪ ॥

ಬುದ್ಧಿವಂತರಿಗೆ ಪ್ರಸನ್ನ ಕಾಣೆ ಸ್ವಾಮಿ ಕೊ
ಬ್ಬಿದ ಜನಕ್ಕೆ ಶೂರ ಕಾಣೆ
ಮದ್ದೂರುಸ್ಥಲದ ಮಾಯಕನಳಿಯ
ಸಿದ್ಧರಾಮೇಶನೆನ್ನೊಡೆಯ ಕಾಣೆ
ಮೃತ್ಯುಂಜಯ ಕಾಣೆ ಸದಾಶಿವನು ಕಾಣೆ
ಸಿದ್ಧರಾಮ ಕಾಣೆ ಮುರಿಗಿ ಶಾಂತ ಕಾಣೆ
ಬಿಲ್ವವನದೊಳಿರುವನ್ಯಾರೆ........ ॥ ೫ ॥

❑ ❑

## ೨೧೪

[ಮಕ್ಕಳಸ್ವಾಮಿಗಳು ನಿರೂಪಿಸಿದ ವಚನ]

ರಾಗ : ಲಲಿತೆ

ಮಂಗಳಂ ಮಂಗಳಂ ಮುರಿಗೆಯದೇವನಿಗೆ
ಮಂಗಳಂ ಶರಭಾವತಾರನಿಗೆ
ಮಂಗಳಂ ಮಂಗಳಂ ಮಾಯವಿದೂರನಿಗೆ
ಮಂಗಳಂ ಸುಗುಣೈಕ ಮಂದಿರನಿಗೆ ಜಯ
ಮಂಗಳಂ ನಿತ್ಯ ಶುಭಮಂಗಳಂ ‖ ಪಲ್ಲ ‖

ಶಾಂತವೀರೇಶನಿಗೆ ಸಂತತ ವಿನೊದನಿಗೆ
ಚಿಂತಿತಾರ್ಥವನೀವ ಯತಿರನ್ನಗೆ
ಕಂತುವನು ಸುಟ್ಟು ಭಸಿತವನಿಟ್ಟದೇವನಿಗೆ
ಅಂತಕಮರ್ದನ ಮಿಗೆ ಯತಿ[ತಿ]ಲಕ[ನಿ]ಗೆ ‖ ೧ ‖

ವೀರಮಾಹೇಶನಿಗೆ ನಿರಾಕಾರ ಜಂಗಮಗೆ
ಆರುದರುಷನಗಳ ಗುರುವಾದಾತಗೆ
ಆರುಸ್ಥಲಗಳನರಿದು ತೋರಿಸುವ ಶರಣನಿಗೆ
ವೀರಣವಾಚಾರ ಸಂಪನ್ನಗೆ ‖ ೨ ‖

ಷಡುಶಕ್ತಿಯರ ಪ್ರಾಣವಲ್ಲಭನಿಗೆ
ಷಡುಮಂತ್ರ ರೂಪನಿಗೆ ಷಡುಲಿಂಗ ಸಾಧಕಗೆ
ಮೃಡಮೂರ್ತಿ ವೈರಾಗ್ಯಮಂದಿರನಿಗೆ
ಜಯಮಂಗಳಂ ನಿತ್ಯ ಶುಭಮಂಗಳಂ ‖ ೩ ‖

❑ ❑

## ೨೨೦

ಈತನೆ ತಂಗಿ ಈತನೆ ದೇವರದೇವ
ಈತನೆ ತಂಗಿ ಈತನೆ ಪರಮಪ್ರಖ್ಯಾತ ಪಾವನಮೂರ್ತಿ
ನೀತಿಯನರುಪಿದ ಕೀರ್ತಿವುಳ್ಳರಾಯ
ಈತನೆ ತಂಗಿ ಈತನೆ ‖ ಪಲ್ಲ ‖

ಮಂಗಳಮಯ ಮಹಿಮನೆ ತ–
ದಾಂಗ ಮೃಡಾಂಗ ಸಂಗೀತಲೋಲನೆ
ಸಂಗನ ಶರಣರ ಅಂಗೈಯೊಳಿರುವನೆ
ರಂಗನ ನಯನ ಪಾದಾಂಘ್ರಿಯೊ[ಳೆ] ನಮಿಸಿಕೊಂಡೀತನೆ ತಂಗಿ ಈತನೆ॥ ೧ ॥

ಎಲ್ಲ .ದೇವರದೇವನೆ ಸಲ್ಲೀಲೆಯಿಂ–
ದಲ್ಲಮಪ್ರಭುರಾಯನೆ
ಬಲ್ಲಿದ ಮಾಯೆಯ ತಲ್ಲಣಗೊಳಿಸಿದ
ಅಲ್ಲಿ ಮದ್ದಳೆ ಬಿಟ್ಟು ನಿಲ್ಲದೆ ಪೋದಾತನೀತನೆ ತಂಗಿ ಈತನೆ ॥ ೨ ॥

ಅಜನ ಕಪಾಲ ಮಹಿಮನೆ ನಿಜ ಗಿ–
ರಿಜೇಶ ಭುಜಗಭೂಷಣದೇವನೆ
ಗಜಚರ್ಮಾಂಬರವಿಷ್ಟಲಿಂಗ ನಿರಂಗ
ತ್ರಿಜಗವಂದಿತದೇವ ಮುರಿಗೆಯ ಮಹಾತ್ಮನೀತನೆ ತಂಗಿ ಈತನೆ ॥ ೩ ॥

❑ ❑

೨೨೧

ಕಾಣೆ ನಾನಯ್ಯೋ ಏಣಾಕ್ಷಿ ಎನ್ನ ಪ್ರಾಣಕಾಂತನ
ಕ್ಷೋಣಿಯೊಳಗೆ ತ್ರಿಣಯನಂತೆ ಮೆರದನಾದಿ ಶರಣನ
ಜಾಣ ತೋರೆ ಮುರಿಗೆ ಶಾಂತವೀರ ಪ್ರಣಮರೂಪನ ॥ ಪಲ್ಲ ॥

ಚಿತ್ತಜಾರಿಯ ಚಿದ್ರಮಣ ನಿತ್ಯ ಮುಕ್ತಿಯಮೂರ್ತಿಯ
ಕರ್ತನಾಗಿಯೆನಗೆ ಪ್ರಣವಮಂತ್ರವಿತ್ತ ಮಹಿಮನ
ಎತ್ತಹೋದ ಯತಿಗಳರಸು ಸತ್ಯ ಸದಮಲಾತ್ಮನ
ಚಿತ್ತದಲ್ಲಿ ನೆನದು ಮತ್ತೆ ಮರಯಲಾರೆನಯ್ಯಯ್ಯೋ
ಸತ್ತು ಚಿತ್ತಾನಂದದಿಂದ ಮುಕ್ತನಾದ ದೇವನ ॥ ೧ ॥

ಪಂಥಗಾರನು ಭಾವಕಿ ತೋರೆ ಅಂತಕಾರಿಯ
ಚಿಂತೆರಹಿತ ಹಿಡಿದ ಚಲವ ಬಿಡದ ಹೊಂತಕಾರಿಯ
ಎಂತು ಪೇಳೆ ಯತಿಸಂತತಿಗಳಂತರಂಗವಾಸನ
ಕಂತುಹರ ಭಕ್ತಜನರ ಚಿಂತಿತಾರ್ಥವೀವನ
ಸಂತತೆನ್ನ ಸಲಹಿ ಮೂಲಮಂತ್ರದೊಳಗೆ ಬೆರದನ ॥ ೨ ॥

ಸಿಂಧುಜೂಟನ ಚಂದಿರವದನೆ ಸೌಂದರಾಂಗನ
ಚಂದ್ರ ಸೂರ್ಯ ಅಗ್ನಿನೇತ್ರಾನಂದ ಜ್ಞಾನಚಂದ್ರನ
ಕಂದುಗೊರಲನ[ಂ]ತೆ ಧರೆಗೆ ಬಂದ ಮಹಿಮಾಭರಣನ
ಚಂದವಾಗಿ ಯೋಗೀಶ್ವರರ ವೃಂದದೊಳಗೆ ಮೆರದನ
ಮುಂದೆಯೆನಗೆ ಲಿಂಗವಾಗಿ ಬಂದ ಪಾವನಾಂಗನ ॥ ೩ ॥

ಕಾಮನಾಶನ ಕಾಮಿನಿ ತೋರೆ ಸೋಮಭೂಷಣ[ನ]
ತಾಮಸದೆ ಕರ್ಮಹರ ನಿರ್ಮೋಹಿ ನಿತ್ಯ ತೃಪ್ತನ
ನೇಮದಿಂದ ನೆನೆದವರ್ಗೆ ಕಾಮಿತಾರ್ಥವೀವನ
ನಾಮರೂಪತೀತನೆನ್ನಸ್ವಾಮಿ ಭಾನುಜೂಟನ
ಪ್ರೇಮಿಯೆನ್ನೊಳಡಗಿ ಮುಕ್ತಿಸ್ತೋಮಧಾಮವಾದನ ॥ ೪ ॥

ಮಂಗಳಾತ್ಮನ ಮಾನಿನಿ ಮಹಲಿಂಗದೇವನ
ಅಂಗವೆಲ್ಲ ಲಿಂಗವಾಗಿ ಹಿಂಗದೆನ್ನೊಳಿರುವನ
ತಿಂಗಳು ಸೂಡಿದದೇವ ಕಂಗಳು ಮೂರುಳ್ಳನ
ಲಿಂಗ ಸಂಗಿ ಬಸವಲಿಂಗರಾಜನಾಳ್ದ ರಮಣನ
ಲಿಂಗವಾದ ಮುರಿಗೆ ಶಾಂತವೀರ ಕರುಣಾಪಾಂಗನ ॥ ೫ ॥

೨೨೨

ಎನ್ನ ಕಾಂತನ ಕರದು ತೋರೆ ಚನ್ನೆ ಗಮ್ಮನೆ
ತನ್ನ ತಾನೆ ಮುನಿದು ಪೋದ ಭಿನ್ನವಿಲ್ಲದಾತನ
ಇನ್ನೇನು ಪೇಳುವೆ ತತ್ವ ಬಲ್ಲ ಸುಗುಣನ
ಬಿನ್ನಣೆಯ ಮಾತುಗಳಲ್ಲಿ ಬಣ್ಣಿಸುವುದೆ ನಿನ್ನ ॥ ಪಲ್ಲ ॥

ಕುಂಭಕುಚವ ಪಿಡಿದು ಗಂಧ ತುಂಬ ಪೂಸುವ
ಅಂಬುಜಲೋಚನೆ ಸರಸ ಬಿಂಬರದನೆ ಕೇಳಮ್ಮ
ಹಂಬಲು ಬಿಡದು ತನ್ನ ತುಂಗುರುಳೆ ರನ್ನಳೆ
ರಂಭೋರು ಕಳಹಂಸೆ ಗಮನೆ ಅಂಬರದಕೇಶನ
ನಂಬಿಗೆ ಮಾಡಿಸಿ ಎನ್ನ ರ[ಮಿ]ಸಿ ಕರತಂದನ
ಕಂಬುಗ್ರೀವೆ ಕಮಲನೇತ್ರೆ ಶಂಬರಾರಿವೈರಿಯ
ತಂಬಿಸಲಾರೆಯವನ ಚಂಬಿಡದೆ ತೋರಿಸೆ ॥ ೧ ॥

ಒಂದುಗಳಿಗೆ ಅಗಲದಿರ್ಪ ಸವುಂದರಾಂಗನ
ಕುಂದರದನೆ ಕುಮುದಗಂಧಿ ನಂದಿಪಾಳಿದೇವನ
ಚಂದ ಸದ್ವಸನಾಂಗ ಕಂದುಗೊರಲದೇವನ
ಸಿಂಧುರದೈತ್ಯನ ಚರ್ಮ ತಂದು ತಾಳ್ದ ಸತ್ಯನ
ಮಂದುರಗಮನ ಜನಕ ಬಂಧು ಭುವನೇಶನ
ಸ್ಕಂದನೇತ್ರ ಕಮಲಮಿತ್ರವೃಂದ ಮಹಿಮಾಂಗನ
ಮಂದರಗಿರಿಯವಾಸ ಚಂದ್ರಗಿರಿ ಕೋದಂಡನ
ಇಂದುವದನೆ ತಂದು ತೋರೆ ಚಂದ್ರಚೂಡಮೌಳಿಯ ॥ ೨ ॥

ಚಾರು ಸಾಮಜನಿರುತ ಗಾಡಿ ನೀರೆ ಕೇಳಮ್ಮ
ಚಾರು ಚಂದ್ರದುಟಿಗಳುಂಬ ವಾ[ರಿ]ಜ ಚಕೋರನ
ತಾರಹಾರಕ್ಷೀರ ಸುರತ ವಾರಿ[ಧಿ] ನಿರ್ಮಲಾಂಗನ
ಕ್ರೂರ ಕಾಲ ಭೀತಿಗಳನು ದೂರಮಾಡಿ ಕಳದನ
ಮೀರಿ ನಾಲ್ಕುವೇದಗಳನು ತೋರಬಲ್ಲಾತನ
ಆರುಮಂತ್ರ ತಂತ್ರಗಳನು ಮೀರಿದ ಮಾಹೇಶನ
ಧೀರ ಮುರಿಗೆ ಶಾಂತವೀರ ರಾಜತೇಜನ
ನಾರಿ ಶಿರೋಮಣಿಯೆ ನೀನು ಸೇರಿಸೆನ್ನ ಕೂಡಿಸಿ ॥ ೩ ॥

❑ ❑

೨೨೩

ಮಂಗಳಾರತಿಯ ಪದ
ಮಂಗಳಾರತಿಯ ಬೆಳಗಿರೆ ಭವ
ಭಂಗ ಮುರಿಗೆ ಶಾಂತವೀರೇಶಗೆ ॥ ಪಲ್ಲ ॥

ದಕ್ಷಗೆ ದಕ್ಷ ವಿರೂಪಾಕ್ಷಗೆ
ಅಕ್ಷಯಗುಣ ನಿಟಿಲಾಕ್ಷಗೆ
ಉಕ್ಷವಾಹನನಿಗೆ ರುಕ್ಷ ಫಾ
ಲಾಕ್ಷಗೆ ಶ್ರೀ ಯಕ್ಷ ಮುರಿಗೆ ಶಾಂತವೀರೇಶಗೆ
ಮಂಗಳಾರತಿ ......... ॥ ೧ ॥

ಸುಗುಣ ನಿರ್ಗುಣನಿಗೆ ಅಗಣಿತ ಮಹಿಮಗೆ
ಖಗರುಚಿನಿಭಜಟಜೂಟನಿಗೆ

ನಿಗಮ ತುರಂಗಗೆ ನಗಜಾ ಸು ಸಂಗಗೆ
ಸುಗುಣ ಮುರಿಗೆ ಶಾಂತವೀರೇಶಗೆ
ಮಂಗಳಾರತಿ............ . ॥ ೨ ॥

ಸುರನತ ಚರಣಗೆ ಹರಿಣಾಂಕಧರನಿಗೆ
ತರಣೇಂದುಕೋಟಿಪ್ರಕಾಶನಿಗೆ
ಮರಣ ವಿದೂರಗೆ ಪರತರ ಧೀರಗೆ
ಕರುಣಿ ಮುರಿಗೆ ಶಾಂತವೀರೇಶಗೆ ॥ ೩ ॥

೨೨೪

ಶ್ರೀ ಮಹಾ ವರ ವೀರಭದ್ರನು
ಪ್ರೇಮದಿಂದಲಿ ನಟಿಸಿ ಜಗದೊಳು
ವ್ಯೋಮಮೂರತಿ ಕರುಣದಿಂದಲಿ ಸಲಹ ತಾ ಬಂದ
॥ ಭಾಮಿನೀ ಪದ ॥
ಶ್ರೀಗುರು ಸದಾಶಿವ ಶಾಂತವೀರನು
ಯೋಗಿಜನರುಗಳರಿದು ನುತಿಸಲು
ಭೋಗಮೂರುತಿವೊಲಿದು ಕೊಡುವನು ಸಕಲ ಸಂತಸವ
ತ್ಯಾಗ ನಿರೋಧಗಳನರಿಯದಾ
ಭೋಗಿ ಜನರುಗಳೊಲಿದು ಭಜಿಸಲು
ರಾಗರಂಜಿತ ಸಲಹುಗನುದಿನ ಸಕಲ ಸಜ್ಜನರ ॥ ೧ ॥

ಮಾರವೈರಿಯ ಶರಣರುಗಳನು
ವೀರಶೈವಾಚಾರವನು ಘನ
ಪ್ರೀತಿಸಲ್ಕಿಗೆ ಬಂದ ಮುರಿಗೆಯದೇವ ದೇಶಿಕಾಚಾರ್ಯ
ಕ್ರೂರಮಾರ್ಗದಿ ಚರಿಸುತಿಹರನು
ಬಾರಭರಿತೋದ್ಧಾರ ನರಕದ
ಘೋರದೊಳಗವರುಗಳ ಕೆಡಹಲು ಬಂದನೀ ಮಹಿಮ ॥ ೨ ॥

ತನ್ನ ತಾನಱಿದಱಿದು ಮಿಗ ಭಯ
ಭಿನ್ನ ಜ್ಞಾನವ ಜಯಿಸಿ ನಿಜದೊಳು
ಸನ್ನುತದ ಮಹಿಮೆಗಳ ಮೆಱೆದನು ಈ ಮಹಾಪುರುಷ

ಕನ್ನಡೀಯೊಳು ನೋಡುವವರಿಗೆ
ತನ್ನ ನಿಜವದು ಕಾಣಬರುವುದು
ಚೆನ್ನಪುರುಷರು ನೋಡಿ ತಿಳಿಯಿರಿ ಈ ಮಹತ್ವವನು ॥ ೩ ॥

ಮದ್ದು ಮಾರಿಗಳೆಂಬ ಭೂತದ
ಸಿದ್ಧಿಗಳನೇಕವನು ಮಾಡುವ
ಸಿದ್ಧಸಿದ್ಧರ ಗಂಡನೆನಿಸುವ ವೀರಗಣಶಂಭು
ಬದ್ಧವೇದಾಗ[ಮ] ಪುರಾಣದ
ಸಾಧ್ಯರೆನಿಸುವ ಶಾಸ್ತ್ರಿಕರ ನುಡಿ
ಗೆದ್ದು ಚರಿಸುವ ಶಾಂತ ಪರತರ ಸುದ್ಧ ಬಹು ಬದ್ಧ ॥ ೪ ॥

ಆಟ ಮಾಟಗಳೆಂಬ ಕುಟಿಲದ
ಬೇಟಗಳನೇಕವನು ಮಾಡುವ
ಚಾಟು ಮನುಜರ ಬೂಟಕತ್ವವ ನೋಡಿ ನಸುನಗುತ
ಪಾಟಿಗೆಯ್ಯದೆ ದಾಂಟುವತಿಶಯ
ಜೂಟಶಸಿಧರವೀರಗಲ್ಲದೆ
ಚಾಟುತನದ ವಿನೋದದಿಂದಲಿ ಚರಿಸುವರಿಗಹುದೆ ॥ ೫ ॥

ಸಾರ ಷಟುಸ್ಥಲಚಕ್ರಭೌಮನು
ಮೀಱಿದವರನು ಶಿಕ್ಷೆಗೈವನು
ಸಾರಸಾರಿಯ ನೇತ್ರ ಚರಣನು ಭಕ್ತಿ ಕಾರಣನು
ಮಾರಮರ್ದನ ಹೊಳೆವ ಶಸಿ ವಸು
ಸೂರನೇತ್ರನು ವಿಮಲ ಕರಣದ
ಪಾರ ವೇದಿಸಿ ಕಳುಹುತಿರ್ದನು ವೀರ ಶಾಂಭವಕೆ ॥ ೬ ॥

ತತ್ತ್ವಮಸಿಯಮ್ತ್ರಿವಿಧದರ್ಥವ
ಚಿತ್ತಸುದ್ಧದಿ ಅಱಿದ ಶರಣರ
ತಥ್ಯವಾದಾ ವೀರಮಡಿವಳ ತಾನೆ ಪರವಿಲ್ಲ
ಸತ್ತ್ವರಜತಮವೆಂಬ ಗುಣಗಳು
ಕತ್ತಲೆಗಳನು ಪರಿಸುವಡೆ ತಾ
ಚಿತ್ರಭಾಕರನೆನಿಸುತಿರ್ದನು ಶಂಭು ಮುರಿಗೇಶ ॥ ೭ ॥

❑ ❑

೨೨೫

ಶ್ರೀ ಮುರಿಗೇಶ್ಯ ನೀ ಬಾ ಮನಿಗೆ ನಿತ್ಯಾ
ನೇಮದಾರತಿ ಬೈಳಗುವೆನು ನಿಮಗ ॥ ಪಲ್ಲ ॥

ಕೂಜ್ಯಾಕೊ ಮಾದಾಸುಮಮಂಜರಿ
ರಂಜಿಸುತಿಹ ಪುಶಪದಾರತಿಯ
ಮಂಜುಳತರ ನಿರಂಜನಮೂರ್ತಿಗೆ
ಹುಂಜೋಳಿಯಿಂದೆತ್ತಿ ಬೆಳಗುವೆನು ನಿಮಗ ॥ ೧ ॥

ದುಂಡುಮಲ್ಲಿಗೆಗಳ ಚಂದನ್ಯಾಗಿ ನಿನ್ನ
ಗಿಂಡಿಯ ಮೇಲಿಟ್ಟು ಮುದದಿಂದ
ಕುಂಡಲಪತಿ ಕರ್ಣಕುಂಡಲ ನಿನ್ನ ಹಸ್ತ
ಪುಂಡರೀಕದಿ ಎತ್ತಿ ಬೆಳಗುವೆನು ನಿಮಗ ॥ ೨ ॥

ಧರಿಯೊಳು ಚಿನ್ಮೂಲಗಿರಿಯೊಳು ನೆಲಸಿದ
ಗುರು ಮುರಿಗೇಶನಿಹ ಹರುಷದಲಿ
ಸುರುಚಿರ ಪೂರೆವರ ಪರತರಮೂರ್ತಿಗೆ
ಉರುತರದಾರತಿ ಬೆಳಗುವೆನು ನಿಮಗ ॥ ೩ ॥

 

೨೨೬

ಭುವನದೊಳಗೆ ಧರ್ಮವಿಲ್ಲದ ಮನುಜನ ದೇಹ ಬೇಡ
ಶಿವಲಿಂಗವ ಕಟ್ಟಿ ಬೇರೊಂದು ದೈವದ ಪೂಜೆ ಬೇಡ ॥ ಪಲ್ಲ ॥

ಕಾಸು ವೀಸಕೆ ಆಸೆ ಮಾಡುವ ಲೋಭಿಯ ಲೇಸು ಬೇಡ
ಬಾಸೆಗೆ ತಪ್ಪುವ ಬ್ರಹ್ಮ ಅರಸಿನ ದೇಸ ಬೇಡ
ಮೋಸವ ಮಾಡುವ ವಂಚಕನೊಡನೆ ವಿಶ್ವಾಸ ಬೇಡ
ಲೇಸುಳ್ಳ ಗುರುವಿನಾಜ್ಞೆಯ ಮೀರುವ ಶಿಷ್ಯ ಬೇಡ ॥ ೧ ॥

ದೋಷಕೆ ಹೆದರದ ದ್ರೋಹಿಯ ಬಲಗೈಯ್ಯ ಬಾಸೆ ಬೇಡ
ವಿಶ್ವಾಸದಿಂದಲಿ ತಾನು ನಂಬಿದ ಠಾವಿಗೆ ಮೋಸ ಬೇಡ
ಆಸೆಯನಳಿದು ನಿರಾಸೆಯ ಪುರದೊಳು ರೋಷ ಬೇಡ ॥ ೨ ॥

ಕುಂಟಣಿ ತತಿ ಮಾಡಿದಲ್ಲದ ಕಾರ್ಯಕೆ ದಾಂಟು ಬೇಡ
ಕಂಟಕ ಕರಿ ವ್ಯಾಘ್ರ ಫಣಿಯ ಸಂಗದಾಟವು ಕೇಡುಂಟು ಬೇಡ
ಕಂಟಕ ಬಂದೆಡೆಗೊದಗದ ಸಾವಿರ ನಂಟು ಬೇಡ
ಒಂಟಲಿನ್ನೊಡೆಯನ ಬಿಟ್ಟೋಡಿ ಬರುವಂತ ಬಂಟ ಬೇಡ ॥ ೩ ॥

ಇರಿವ ಪಸುಗಳಗ್ನಿ ಹರಿವ ನದಿಗಳೊಳು ಸರಸ ಬೇಡ
ಮರುಳನ ನೀ[ತಿ]ಯ ಬಲ್ಲಿದವರ ಕೊಡೆ ವಿರಸ ಬೇಡ
ಶಿರದಲಿ ಲಿಖಿತವಿರೆ ಹಲವು ಹಂಬಲಿಸುವ ಮನವು ಬೇಡ
ಕೆರೆಯನೆರೆಯೂರ ಲೋಗರ ಮನೆಯೊಳು ಸರಸ ಬೇಡ ॥ ೪ ॥

ಪಿತ ಮಾತೆಯರ ಮೂರ್ಖತನದಿಂದ ಕೊಲ್ಲುವ ಪುತ್ರ ಬೇಡ
ಪೃಥ್ವಿಯೊಳಗೆ ಒಂದಾಗಿ ಉಣ್ಣದ ಕುಲಗೋತ್ರ ಬೇಡ
ಉತ್ತಮ [ಧಾ]ತ್ರಿಯೊಳುಪವಾಸವೆನಿಪನ್ನಛತ್ರ ಬೇಡ
ಚಿತ್ತ ತಾಳ ಮದ್ದಲೆ ಗೀತವಿಲ್ಲದ ಪಾತ್ರ ಬೇಡ ॥ ೫ ॥

ಕಕ್ಕಸದಾಪತ್ತಿಗಿಲ್ಲದ ಸಾವಿರ ರೊಕ್ಕ ಬೇಡ
ಒಕ್ಕಣೆ ಸಾಕ್ಷಿಗಳಿಲ್ಲದ [ಪ]ತ್ರದ ಲೆಕ್ಕ ಬೇಡ
ಕಕ್ಕುಲತೆಯ ಮಾಡಿ ಪಂಕ್ತಿಯೊಳನ್ನವನಿಕ್ಕಬೇಡ
ಠಕ್ಕು ಠೌಳಿಯ ಬಾರುಗುತ್ತಿನವನಿಗೆ ಮನಸಿಕ್ಕಬೇಡ ॥ ೬ ॥

ಈಯದ ಲೋಭಿಯ ಹಾಡಿ ಹರಸಿ ಮನ ನೋ[ಯ]ಬೇಡ
ಕೈಯ್ಯಲ್ಲಿ ಕಾಸಿಲ್ಲದಾಸಿಯ ಬಡವರಿಗೀಯ್ಯ ಬೇಡ
ಉಯ್ಯನೆ ಬಟ್ಟೆಯೊಳೊರ್ವನೆ ರಾತ್ರೆಯೊಳಗಯ್ಯ ಬೇಡ
ವೀರ್ಯತೆ ಗತಿಯಿಲ್ಲದೂಳಿಗವನು ಮಾಡಿ ಸಾಯಬೇಡ ॥ ೭ ॥

ಕುದುರೆ ಕ[ಟ್ಟಿ]ದರಸಿನ ಮನಿತನ ಹಾಳು ಬೇಡ ಕೇ–
ಳದ ಮೂರ್ಖಗೆ ಸಾಧಿಸಿ ಬುದ್ಧಿಯ ಹೇಳಬೇಡ
ಬಾಳುವ ಮನೆಗೊಬ್ಬ ಸಿವಪುತ್ರನಿಲ್ಲದ ಹಾಳು ಬೇಡ
ವೇಳೆ ವೇಳೆಗೆ ಹಂಗಿಸಿ ನುಡಿವಂಥ ಖೂಳ ಬೇಡ ॥ ೮ ॥

ಆಗಮಶಾಸ್ತ್ರವನಾಡಿ ತಿಳಿದು ಭ್ರಷ್ಟನಾಗಬೇಡ
ಬೇಗದಿಂದಲಿ ಸ್ಥಿರ ಬಾಳುವಡೆ ಬಿಟ್ಟು ಹೋಗಬೇಡ

ಸದ್ಗುಣ ಸಂಪನ್ನ ನೀನು ಕರ್ಮಕೀಡಾಗಬೇಡ
ಮೇಗಳಗವಿ ಗುರುಶಾಂತಗಲ್ಲದೆ ತಲೆವಾಗಬೇಡ ॥ ೯ ॥

❑ ❑

೨೨೭

ಮಂಗಲಂ ಶುಭ ನಿರಂಜನ ಪರಂಪರೆಗೆ ಜಯ
ಮಂಗಲಂ ಭುವನ ಗುರು ಮುರಿಗೇಂದ್ರರಡಿಗೆ ॥ ಪಲ್ಲ ॥

ನಲಿದರ್ಚಿಸುವ ಭಕ್ತ ಮಾಹೇಶ್ವರಾವಳಿಗೆ
ಫಲಪದವನೀವ ತೋಂಟದ ಸಿದ್ಧಪತಿಗೆ
ಕಲಿಮಲಾಪಹ ಕಲುಷಹರ ಕಲಾಭಿಜ್ಞ ಚಿ–
ದ್ಬಲ ನಿರಕ್ಷರ ಬೋಳಬಸವೇಂದ್ರರಡಿಗೆ ॥ ೧ ॥

ಪರಮಾನುಭವ ಸುಖಾರ್ಣವ ಸುಷುಮ ಗುಮ್ಮಳಾ
ಪುರದ ಶ್ರೀ ಸಿದ್ಧವೀರೇಂದ್ರ ವಿಜಯರಿಗೆ
ಸ್ಮರವಿಜಯ ಗೂಳೂರ ಸಿದ್ಧಲಿಂಗೇಂದ್ರ ಸುಂ–
ದರ ಸದ್ಗುಣೋತ್ತಮರ ಚರಣಾಬ್ಜಗಳಿಗೆ ॥ ೨ ॥

ಶೀಲ ಶ್ರುತ ಜನಕಲ್ಪಶಾಲಿ ಸನ್ನಿಷ್ಠಾನು–
ಕೂಲ ಚಿದ್ರುಚಿಕಾಯ ಗಗನದಾರ್ಯರಿಗೆ
ಕಾಲಹರ ಕರುಣಾಲವಾಲ ಶಿವತತ್ತ್ವಾರ್ಥ
ಮೂಲ ಕಟ್ಟಿಗೆಹಳ್ಳಿ ಗುರುವರರ ಪದಕೆ ॥ ೩ ॥

ವೀರಮಾಹೇಶ್ವರಾಚಾರ ಸಂಸ್ಥಾಪನಾ–
ಧಾರ ಮುರಿಗಾ ಶಾಂತವೀರ ವಿಕ್ರಮಗೆ
ತಾರಕಬ್ರಹ್ಮ ಸಾಕಾರರಾದಿಮ್ಮಡಿಯ
ಧೀರ ಗುರುಸಿದ್ಧ ಪ್ರಸಿದ್ಧರಡಿಗಳಿಗೆ ॥ ೪ ॥

ಶ್ರೀದ ಸಂಗೀತಾನುಮೋದ ಸಂಭ್ರಮ ಚಿದ್ವಿ–
ನೋದ ಸ್ವಾದಿಯ ಚೆನ್ನಬಸವಾಧಿಪರಿಗೆ
ಆದಿತ್ಯಕೋಟಿಕಿರಣಾದರದ ಭಕ್ತ ವಶ
ನಾದ ಸಿರಪುರ ಸಿದ್ಧಲಿಂಗಾಂಘ್ರಿಗಳಿಗೆ ॥ ೫ ॥

ಕಾಯಜಾಂತಕ ಶ್ರುತಿನಿಕಾಯ ನುತ ನಿರ್ಮಾಯ
ನಾಯಕನಪಲ್ಲಿ ಗುರುಪಾದಯತಿವರಗೆ
ರಾಯ ಮದಕೇರಿನೃಪ  ನಾಯಕನ ಭಕ್ತಿ ಸ
ರಾಯದಿಮ್ಮಡಿಯ ಗುರುಪಾದಗಳಿಗೆ ॥ ೬ ॥

ಶಿವಯೋಗಿ ನಿವಹ ತೋಷಣ ಮೂರುಸಾವಿರದ
ಶಿವಲಿಂಗಯತಿ ಕುಲೋತ್ತುಂಗ ಪುಂಗವಗೆ
ಭುವನಾಳಿ ಭಕ್ತಿಗೊಪ್ಪತ್ತು ರಾಜಿಪ ಸದಾ
ಶಿವ ಚೆನ್ನವೀರ ಗುರುಪದ್ಮಗಳಿಗೆ ॥ ೭ ॥

ಶ್ರೀಕರಾನೇಕಲೋಕಸ್ತುತ ಮಹಾಮಹಿಮ
ವ್ಯಾಕರಣದ ಸಿದ್ಧಲಿಂಗದೇಶಿಕಗೆ
ನಾಕಪದ ಪದವ ನಿರಾಕರಿಸಿದ ನಿಘಂಟಿನ ದ
ಯಾಕರ ಶ್ರೀ ಸಿದ್ಧವೃಷಭೇಂದ್ರರಡಿಗೆ ॥ ೮ ॥

ವೈರಾಗ್ಯ ಸಂಪತ್ಸದಾರಮ್ಯ ಕಾಮಾರಿ
ವೈರಿವಾರಣ [ವಿ]ದಳನ ಕಂಠೀರವ
ಶ್ರೀ ರಾಚವಟ್ಟಿ [ಮು]ರಿಗೇಂದ್ರ ಯತಿಕುಲಚಂದ್ರ
ಸಾರ ಸದ್ಗುಣ ಸಾಂದ್ರ ಸಿದ್ಧೇಂದ್ರವರಗೆ ॥ ೯ ॥

❑ ❑

೨೨೮

ಜ್ಯೋತಿ ಬೆಳಗಿರಮ್ಮ ಶ್ರೀ ಗುರುವಿಗೆ ಜ್ಯೋತಿ ಬೆಳಗಿರಮ್ಮ
ಪ್ರೀತಿಯಿಂದ ಜಯವೆನ್ನುತ ಒಳ್ಳೆ ಜಾತಿಮುತ್ತದುಂಬುತ ॥ ಪಲ್ಲ ॥

ಇಂದುಮುಖಿಯರೆಲ್ಲ ಕೂಡುತ ಮನ
ಚಂದದಿಂದ ವರ ಬೇಡುತ
ಮಂದಹಾಸಪ್ರಭೆಗೂಡುತ ಬಹು
ಬಂಧುರದಿಂದಲಿ ಪಾಡುತ ॥ ೧ ॥

ಅಂಗಜಗುಣಗಳ ಜಾರುತ ನೀಲಾ–
ಪಾಂಗದ ಪ್ರಭೆಗಳ ಬೀರುತ

ಸಂಗೀತ ಸವಿರಸದೋರುಶ ನಿಮ್ಮ
ಶೃಂಗಾರ ಮುಖ ಬೆಮರೇರುತ ॥ ೨ ॥

ವಾಚಕ ಮನವೇಕಾಗುತ ನೀವು
ಪ್ರಾಚೀನ ಸ್ತುತಿಗಳ ಪೇಳುತ
ನಾಚದೆ ರಾಗವ ಮಾಡುತ ನಮ್ಮ
ರಾಚವಟ್ಟಸ್ವಾಮಿಯ ನೋಡುತ ॥ ೩ ॥

□ □

೨೨೯

ರಾಗ : ಸಾರಂಗ

ಶರಭಾವತಾರನೆ ದಯುವಿಹುದು
ಶರಭಾವತಾರನೆ ಹರನ ಕುಮಾರನೆ
ಕಿರು ಬೆವರಿಗೆ ಫಣಿ ಹರಿಯೊಳು
ಮೆರವವತಾರನೆ ದಯುವಿಹುದು ॥ ಪಲ್ಲ ॥

ಕೆದರಿದ ಜುಂಜು ಸುಲಿಪಲ್ಲು ಕೊನೆಮೀಸೆ
ಚದುರತನದೊಳಿದ್ದು ಹದುಳದೊಳಿರುವ
[ಶರಭಾ]ವತಾರನೆ ದಯುವಿಹುದು ॥ ೧ ॥

ಝುಲ್ಲಿ ಕಠಾರಿಗಳು ಬಿಲ್ಲಂಬು ಮೊದಲಾದ
ವಲ್ಲಿಪಾವುಡ ಮೇಲೆ ಶಿಖೆಯ[ಂ]ದ
ಶರಭಾವತಾರನೆ ದಯುವಿಹುದು ॥ ೨ ॥

ದೇಶಕಧಿಕವಾದ ರಾಚೋಟಿಪುರ ವಿರೇಶ
ಭಾಷೆ ಪಾಲಿಪ ಚೆನ್ನ ರಾಚೋಟಿ
ಶರಭಾವತಾರನೆ ಪಾಲಿಪುದು ॥ ೩ ॥

□ □

೨೩೦

ಸಾರಿ ಸದಾ ಸದ್ಗುರುವವನು ಭಜಿಸಾ
ಸಾರುವ ಸುಖವನು ಭೋ ಮನವೇ
ಸಾರಿ ಸದಾ....... ॥ ಪಲ್ಲ ॥

ನಿಗಮಂಗಳು ಬಲು ಬಗೆಯಿಂದಿಲಿ
'ನಗುರೋರಧಿಕ'ವೆಂದನವರತ
ಪೊಗಳಲು ನಿನ್ನೊಂದಿನಿಸಿದ ನಂಬಿರೆ
ಪೊರೆವನು ಬಿಡದೆ ತಾ ಬಾರೆಂದೆನುತ ॥ ೧ ॥

ಜ್ವರ ದಾರಿದ್ರಪಮೃತ್ಯು ಮೋಹಾದ್ವಯ
xxxx ನಿಕರವೀಗ
ನೆರೆ ಬಿಡದಡಸಿರೆ ಸದ್ಗುರುವಿನ
ಚರಣದೊಳಾಡುವತಿಬೇಗ ॥ ೨ ॥

ವರ ರಾಯಿಚೂರಪುರದೊಳಗೊಪ್ಪುವ
ಗುರು ಚೋಳಾರ್ಯ ಗುರೋತ್ತಮ
ಚರಣ ಕಮಲವನು ಛಲಿಸದೆ ಧ್ಯಾನಿಸು
ಗುರು[ಮಹ]ಂತೇಶನಧಿಕ ॥ ೩ ॥



೨೩೧

ಬೆಳಗುವೆನಾಗಮತೀತಗೆ ಸರ್ವರೊಳು
ಬೆಳಗುವ ಜ್ಞಾನಜೋತಿಗೆ ॥ ಪಲ್ಲ ॥

ಆಗಮಗಣನುತಿಕೋಶಗೆ ಶಿವ
ಯೋಗಿ ಮನೋಬ್ಜನಿವೇಶಗೆ
ನಾಗಕಂಕಣ ನಗಜೇಶಗೆ ಭವ
ರೋಗ ಭುಜಂಗ ಖಗೇಶಗೆ ॥ ೧ ॥

ಖಗ ಮೃಗಧರ ಶಿಖಿನೇತ್ರಗೆ ಸರ್ವ
ಜಗವ ಪಾಲಿಸುವಂಥ ಸೂತ್ರಗೆ
ಮೃಗವೈರಿ ಗಜಚರ್ಮಗಾತ್ರಗೆ ಮೂರು
ಬಗೆಯ ಗಣಂಗಳ [ಸೂ]ತ್ರಗೆ ॥ ೨ ॥

ಅರಿವರ್ಗಗಿರಿ ಸುರಾಧೀಶಗೆ ಮೂರು
ಪುರ ವನದಹನ ಹುತಾಶಗೆ

ಕರುಣಾಶರಧಿ ತಾರಾಧೀಶಗೆ ನಮ್ಮ
ಗುರುವಾದ ಪರಶು ರುದ್ರೇಶಗೆ ॥ ೩ ॥

 

೨೩೨

ತಾನು ತಾನು ತನ್ನಂತೆ ಲೋಕವೆಲ್ಲ ನಿನ್ನಂತೆ
ನಿನ್ನ ಬಿಟ್ಟು ನಿನ್ನ ಹಿಡಿದರ ಬಂದೆನು ಈ ಜಗಕಂತೆ ॥ ಪಲ್ಲ ॥

ಕತ್ತೆಯಂತೆ ಒದರಿದೆನಂತೆ ತೊತ್ತುಗಳ ಸೇರಿದೆನಂತೆ
ಮತ್ತೆ ಮತಿಯಗೆಟ್ಟನಂತೆ ಪೃಥ್ವಿಯೊಳಗೆ ಬಿದ್ದನಂತೆ ॥ ೧ ॥

ಆರ ಕೈಯ್ಯ ಸಿಲ್ಕಿದೆನಂತೆ ಮೂರುಬಾಧೆಗೆ ಬಿದ್ದೆನಂತೆ
ಐರುವದಾರಿಯ ಮರತೆನಂತೆ ಘೋರನರಕಕೆ ಬಿದ್ದನಂತೆ ॥ ೨ ॥

ನೂರವೊಂದು ಮನಿಯಂತೆ ಅದು ಮೀರಿದ ಸ್ಥಲವಂತೆ
ದಾರಿದಪ್ಪಿ ಪೋದನಂತೆ ಧೀರ ಲಿಂಗಾರ‍್ಯಾದನಂತೆ ॥ ೩ ॥

 

೨೩೩

ಗುರು ಮುಟ್ಟದ ಗೂಳಿ ಬರದಿಂದ ಬರುತಾದೆ
ಸರಿಸಿ ಹೋಯಲಿ ಬೇಡಿ ದುರ್ಜನರು
ಸರಿಸಿ ಹೋದರೆ ನಿಮ್ಮ ಶರೀರಕೆ ಉಳುವಿಲ್ಲ ವಿ-
ವರಿಸಿ ನೋಡಿರಣ್ಣ ಸರ್ವ ಲೋಕಾ
ಗುರು ಮುಟ್ಟದ ಗೂಳಿ ॥ ಪಲ್ಲ ॥

ಎಂಟುಗಜವ ಮೆಟ್ಟ ಒಂಟಲಿ ಬರುತಾದೆ
ಸೊಂಟರಗಾಳಿ ಬಲ್ಮೆಯ ಮುರಿದು
ಉಂಟಾದೋವಾರುಬೀದಿಯ ಸವರೂತ
ಹೊಂಟು ಹೋಗುತಲದೆ ಮೂರುಮಾಳಿಗೆ ಕಿತ್ತು ॥ ೧ ॥

ಏಳು ಕೋಣೆಯ ಮುಚ್ಚಿ ಆಳ್ವೇರಿ ಬೀಳ್ಗಡಹಿ
ಜಾಳು ಮಾಡಿ ನಾಲ್ವರ[ಸಹಿ]ತ
ಬಾಳುವೆ ಬದುಕೆಲ್ಲ ಹಾಳಾಗಿ ಹೋಯಿತು
ಹೇಳೋದಕೆಣೆಯಿಲ್ಲ ಕೇಳೋರ ಕಾಣೆ ॥ ೨ ॥

ಒಂಬತ್ತುಬಾಗಿಲ ಕಂಭಗಳ ಕಿತ್ತಿಟ್ಟು
ಸಂಭ್ರಮದಿಂದಲಿ ಬರುತಿದಕೊ
ತುಂಬಿದ ಅಮೃತದ ಹೊಂಡದೊಳು ಮುಳಿಗ್ಯಾಡಿ
ಕಂಡು ಏರಿತು ಮೇಗಿನರಮನೆಯ ॥ ೩ ॥

ಓಂಕಾರವೆಂಬ ನಾದವ ಕೇಳಿ ಒಳಹೊಕ್ಕು
ಓಂಕಾರವೆಂಬ ಮಂಚದ ಬಳಿಯ
ಶಂಕರನೆಂದೆಂಬ ಶಿವ ರೂಪನ ಕಂಡು ಅ-
ಹಂಕಾರವಳಿದು ಆಮಳ್ಳೈಕ್ಯವಾದಂತ ॥ ೪ ॥

ಆರುವಿದ್ದ ಗೋಳಿಯು ಮುರಿದೋಡುವ ಜನಕೆ
ನರಗುರಿಗಳು ಸಮವೇನದಕೆ
ವರವಿಯ ಮೋನಣ್ಣ ಹಿರಿದು ಕಿರಿದುಯೆಲ್ಲ
ವರದು ನೋಡುವರಿಗೆ ಪರಿಪರಿ ತೋರ್ಪುದು ॥ ೫ ॥

❑ ❑

೨೩೪

ಮಂಗಳಾರ್ತಿ ಪದ
ಮಾರಾಕಾರ ವಿಹಾರ ಶಾರದ ಶಾರದಾಭ್ರಶರೀರ ॥ ಪಲ್ಲ ॥

ಸಾರಸಭವನುತ ಕರುಣಿಸು ಜನಮಂದಾರ ಸುಧಾಕಾರಧಾರ ವಿ-
ಚಾರ ಮಂಗಲಂ ಮಂಗಲಂ ಭವಂತು ತೇ ಮಂಗಲಂ ಮಂಗಲಂ ॥ ೧ ॥

ರಂಗಧವಲಪ್ರಭಾಂಗ ಗಿರಿಜಾರ್ಧಾಂಗ ಭಕ್ತಾಂತರಂಗ
ಮಂಗಲ ಮಾಯವಿಭಂಗ ಪ್ರಮಥಗಣಸಂಗ
ಗಂಗಾಧರಲಿಂಗ ಕೃಪಾಂಗ ॥ ೨ ॥

ಕಾಲಕಾಲ ತ್ರಿಶೂಲಕರ ಪುರಕೋಲಾಹಲ ವಹ್ನಿಫಾಲ
ನೀಲಕಂಧರ ಬುಧಜಾಲ ಸನ್ನುತ ಕರಿ–
ಮೂಲ ಕುದ್ದಾಲ ಸುಶೀಲ ಸಕೀಲ ॥ ೩ ॥

ಸೋಮಧರ ಪೂರ್ಣಕಾಮಭಸಿತ ವಿಶ್ರಾಮ ಮಂಗಳನಾಮ
ರಾಮ ಸನ್ನುತ ಜನಪ್ರೇಮ ರಜತಗಿರಿ
ಧಾಮ ಶಂಕರ ಗಣಸ್ತೋಮ ಲಲಾಮ ॥ ೪ ॥

ಈಶ ಈಶ ದಿನೇಶ ಪರಮಪ್ರಕಾಶ ದೋಷ ವಿ–
ನಾಶ ವಸುಧೆಗಧಿಕವಾಗಿಹ ವಾಮಪುರದ ನಿ–
ವಾಸ ಸಜ್ಜನ ಪೋಷ ಸಿದ್ಧೇಶ ಮಂಗಲಂ ಮಂಗಲಂ ॥ ೫ ॥

೨೩೫

ಕಾಣದಿರಲಾರೆ ನೀ ಎನ್ನ ಪ್ರಾಣಕಾಂತನ ತೋರೆ
ಜಾಣೆ ಕೇಳೆ ಪಂಚಬಾಣನ ಬಾಧೆಗೆ
ತ್ರಾಣಗುಂದಿ ನಾ ಕ್ಷೀಣಳಾದೆ ಸಖಿ ॥ ಪಲ್ಲ ॥

ದೂತಿ ಕೇಳೆ ಬಂದು ನಲ್ಲನ ಮಾತನಾಡೆ
ಬಂದು ನಿಜವಲ್ಲವೆಂದು ಪೇಳೆ ನೀ
ಆತನ ಕರೆಯೆಂದೆ ಕಾತರದಲಿ ಮನ
ಸೋತು ನಾ ಬಳಲುವೆ ಏತಕೆ ಮುನಿದ ನೀ ತಿಳಿಯೆ ಸಖಿ ॥ ೧ ॥

ಚಂದ್ರಿಕಾನನೆ ಕೇಳೆ ಈ ನಲ್ಲಗೆ ಚಂದದಿ ತಿಳಿದು ಹೇಳು
ಒಂದುನಿಮಿಷದೊಳಗೆ ಸುಗುಣನ
ತಂದು ಕೂಡಿಸೆ ತರಳೆ ನೊಂದು
ಒಂದಿರುಳಿವಳಿಂತೆಂದು ಪೇಳೆ ಸಖಿ ॥ ೨ ॥

ಬಡನಡುವಿನ ಜಾಣೆ ನಿನಗೆ ನಾ ಕೊಡುವೆನು ಕಟ್ಟಾಣಿ
ತಡಮಾಡದೆ ತರಳೆ ಪ್ರಿಯನ ಕೂಡಿಸೆ ಅಹಿವೇಣಿ
ಪೊಡವಿಯೊಳು ವಾಮಪುರದೊಡೆಯನ ಭೋ ಸಿದ್ಧೇಶನ
ಅಡಿಗಳಿಗೆರಗುವೆ ತಡಮಾಡದೆ ನೀ ಕರತಾರೆ ॥ ೩ ॥

☐ ☐

೨೩೬

ಮಂಗಳ ಮಡಿವಾಳಲಿಂಗದೇವನಿಗೆ
ಹಿಂಗದೆ ನಾರೇರಾರತಿಯೆತ್ತಿರೆ
ಮಂಗಳ......... || ಪಲ್ಲ ||

ಆಧಾರಚಕ್ರದಾಚಾರಲಿಂಗೈಯ್ಯಗೆ
ಸಾರ್ದು ಕ್ರಿಯಾಶಕ್ತಿರೂಪಿನಲಿ
ಸ್ವಾಧಿಷ್ಠಾನಚಕ್ರದ ಗುರುಲಿಂಗವ
ಭೇದಿಪ ಜ್ಞಾನ ಶಕ್ತಿಯಳಾಗಿ || ೧ ||

ಮಣಿಪೂರಕಚಕ್ರದ ತ್ರಿಣಯ ಶಿವಲಿಂಗಕೆ
ಅನಾಹತಚಕ್ರ ಜಂಗಮಲಿಂಗಕೆ
ಅನಘ ವಿಶುದ್ಧಿ ಪ್ರಸಾದಲಿಂಗೈಯ್ಯಗೆ
ಒನುತೆ ? ಇಚ್ಛೆ ಆದಿಪರಾಶಕ್ತಿಯರು || ೨ ||

ಮೆರೆವ ಆಜ್ಞಾಚಕ್ರದೊಳು ನೆರೆ ನಿಂದು
ವರ ಮಹಾಲಿಂಗವೆಂಬಭಿಧಾನದಿ
ಇರುವ ವಿರಕ್ತ ಮಡಿವಳದೇವಯ್ಯಗೆ
ಪರಮಚಿತ್ಕಕ್ತಿಯೊಳೈದೆನಿಂದು || ೩ ||

❑ ❑

೨೩೭

ಜಯಮಂಗಳು ನಿತ್ಯ ಶುಭಮಂಗಳಂ
ಜಯತು ಲೀಲಾಖ್ಯದ ಮುರು[ಗಿ] ಚೆನ್ನಬಸವೇಶಗೆ
ಜಯಮಂಗಳಂ ...... || ಪಲ್ಲ ||

ಉತ್ತರದೊಳುದಿಸಿ ದಕ್ಷಿಣದೇಶಕೈತಂದು
ಮತ್ತೆ ಕಲ್ಯಾಣ ಬಸವನ ಭಕ್ತಿಯ
ಅರ್ತಿಯಿಂ ಸವಿದು ಗಂಗಾವತಿಯನೊಳಪೊಕ್ಕು
ಮತ್ತೆ ಮಾಹೇಶ್ವರರಿಗುಪದೇಶಿಸಿ || ೧ ||

ಬಂಕಿಪುರವನು ಹೊಕ್ಕು ಶಂಕರನ ನೆರೆ ನೋಡಿ
ಶಂಟೆಯಿಲ್ಲದೆ ಗಾಳಿಪೂಜೆ[ನಗ]ಗೈದಿ
ಸೋಂಕು ಸ್ವರುಷನಗೊಂಬ ಪ್ರಾಣಲಿಂಗಿಯ ನೋಡಿ
ಸೋಂಕಿ ಶ್ರವಣೂರ ಶರಣ[ಗೆ] ಬೋಧಿಸಿ. ॥ ೨ ॥

ನಡೆದು ಅಲ್ಲಿಂದ ತ್ರಿನದಿಯು ಕೂಡಿರುವ
ಸ್ಥಲ ಪೊಡವಿಗತ್ಯಧಿಕ ಸಂಗಮಕ್ಷೇತ್ರಕೆ
ಮೃಡಮೂರ್ತಿ ಸಂಗಮೇಶ್ವರನ ದರುಷನಗೊಂಡು
ಕಡುಹರುಷ ಶರಧಿಯೊಳಗೋಲಾಡುತ ॥ ೩ ॥

ಮೇಲುದೇಶವ ಪೊಕ್ಕು ಲೀಲಾವಿನೋದದಲಿ
ಸಾಲು ಸಾವಿರಕಂಬಮಂಟಪದೊಳು
ಶೂಲಿಯನು ಕಂಡು ಶಿಖೆಪಶ್ಚಿಮವ ನೆರೆ ನೋಡಿ
ಬಾಲಾರ್ಕಕೋಟಿ ಬೆಳಗಿನೊಳಾಳುತ ॥ ೪ ॥

ಈ ರೀತಿ ದೇಶವನು ಚರಿಸಿ ಬೆಟ್ಟದಪುರದಿ
ಮೂರುಬಣ್ಣದಮಠದಿ ನಿಜದಿ ನಿಂದು
ಧೀರ ಗುರು ವಿರಕ್ತನೆನಿಸಿ ಲೀಲಾಖ್ಯದ
ವೀರ ಮದ್ಗುರು ಚೆನ್ನಬಸವೇಶಗೆ
ಜಯಮಂಗಳಂ............ ॥ ೫ ॥

## ೨೩೮

## ಮಂಗಳಾರತಿ ಪದ

ಎತ್ತಿರಿ ಆರತಿ ಸತ್ಯ ಶರಣೆಯರೆಲ್ಲ
ಕರ್ತು ಲೀಲಾಖ್ಯದ ಮುರಿಗೇಂದ್ರಗೆ
ವಿಸ್ತಾರದಲಿ ನಿಂದು ವಿನಯವಾಕ್ಯಗಳಿಂದ
ಸತ್ಯ ಸದ್ಗುರು ಜಯಜಯಯೆನುತ
ಎತ್ತಿರ ಆರತಿ....... ॥ ಪಲ್ಲ ॥

ಚೆಲುವಪ್ಪ ಚೌದಳಕಧಿಪತಿ ನೀನೆಂದು
ಸಲೆ ಕ್ರಿಯಾಶಕ್ತಿಯೊಳೊಲಿದು ನಿಂದು

ಸಲಿಲಪುರದ ಷಡುದಳ ನಿರು[ಪಮ]ಲಿಂಗಕ್ಕೆ
ನಲಿವುತ ಶಕ್ತಿಯೊಳು ನಿಂದು ॥ ೧ ॥

ದಶದಳಪದ್ಮದೊಳೆಸೆವ ಶಿವಲಿಂಗವೆಂ–
ದೊಸೆದು ಇಚ್ಛಾಶಕ್ತಿ ತಾನೆ ನಿಂದು
ಕುಶಲದ ದ್ವಾದಶದಳ ಚರಲಿಂಗಕ್ಕೆ
ಬಿಸಜಾಕ್ಷಿ ಆದಿಶಕ್ತಿಯೊಳು ನಿಂದು ॥ ೨ ॥

ಎರಡೆಂಟುದಳದೊಳಗಿರುವಂಥ ಮೂರ್ತಿಯೆ
ಪರಮಪ್ರಸಾದಲಿಂಗವೆಯೆನುತ
ಪರಶಕ್ತಿಯರು ಬಂದು ಶರಿರವನೀಡಾಡಿ
ಕರಸಂಪುಟದಿ ನಿಂದು ॥ ೩ ॥

ಮತ್ತೆ ದ್ವಿದಳವಾಜ್ಞಾಚಕ್ರದೊಳಿರುತಿರ್ಪ
ಸತ್ಯಮೂರುತಿ ಮಹಲಿಂಗವೆಂದು
ಚಿತ್ಶಕ್ತಿ ತಾನೊಲಿದರ್ಥಿಯೊಳ್ ನೆರೆ ನಿಂದು
ಅರ್ತಿಯಿಂ ಪಾಡಿದಳು ಜಯಜಯಯೆನುತ ॥ ೪ ॥

ಶರಿರ ಪೃಥ್ವಿಯೊಳಿರ್ಪ ಶಿರಬೆಟ್ಟಪುರದೊಳು
ವರ ಮೂರುಬಣ್ಣದಮಠದೊಳಗೆ
ಇರುವ ವಿರಕ್ತ ಲೀಲಾಖ್ಯದ ಮುರಿಗೇಂದ್ರ
ಗುರುವೆ ಸಲಹು ಜಯಜಯವೆನುತ ॥ ೫ ॥

❑ ❑

೨೩೪

ಗಳಿಗೆ ಬಿಟ್ಟಿರಲಾರೆನೆ ಲಿಂಗೈಯ್ಯನ
ಗಳಿಗೆ ಬಿಟ್ಟಿರಲಾರೆನೆ
ಗಳಿಗೆ ಬಿಟ್ಟಿರಲಾರೆನೆ ನಳಿನಾಕ್ಷಿ ಬ್ಯಾಗನೆ
ಘಳಿಲನೆ ಕರತಾರೆ ಘನಮಹದೇವನ ॥ ಪಲ್ಲ ॥

ಮುಖಪ್ಯೆದುವುಳ್ಳಾತನ ಮುಖದೊಳು ನೇತ್ರ
ಮುಕ್ಕಣ್ಣ ಪರಶಿವನ

ಸಖಿಯರಿಗೊಲಿದ ಸಕಲಭೂತಾತ್ಮನ
ನಾ ಗಳಿಗೆ ಬಿಟ್ಟಿರಲಾರೆ ॥ ೧ ॥

ಸೂಕ್ಷ್ಮದೊಳಿರುವಾತನ ಸಾಕ್ಷಿಗೆ
ಸಾಕ್ಷಿ ಸಚರಾಚರದಿ[ಪ್ಪ] ಸು ಶಿವನ
ಅಕ್ಷರದೊಳು ಮೊದಲಕ್ಷರ ತಾನಾಗಿ
ಅಕ್ಷಿದ್ವಯಗಳಿಗೆ ಸಾಕ್ಷಿಯಾಗಿರುವನ ॥ ೨ ॥

ದಿನಕೋಟಿ ಪ್ರಭೆಯುಳ್ಳನ ಮನು
ಮುನಿ ಪ್ರಮಥರೊಳಗೆ ಮೆರವನ
ಜ್ಞಾನ ಸುಜ್ಞಾನ ಶೀಲದರಮನೆಯೊಳು
ಶೂನ್ಯಪೀಠದಿ [ನೆಲೆ]ಗೊಂಬ ದೇವ ವಿರೂಪಾಕ್ಷನ ॥ ೩ ॥

೨೪೦

ಜಯ ಜಯ ಶ್ರೀ ವಿರೂಪಾಕ್ಷ
ಜಯ ಜಯ ಯಕ್ಷಿಪಪಕ್ಷ ॥ ಪಲ್ಲ ॥

ಲಯಭಯರಹಿತ ಲಾಲನಸುಹಿತ
ದಯಗುಣಭರಿತ ಧನಪತಿಸುಹಿತ
ರಯಸುಖಧಾತ ರಸಿಕಪುನೀತ
ಕೈತವಘಾತಕ ನಾಕಸುರೇಶ ॥ ೧ ॥

ವಾರಿಜಭವಸಿರಪಾತ್ರ
ವಾರಣಾನನ ವಿದ್ಯಾಧಾತ್ರ
ತಾರಕರೂಪ ತನುಗುಣಲೋಪ
ವಾರಿತತಾಪ ವಸುನಗಚಾಪ
ಭೂರಿತ ಗೋಪ ಭುಜಗಕಲಾಪ
ದೂರಿತತಾಪ ಮಂತ್ರಾಲಾಪ ॥ ೨ ॥

ತಾವಕ ಸೇವಕ ದುರಿತ
ದಾವದಾವಾನಲ ಚರಿತ
ಭಾವಜವೈರಿ ಭವಸಂಹಾರಿ

[ಭೂ]ವರ ನದಿ ಮಹಿಮಾಧಾರಿ
ಜೀವ ಶರೀರಿ ಜಿತ ಸಂಸಾರಿ
xxವಪರಾರಿ ದಿಷ್ಕುೃತಸಾರಿ ॥ ೩ ॥

ಗೋಪಾಚಾಪ ಸುಮಾxxಪ
ತಾಪಸಹೃದಯ ದೀಪ
ಪಾಪವಿದೂರ ಪರಮ[ಗಂಭೀರ]
ಗೋಪಯಧರ ಗೋಸ್ಮೃತಿಹರ
ಜಾತಕಪೂರ ಜನದುದಾರ
ವ್ಯಾಪಕಧೀರ ವ್ಯೋಮವಿಹಾರ ॥ ೪ ॥

ಇನಕೋಟಿತೇಜಪ್ರಕಾಶ
ಘನ ನಿರಂಜನಲಿಂಗವೇಶ
ಜನಿಮೃತಿನಾಶ ಜಂಗಮವಾಸ
ಕನಕನಗೇಶ ಕಮಲಸಂಭೂಷ
ಮುನಿ[ಜನ] ಪೋಷ ಮುಕ್ತಿ ವಿದೇಹ
ಮನುಗುಣಕೋಶ ದ್ರುಹದಾಕಾಶ ॥ ೫ ॥

೨೪೧

ರಾಗ : ಆನಂದ ಭೈರವಿ

ಬಾರೊ ಬಾರೆನ್ನಯ ಕರಕೆ ಮೂರು
ಮೇರುಮಂದಿರವಾಸ ಭರಗುವೆ ಪದಕೆ ॥ ಪಲ್ಲ ॥

ಮೊದಲ ಪೂಜೆಯಸ್ಥಾನದಿಂದೆ ಬಾರ
ಒದವಿ ಮಜ್ಜನಕೆರೆವೆನು ಮುದದಿಂದೆ
ಮದನಾರಿ ವಸ್ತ್ರದಿಂ[ದೊರಸಿ] ತ್ಯಗ
ದುದಕಮಿಶ್ರಿತ ಭಸ್ಮ ಧರಿಪೆನು ತಂದೆ ॥ ೧ ॥

ಪಾದಾರ್ಘ್ಯ ಆಚಮಾನವನುಯಿತ್ತು
ಮೋದ ಗಂಧಾಕ್ಷತೆ ಪುಷ್ಪ ಧೂಪವನು
ಸದ್ಯೋ[ಜಾ]ತ ದೀಪಮರ್ಘ್ಯವನು ಸು [ನೈ]
ವೇದ್ಯ ವೀಟಿಕೆ ಆಚಮಾನ ಕೊಡುವೆನು ॥ ೨ ॥

ಕಮಲಪೀಠವನು ತಂದಿಡುವೆ ಸರ್ಪ
ನಮರೆಮಧ್ಯದೊಳ್ಮೂರ್ತಿ ಒಳಸಿರಕಿಡುವೆ
ವಿವಳೋಯುಗವ ? ಮುಸುಕಿಡುವೆ ಸತ್ಕು –
ಸುಮಮಾಲೆ ತುರಾಯ್ಗಳ ಸಿರಕಿಡುವೆ ॥ ೩ ॥

ಜಯ ಪುಷ್ಪಾಂಜಲಿಯನಿತ್ತು[ನು]ರಾಗಿಸಿ ಮರ್ದ
ಲೆಯವೆರ[ಸಿ] ನೃತ್ಯಾದಿಯ ಮಾಡತೊಡಗಿ [ವಿ]
ನಯ[ದಿ] ಭಕ್ತ ಮಾಹೇಶರೋಲಗಿಪರ–
ಭಯವರವೀಯಯ್ಯ ಕರುಣಾಮಯನಾಗಿ ॥ ೪ ॥

ಮೋಕ್ಷದ ರಾಜಪೂಜೆಯನು ಕೈಕೊ
ದಾಕ್ಷಾ[ಯಿ]ಣಿಯು ಸಹವಾಗಿ ಬಾ ನೀನು
ಈಕ್ಷಣ ತ್ರಯಾಕಾರವೆ[ಂದೇ]ನು ವಿರು
ಪಾಕ್ಷನೆನಿಪವಿಷ್ಟಲಿಂಗವೆ ನೀನು ॥ ೫ ॥

೨೪೨

ಶಿವದರುಷನ ನಮಗಾಯಿತು ನೋಡ್ವೆ
ಶಿವರಾತ್ರಿಯ ಜಾಗರಣೆಯಲಿ
ಭವಬಂಧನವು ಹಿಂಗಿ ಹೋಯಿತು
ಪಾರ್ವತಿಯ ರಮಣನ ಕರುಣದಲಿ ॥ ಪಲ್ಲ ॥

ಪಾತಾಳಗಂಗೆಯ ಸ್ನಾನವ ಮಾಡಲು
ಪಾತಕವೆಲ್ಲ ಪರಿಹಾರವ್ವೆ
ಶಿವಲಿಂಗಧ್ಯಾನವ ಮಾಡಲು ಜ್ಯೋತಿರ್ಮಯ
ಲಿಂಗ[ವ] ನೋಡಿದೆವ್ವೆ ॥ ೧ ॥

ಬೇಡಿದ ವರಗಳ ಕೊಡುವಂಥ ಭ್ರಮರಾಂಬಿಕೆಯನು
ಆಡುತ ಪಾಡುತ ಕೊಂಡಾಡಿದೆವ್ವೆ
ಬೆಳ್ಳಿಯ ಬಸವನ ಆನಂದದಿಂದಲಿ
ನೋಡಿದೆವ್ವೆ
ಶಿವದರುಷನ........ ॥ ೨ ॥

ಶಿಖರೇಶ್ವರ ಪರ್ವತ ಹತ್ತಿ ಶಿವ
ಸ್ಮರಣೆಯ ನಾವು ಮಾಡಿದೆವೈ
ಶಿಖರವ ಕಂಡೆವು ಭಾನು ತುಡುಕುವಂಥ ಶ್ರೀ
ವಿರೂಪಾಕ್ಷನ ಕರುಣದಲಿ
ಶಿವದರುಷನ .......... ॥ ೩ ॥



## ೨೪೩

ಶ್ರೀ ಶಂಭೋ ಸಂ ಭಜಾಮಿ ಹೇ ಸಾಂಬ ಸಂ ಭಜಾಮಿ
ಈಶ ಪೋಷಿಸೈ ಸದಯೆ ಸ್ವಾಮಿ ಭಜಾಮಿ ॥ ಪಲ್ಲ ॥

ನಿಲಕಂಠ ಶಿವ ಶೂಲಿದೇವಭವ
ಪಾಲಿಸೈಯ್ಯ ಸಂತ್ರಾಖ್ಯ ಪಾರ್ಥಿವ ಭಜಾಮಿ ॥ ೧ ॥

ಯಕ್ಷಗಡಾರ್ಚಿತ ರಕ್ಷ ಸಂ ಶಿಕ್ಷಿತ
ರಕ್ಷಿಸಯ್ಯ ನಿಗಮಾಗಮತೀತ ಭಜಾಮಿ ॥ ೨ ॥

ವೀರಪುರೇಂದ್ರ ವರ ಕಲ್ಲೇಂದ್ರ ಕರುಣಿಸಯ್ಯ
ಮೃಡ ಮೂಜಗದೇಂದ್ರ ಭಜಾಮಿ ॥ ೩ ॥



## ೨೪೪

ಮಂಗಳ ಮಂಗಳ ಜಯಮಂಗಳ ಸು–
ಸಂಗ ಸರ್ವಾಂಗ ಭಸಿತಲೇಪಗೆ
ಮಂಗಳ ಮಂಗಳ ಜಯಮಂಗಳ ॥ ಪಲ್ಲ ॥

ಮೊದಲು ಮುದ್ದಮ್ಮಾಜಿ ಸದಮಲರೂಪಂಗೆ
ಹೃದಯಕಮಲದ ಪಂಚಾರತಿಯ
ಅಧರ ಮಾಣಿಕದುಟಿ ಅರಸೆರೊಂದೈವರು
ಚದುರ ಚನ್ನಿಗ ಪ್ರಭುರಾಯನಿಗೆ ॥ ೧ ॥

ಬೆದುರೆ ಚೆನ್ನಮ್ಮಾಜಿಯಿ[ಂ]ದೆ ಪಂಚವಕ್ತ್ರಗೆ
ಹದನವರಿತು ಹವಳದಾರತಿಯ
ಒದಗು ಸಮುದ್ರವ ಸಿರದೊಳು ತಾಳ್ದಂಥ
ಮದನವೈರಿಯ ಪ್ರಭುರಾಯನಿಗೆ ॥ ೨ ॥

ಚಿಕ್ಕ ಮುದ್ದಮ್ಮಾಜಿ ಅಕ್ಕರದಿಂದಲಿ
ಚೊಕ್ಕ ಹವಳ ಮುತ್ತಿನಾರತಿಯ
ಸೊಕ್ಕು ಜನ್ವನೆಯರು ಮಕ್ಕಳ ಫಲಬೇಡಿ ವಿ
ರಕ್ತ ಶ್ರೀಗುರು ಪ್ರಭುರಾಯನಿಗೆ ॥ ೩ ॥

ಮಲ್ಲಮ್ಮ ಮೊದಲಾದ ನಾರಿಯರೆಲ್ಲರು
ಸಾರ ರತ್ನದ ಪಂಚಾರತಿಯ
ಕಾರುಣ್ಯನಿಧಿ ಪ್ರಭುಲಿಂಗ ನಿರಂಗಗೆ
ವಾರಿಜದಳನೇತ್ರಯರಾರತಿಯ ॥ ೪ ॥

ಅರಸು ಮುಮ್ಮಡಿರಾಜ ಹರುಷದಿಂದಲಿ ನೋಡಿ
ವರ ಕರ್ಪೂರದ ಪಂಚಾರತಿಯ
ಗಿರಿಸುತೆ ಅರಸ ಶಬರ ಪ್ರಭುರಾಯಗೆ
ಪರಿ ಪರಿ ರನ್ನದ ಆರತಿಯ ॥ ೫ ॥

ತರುಣಿ[ಯ]ರೆಲ್ಲರು ಮಾಡಿ ಕರವ ಮುಗಿದು ನಿಂದು
ವರಗಳು ಕೊಡಿರಂದು ಬೇಡುತಲಿ
ಪರಿಪರಿ ಹೊವಿನ ನ[ನೆ]ಗಳ ಧರಿಸುತ
ಪರಮಪಾವನ ಪರಬ್ರಹ್ಮನಿಗೆ ॥ ೬ ॥

ಧರೆಯೊಳು ಪುಂಗನೂರ ಹಿರಿಯಮಠದ ಚಲ್ವ
ಗುರು ಪ್ರಭುರಾಯ ನಿರ್ಮಾಯನಿಗೆ
ಮರಯದೆ ಜಯಸಿಂಗ ವೃ[ಷ]ಭಪುರ ಚೆನ್ನವೃಷಭಗೆ
ಪೊರೆದು ಪಾಲಿಪ ರಕ್ಷಾಮಣಿಗಳಿಗೆ ॥ ೭ ॥

 

೨೪೫

ಮುಟ್ಟದಿರಯ್ಯ ದಮ್ಮಯ್ಯ ಮುಗಿವೆ ನಿನಗೆ ಕಯ್ಯ –
ನಿಷ್ಟು ಛಲವೇತಕಯ್ಯ ಬೇಡ ದಮ್ಮಯ್ಯ ॥ ಪಲ್ಲ ॥

ನೆಟ್ಟನೆ ನಾಲ್ವರ ಮುಂದೆ ಬಟ್ಟಗಂಗಳೆ ಬಾರೆಂದು
ತಟ್ಟನೆ ಗಲ್ಲವ ಪಿಡಿದೆ
ಬಾಯೊಳು ಬಾಯನಿಕ್ಕಿ ಚುಂಬನವಗೈಯಿದೆ ಬೇಡವೆಂದರೆ
ದಿಟ್ಟತನದಲಿ ಬಂದು ಬಟ್ಟಕುಚವನೆ ಪಿಡಿದೆ ॥ ೧ ॥

ಸಾರತ್ತಲೆಂದರೆ ಹಂತೆ ಸೇರಿ ಕದ[ಪಿ]ನೊಳ –
ಗೂರಿ ಚೆಂದುಟಯನು ಮೀರಿ ಮೋಹನವನು
ತೋರಿ ಮುಂದುವರಿದು ಮೀರಿ ಹೀಗೆ
ಧಾರಿಣಿಯೊಳೆಲ್ಲರ ಮುಂದೆ ಸೆರಗೆಳದೆ ॥ ೨ ॥

ಶರಧಿನಾಮದಪುರದ ವರದಾನದಿಯ ತೀರದಲಿ
ಸರಸವಾಡಿ ಸಲಿಗೆಯೊಳೆನ್ನ ಮೋಹನ್ನ ರನ್ನನೆ
ಕಡುಜಾಣ ನಂಬಿದೆ ನಾ ನಿನ್ನ ಚೆನ್ನಕೆ ರನ್ನ ಬೆರದಂತೆ
ಪಾಲಿಸೊ ಲೇಸ ಮರೆಯಲಾರೆನೊ ಮಲ್ಲೇಶ ॥ ೩ ॥



೨೪೬

ಬಸವಯೆನ್ನಿ ಬಸವಯೆನ್ನಿ ಬಸವಯೆನ್ನಿರೊ
ಬಸವಯೆನಲು ಬಂಧಹಾರಿ ದೆಸೆಯ ಬಿಟ್ಟು ಹೋಗುವಾದು ॥ ಪಲ್ಲ ॥

ಸಾಲಬಾರದೊತ್ತಿನಾಗ
ಕಾಲದೂತರೆಳೆವುವಾಗ
ಬಾಳಬಗೆಯ ರೋಗವೊತ್ತಿ ಕಾಡುವಾಗಲು
ಕಾಲುಜಾರಿ ಬೀಳುವಾಗ
ಕೋಳು ಸಿಕ್ಕಿ ಹೋಗುವಾಗ
ಮಾಳಿಗೇಯು ಮುರಿದು ಮೇಲೆ ಬೀಳುವಾಗಲು ॥ ೧ ॥

ಶರಧಿಯಲ್ಲಿ ಮುಳುಗುವಾಗ
ಶರೀರಕುರಗ ಮುಟ್ಟುವಾಗ
ಹರಿಯು ಕರಿಯು ಬೆನ್ನನಟ್ಟಿ ಕೊಲ್ಲುವಾಗಲು
ದೊರೆಯು ಜುಲ್ಮ ಮಾಡುವಾಗ
ಮರತು ಮಾರ್ಗ ತಪ್ಪುವಾಗ
ದುರುಳ ಚೋರರುಗಳು ಕೊರಳ ಕೊಯ್ಯುವಾಗಲು ॥ ೨ ॥

ಅರ್ಥ ಪ್ರಾಣ [ಸ್ವಾ]ಭಿಮಾನ
ವ್ಯರ್ಥವಾಗಿ ಪೋಗುವಾಗ
ಕೀರ್ತಿ ಕುಂದು ನಿಂದೆಗಳ[ವು] ಬಂದು ತಾಕಲು
ಕರ್ತು ಗುರುವು ಕರುಣಿ ಶಾಂತ
ಕರಸ್ಥಲಧೀಶ್ವರನ ಮರದು
ಮರ್ತ್ಯ ವ್ಯರ್ಥವಾಗಿ ತೊಳಲಿ ಬಳಲಿ ಬ್ಯಾಡರಿ ॥ ೩ ॥



೨೪೭

ಆರೇನ ಮಾಡುವರು ನೀನೊಲಿಯದಿರುತಿರಲು
ಮಾರಮದಭಂಗ ಮದ್ಗುರು ಶಾಂತಲಿಂಗ ॥ ಪಲ್ಲ ॥

ಬಿತ್ತಿರ್ದ ಬೀಜಗಳ ಭೂಮಿ ನುಂಗಲು ರಾಜ
ಮತ್ತೆ [ಯ]ನುವಿನೊಳೊಕ್ಕಲನು ಕೆಡಿಸಲು
ಎತ್ತಿದಾಕಾಶ ಮುರಿದೊತ್ತಿ ಬೀಳಲು ಬಿಡದೆ
ಹೆತ್ತತಾಯಿ ಮೊಲೆವಾಲು ನಂಜಾದಡೆ ॥ ೧ ॥

ನಿಂದನೆಲನುರಿದೇಳೆ ಉಂಬನ್ನ ವಿಷವಾಗೆ
ಹೊಂದಿರ್ದ ಬೇಲಿ ಹೊಲನಂ ಮೇಯಲು
ಸಿಂಧುಗಳು ಮೇರೆದಪ್ಪಿಯು ಮೇಲೆ ಬಂದೊಡಂ
ಕಂದನಂ ಜನನಿ ಕೋಪಿಸಿ ಕೊಲ್ಲಲು ॥ ೨ ॥

ಅಟ್ಟಡಗಿಯನು ಮಡಕೆ ಬಿಡದೆ ಕದ್ದುಂಡಡಂ
ಕಟ್ಟಿರ್ದ ಏರಿ ನೀರಂ ಕುಡಿಯಲು

ಮುಟ್ಟಿ ಸಲಹುವ ಶಾಂತಕಂಬಾಳ ನೀ ಬಿಡಲು
ಕಟ್ಟಳೆಯ ಮಾಡಿ ಕೈವಿಡಿವರಿನ್ನುಂಟೆ ॥ ೩ ॥

 

೨೪೮

ಬೆಳಗುವೆ ಬೆಜ್ಯೋತಿಯ ಬೆಳಗುವೆ
ಬೆಳಗುವೆ ಕಳೆಗಳಚ್ಚಳಿಯದಗ್ಗಳ ಕೋಟಿ
ನಳಿನ ವೈರಾರ್ಯ ? ಮಾರಳವ ಮೀರಿದಗೆ
ಬೆಳಗುವೆ ಬೆಜ್ಯೋತಿಯ ಬೆಳಗುವೆ ॥ ಪಲ್ಲ ॥

ಒಂದು ಮೂರಾದವನಿಗೆ ಎರಡು
ಕುಂದದಚಲರಂಧ್ರಸ್ಥಳಗೆ
ಸಂದ ಬಿಂದು ನಾದಧ್ವನಕಲಗೆ ?
ನಿಂದು ಹೊಂದಿದಾನಂದ ನಿರ್ಮಲಗೆ
ಬಂಧು ನೀನೆಂದು ನೃಪೆಂದು ಹೊಂದಿದ ಸಾ–
ನಂದಗನುಗ್ರಹವಂದರುಹಿದಗೆ ॥ ೧ ॥

ತನುಗುಣಗಳು ಲಯವಾಗಿ ಎನ್ನ ಎನ್ನ
ಬಿನುಗುತೇಂದ್ರಿಯಂಗಳು ಹೋಗಿ
ಅನುದಿನ ಪಂಚೇಂದ್ರಿಯಗಳ ನೀಗಿ ಘನ
ಮನಮಾರುತನುಯೇಕವಾಗಿ
ನೆನವುತ ನವಭಕ್ತಿಗನುವಾಗಿ ಮನದೊಳು.
ತನುಕರಗಿಸಿದವನಧಿಪಗಭಯಗೆ ॥ ೨ ॥

ಈಡ ಪಿಂಗಳ ಮಧ್ಯದೊಳಗೆ ಸುಷು
ಮ್ನಾಡಿನಾಳದ ಕೊನೆಯೊಳಗೆ
ನಾಡೆ ಸೂಡಿದ ಮಹಾಜ್ಯೋತಿಯೊಳಗೆಯೊಡ–
ಗೂಡಿದ ಮೃಡರೂಪು ಬೆಳಗೆ
ನೋಡಿ ಪಶ್ಚಿಮದಳಗೂಡಿ ಪಶುಗಣ–
ವಾದೊಡೆಯ ಶಾಂತಮಲ್ಲರಡಿಗಳಿಗೆ ಬೆಳಗುವೆ ॥ ೩ ॥

### ೨೪೯

ಮೂಗುತಿ ಹೋಯಿತು ಮುನಿವರೇನಕ್ಕ
ಮೂಗುತಿ ಹೋಯಿತು ॥ ಪಲ್ಲ ॥

ಅಣಕವನಾಡುತ ಐವರನೆ ಕೂಡಿ
ಸೆಣಸುತ ನಾಲ್ವರ ಕೈವಿಡಿದು
ಮನಕಥನದಿಂದಲಿ ಆರುಮುಂದಿಯ ಕೂಡಿ
ಉಣಲಿಕು ಕೈಯ್ಯ ಮರೆದೆ ಕಾಣಕ್ಕ ॥ ೧ ॥

ಅಕ್ಕರದಿಂದಲಿ ಹತ್ತುಮಂದಿಯ ಕೂಡಿ
ನಕ್ಕರು ಕೆಲೆದರು ತಮತಮಗೆ.
ಮಕ್ಕಳಾಟಿಕೆಯನಾಡುವ ಹೊತ್ತಿಗೆ
ಇಕ್ಕುತಾರಲಿಕೈಯ್ಯ ಮರೆದೆ ಕಾಣಕ್ಕ ॥ ೨ ॥

ಅತ್ತೆ ಮಾರುದ್ದ ಅರಿವೆಯ ಕೊಡಲಾಗಿ
ಸುತ್ತೇಳು [ಕೇರಿಯರ]ದ ಸೆಳಕೊಂಡರು
ಚಿತ್ತದೊಲ್ಲಭ ಶಾಂತಮಲ್ಲೇಶನ ಕೂಡಿ
ಮುತ್ತೈದೆಯಾಗೆನ್ನನಿರಗೊಡರಕ್ಕ ॥ ೩ ॥

□ □

### ೨೫೦

ರಾಗ : ಧನ್ಯಾಸಿ

ಬದುಕಿದೆ ನಾನು ಬದುಕಿದೆ ಸತ್ಯ
ಸದಮಲದರುಹಿನ ಮೊದಲ ಲಿಂಗವ ಕಂಡು
ಬದುಕಿದೆ ನಾನು ಬದುಕಿದೆ ॥ ಪಲ್ಲ ॥

ಕರದಿಷ್ಟಲಿಂಗ ಕರಣಪ್ರಸಾದದಿ
ಅರುಹಿನ ಮಹಾಘನ ಪರಮಲಿಂಗವ ಕಂಡು ॥ ೧ ॥

ಸ್ಪಟಿಕದ ಘಟಿತ ಪರಮಪಾವನ ಪರಂಜ್ಯೋತಿಯ
ನಿಟಿಲಭ್ರೂಮಧ್ಯದಘಟಿತಲಿಂಗವ ಕಂಡು ॥ ೨ ॥

ಮಾನಸ ವಾಚಕ ಕಾಯಕ ಬಹಿರಂತ[ರ]ದಿ
ಸ್ವಾನುಭಾವದಿ ಸವಿದೊಲಿದಯ್ಯನ ಕಂಡು ॥ ೩ ॥

ಅತ್ಯತಿಷ್ಠರ್ದಶಾಂಗುಲದ ಪಶ್ಚಿಮದೊಳು
ನಿತ್ಯನೇಕೋದೇವನದ್ವಿತೀಯನ ಕಂಡು ॥ ೪ ॥

ಭ್ರಾಂತಿಯನಳಿದು ಪಶ್ಚಿಮದ ಮಂಟಪದಲಿ ಗುರು
ಮೂರ್ತಿ ಶಾಂತಲಿಂಗವ ಕಂಡು ॥ ೫ ॥

❑ ❑

## ೨೫೧

ಆರತಿ ಬೆಳಗಿರೆ ಪ್ರಮಥಗಣರಿಗೆ
ಮಾರಾರಿಯ ಕರುಣವ ತಾಳ್ದರಿಗೆ
ವೀರಶೈವ ಸುಬೋಧಾತ್ಮರಿಗೆ ॥ ಪಲ್ಲ ॥

ಶ್ರೀ ನಂದಿಗೆ ಶಿವಕರಗಕ್ಷಯಗೆ
ಆ ನಂದೀಶ್ವರ ವಿಕಟಾಂಕರಿಗೆ
ಭಾನುಕಂಪನೊ ಮಹಬ್ಬೈರವಗೆ ॥ ೧ ॥

ಕಾಕಪಾದ ಕಟಕಾಹಿ ಕಟಕಗೆ
ಕೋಕಿಲ ಕಿಂಕಿಣಿ ಘನ ಪಾಂಗರಿಗೆ
ಲೋಕ ವಿಜಯ ಸದ್ಯೋಜಾತರಿಗೆ ॥ ೨ ॥

ಸ್ಥೂಲ ಸೂಕ್ಷ್ಮ ಕಪಿಮುಖ ನರಮುಖಗೆ
ಸೂಲಿ ಸೋಮದತ್ತ ಸ್ವಯಂಜ್ಯೋತಿಗೆ
ಕಾಲದಹನ ಪುರ ಶಾಂತವೀರನಿಗೆ
ಆರತಿ ಬೆಳಗಿರಿ ಪ್ರಮಥಗಣರಿಗೆ ॥ ೩ ॥

❑ ❑

## ೨೫೨

ಮಾತೆ ಪೊರೆ ಗಿರಿಜಾತೆ ನೀನೆನ್ನ
ಜಾತಿ ಲಲನಾಜನ ಶಿರೋಮಣಿ
ನೂತನಾಮಳರೂಪಿಣೆ ॥ ಪಲ್ಲ ॥

ಕುಂದದತಿಶಯದಿಂದ ರಾಜಿಪ
ಮಂದಗಮನೆ ಮುಕುಂದ ವಂದಿತೆ
ಮಂದರಾಚಲ ಮಂದಿರೆ ॥ ೧ ॥

ಸೀಮಾರಹಿತೆ ಸುತ್ರಾಮ ಸೇವಿತೆ
ಕಾಮಹರ ಕಮನೀಯ ಶಂಕರ
ವಾಮಭಾಗ ವಿರಾಜಿತೆ ॥ ೨ ॥

ಬಿಂಬಾಧರೆ ನೆರೆ ನಂಬಿದೆ ನಾ ನಿನ್ನ
ಕಂಬುಕಂಧರೆ ಕಮಲಲೋಚನೆ
ತುಂಬೆಗುರುಳ ನಿತಂಬನಿ ॥ ೩ ॥

ಧೀರೆ ವರಗುಣಹಾರೆ ನಿರುಪಮ
ನೀರಜಾನನೆ ನಿಗಮ ಸನ್ನುತೆ
ಸೂರಿಜನ ಸುರವಲ್ಲರಿ ॥ ೪ ॥

ಶಾಂತಿವೀರ ನಿಶ್ಚಿಂತ ಕಾಂತನ
ಕಾಂತೆ ಕೋಕಿಲವಾಣಿ ಕರುಣೆಯ–
ನಂತರಸ ಪರಿಪೂರಿತೆ ॥ ೫ ॥

 

## ೨೫೩

ಎಂತು ಮಾಡಲೆನ್ನ ಪ್ರಿಯ ನುಡಿಸನಮ್ಮ ಪ್ರಾಣ–
ಕಾಂತ ನೋಡನೆನ್ನನೊಂದುಗೂಡಿ ॥ ಪಲ್ಲ ॥

ತನ್ನನರಿಯದತ್ತ ಮುನ್ನವೊಲಿದನಮ್ಮ ತಾನೆ
ಎನ್ನ ಕೈಗೆ ಬಾಯ್ಗೆ ಬಂದು ನಲಿದನಮ್ಮ
ತನ್ನ ಕುಱುಹುದೋಱಿ ಕೂಡಲೊ[ಲ್ಲ]ನಮ್ಮ ವೀರೆ
ಇನ್ನು ಮುನಿದು ವಾರೆ ದೂರಸಲ್ಲದಮ್ಮ ॥ ೧ ॥

ಆಸೆ ತನ್ನ ಮೇಲೆ ಬಹು ಹೆಚ್ಚಿತಮ್ಮ ತನ್ನ
ಲೇಸಿಗೆ ಎನ್ನಯ ಮನ ಮಚ್ಚಿತಮ್ಮ
ಭಾಷೆಗಾಱಿನೆನ್ನೊಳೇಕವಾದನಮ್ಮ ಈಗ
ವಾಸೆಪಂಥವೆಂಬುದಿನ್ನೇತಕಮ್ಮ ॥ ೨ ॥

ಹಿಂದು ಮುಂದು ಹುಟ್ಟು ಹೊಂದುಗೆಟ್ಟನಮ್ಮ ಎನ್ನ
ಬಂಧು ಬಳಗವನೆಲ್ಲ ಬಿಟ್ಟೆನಮ್ಮ
ಒಂದೆ ಹಳೆಯುರುವೆಯನುಟ್ಟೆನಮ್ಮ ಇಷ್ಟ-
ರಿಂದ ಬಿಡದೆ ತನಗೆ ಮಸವನಿಟ್ಟನಮ್ಮ ॥ ೩ ॥

ಒಂದು ಮೂಱು ಆಱು ಬಗೆದೋಱಿದನಮ್ಮ ಅದ
ರಿಂದಲಿ ಮೂವತ್ತಾಱನು ಬೀಱಿದನಮ್ಮ
ಮುಂದೆ ಇನ್ನೂಱಹದಿನಾಱ ಸಾರಿದನಮ್ಮ
ಇಂದು ಒಂದು ಮೂಱನಾಡಿ ಹತ್ತೆ ಸೇರಿದನಮ್ಮ ॥ ೪ ॥

ಆಱುಮೂಱು ಮನೆಗೆ ಒಕ್ಕಲಾದೆನಮ್ಮ ಎನ್ನ
ದೂಱಕೇಳಿ ತಾನೆ ಕರದು ನೆರದನಮ್ಮ
ಬೇಱದೋಱದೊಂದುಗೂಡಿ ಪೊರದನಮ್ಮ ಶಾಂತ
ವೀರದೇವನಲ್ಲದನ್ಯರನೊಲ್ಲೆನಮ್ಮ ॥ ೫ ॥

□ □

## ೨೫೪

ಮುರಿಗಿಸ್ವಾಮಿ ನಿರೂಪಿಸಿದ ವಚನ
ಎನ್ನೊಡಯನೆ ಶರಣು ಶರಣ್ಯಯ್ಯ
ಶರಣು ಶಾಂತವೀರಲಿಂಗ ಶುಭಾಂಗ ॥ ಪಲ್ಲ ॥

ಮರಣರಹಿತ ಮೇರುಚಾಪ ಮಹದೇವ
ಎನ್ನೊಡೆಯನೆ ಶರಣು ಶರಣ್ಯಯ್ಯ
ಶರಣು ಮಾನಸರಂಗಮಂಟಪ

ಸರಸ ನಿರುಪಮ ನಟಣ ಸೌ
ದರ ತದಿಂಗರ್ಕಡತಕಿಟದದಿಗಿಣತ್ತೈ
ನತ ಪುರಂದರ ಜಿತಪುರತ್ರಯ
ಚತುರ ಮುನಿಗಣಪೂಜಿತಾಮಳ ತ ದಿಂ ॥ ೧ ॥

ನಿಗಮಾಳಿ[ಗ]ಗೋಚರ ಸೊಗಸಿನ ಮಿಗಗೈಯ್ಯ
ಝುಗಝುಗಿಪೆಳ್ದೆರೆದಾಳ್ದನೆ
ಭಗಣಧನರ್ಜರ ಸೇವಿತ ಶಂಕರ
ರಂಜಿತ ಗಗನಕುಂತಳ ಸುಗುಣ ಮಂಡಲ
ಸುಜನಪಾಲನ ತ ದಿಂ ॥ ೨ ॥

ಹರಿವಿಧಿ ನಿರ್ಜರ ಸೇವಿತ ಶಂಕರ
ಪರಮಪಾವನ ಇಷ್ಟಲಿಂಗ ನಿರಂಗ
ಗರಳಕಂ[ಧರ] ದುರಿತ ವಿನಾಶನ
ದುರುಳ ಕರಟಿಯ ಧನುಜ ಭಂಜನ
ತರ್ದಿಕಟದದಿಗಿಣತ್ತೈಯ್ಯ
ಎನ್ನೊಡಯನೆ ಶರಣು ಶರಣೈಯ್ಯ ॥ ೩ ॥



೨೫೫

ವರ ವೇದಾಗಮ ವಂದಿತೆ ವಾರಿಜಗಂಧಿ
ಪೊರೆ ಗಿರಿರಾಜನಂದನೆ
ಗುರುಕುಚೆ ಗಾನವಿಲೋಲೆ ಗುಣಾಕರೆ
ಸರಸಿಜಲೋಚನೆ ಪತಿಕುಲರನ್ನೆ ॥ ಪಲ್ಲ ॥

ಮದಗಜವರಗಾಮಿನಿ ಮಂದಹಾಸಿನಿ
ಸುದತಿ ನಿಕರ ಸೇವಿತೆ
ಮುದದೊಳೆಸೆವ ಶಶಿವದನೆ ದಯಾಕರೆ
ಚದುರೆ ಸರಸ ಮೃದುವಾಣಿ ಕಲ್ಯಾಣಿ ॥ ೧ ॥

ಸನ್ನುತ ಘನನಾಯಕಿ ಸತ್ಯಕೀರ್ತಿ ಸಂ–
ಪನ್ನೆ ಪುಣ್ಯಪ್ರಕಾಶದ

ಕನ್ನೆ ವಿರಾಜಿಪರನ್ನದುಟಿಯ ವರ
ಪನ್ನಗವೇಣಿ ಪಾವನತರ ರೂಪೆ ॥ ೨ ॥

ವಾರಣರಿಪುವಾಹನೆ ವಿಮಳೆ ವಿಶ್ವಾ-
ಧರೆ ಶಾಂತವೀರೇಶನ
ನೀರೆ ನಿಜಪದವತಾರೆ ಮಂಜುಲಮಣಿ
ಹಾರೆ ಸಕಲಭಯ ದೂರೆ ಗಂಭೀರೆ ॥ ೩ ॥

☐ ☐

೨೫೩

ಜ್ಞಾನಿ ತ್ರೈಲೋಕ್ಯ ದುರ್ಲಭವು
ಹಾನಿ ಜನರೆಲ್ಲ ವೇಷವ ತಾಳಲಹುದೇ ॥ ಪಲ್ಲ ॥

ಜ್ಞಾನಶೂನ್ಯರು ಮಗ್ನವಾಗಿ ವಿಷಯಾಸೆಯಲಿ
ನಾನಾ ವೇಷವತಾಳಿ ಮೆರವುತಿಹರು
ಹಾನಿ ಬಹುದ ಕಣ್ಣಗಾಣರೀ ಗಾವಿಲರು
ಮಾನುವರು ಮರದು ಕೆಡುತಿಹರಯ್ಯಯ್ಯೋ ॥ ೧ ॥

ಸಾಕಾರವ ಭಜಿಸಿ ಸತ್ಯವಿದೆಂಬ ಮರುಳರು
ಶೋಕ ಮೋಹಾದಿ ಜರೆ ಸು ಮರಣದೊಳು
ನೀಕರಿಸಿ ನಿತ್ಯವಸ್ತುವ ತಿಳಿಯದನಕ ಈ
ಕಾಕು ಮಾನವರಿಗಿನ್ಯಾಕೆ ಮುಕ್ತಿ ॥ ೨ ॥

ಕುರಿಮನುಜರಲ್ಲದೆ ವರ ಭಕ್ತರಾದರೀ
ಪರಿಭವವಿಲ್ಲ ಉಳುವಿಲ್ಲವಯ್ಯೋ
ಬರಿಯ ವೇಷವ ತಾಳಿ ಉದರಾರ್ಥ ಚರಿಸುವರು
ಪರಮ ಗುರು ಶಿವಕುಮಾರನ ತಿಳಿಯದೆ ॥ ೩ ॥

೨೫೭

ವಿರಕ್ತರೆಂಬುವರ ವಿವರಿಸಲು ದುರ್ಲಭವೊ
ಹೊರವೇಷಡಂಬಕರು ವಿರಕ್ತರೆ ? ॥ ಪಲ್ಲ ॥

ಮೂರುಮಲ ಮೂರುಗುಣ ಮೂರವಸ್ಥೆಯ ಮೀರಿ
ಮೂರುಲಿಂಗವನ್ನೈಕ್ಯಮಾಡಿಕೊಂಡು
ಬೇರೆ ತೋರದ ತೂರ್ಯ ಜಂಗಮವೆ ತಾನಾಗಿ
ತೋರಿ ತೋರದವಸ್ತು ವಿರಕ್ತನು ॥ ೧ ॥

ಕ್ಷುಧೆ ತೃಷೆಯು ವಿಷಯ ವ್ಯಸನಕೆ ವೇಷಧಾರಿಗಳು
ಆದ ಮನುಜರು ಸ್ಥಲದ ಹೆಸರ ಹೇಳಿ ಕುದಿದು
ಕೋಟಲೆಗೊಂಡು ತಾವು ವಿಷಯಕೆ ಸಿಕ್ಕಿ
ಹೋದವರು ಪ್ರಳಯದೊಳು ವಿರಕ್ತರೆ ? ॥ ೨ ॥

ತೊತ್ತು ಜಾರೆಯರ ವಿಷ[ಯ]ಕೆ ಸಿಕ್ಕಿಯವರಿಂಗೆ
ಮಿಥ್ಯಶೀಲವ ಕಟ್ಟಿ ವ್ರತವ ಹೇಳಿ
ಹತ್ತಗರದಪ್ಪೋ ಗಲ್ಲವ ಹಿಡಿದು ಮುಂಡಾ[ಡುವ]
ಜುತ್ತಿಗಳ್ಳರಿವರು ವಿರಕ್ತರೆ ? ॥ ೩ ॥

ಕಾವ್ಯ ವ್ಯಾಕರಣ ತರ್ಕವನೋದಿ ಹಿರಿಯರಂ–
ದೀ ವ್ಯವಹಾರದಲ್ಲಿ ಪದ ಬೋಧಿಸಿ
ಚಿತ್ತಲಂಪಟದಿಂದ ಸುಜ್ಞಾನ ಮರದವರು
ಹವ್ವಳಿಸಿ ಹಲಬುವರು ವಿರಕ್ತರೆ ? ॥ ೪ ॥

ಮಿಥ್ಯಜ್ಞಾನವ ಹೇಳಿ ಸತ್ಯ ಜ್ಞಾನ ಮರವುತಿಹ
ತೊತ್ತು ಬಡಿಕರು ತಮ್ಮ ನಿಜವರಿಯದೆ
ಇತ್ತಭವದೊಳು ಬಿದ್ದು ನೆಲೆಗಾಣರೆಂದೆಂದು
ಸತ್ಯ ಶಿವಗುರುಕುಮಾರನ ಕಾಣದೆ ॥ ೫ ॥

❑ ❑

## ೨೫೮

ರಾಗ: ತೋಡಿ

ಕಂಡೆನಮ್ಮ ಕರಪೀಠದೊಳಖಂಡ ಜ್ಯೋತಿಯನು
ತಂಡದ ಕರಣಗಳಂಡಲೆಯನು ಸುಟ್ಟು

ಪಿಂಡದ ಚೇತನವೆನಿಪ ಚಿದಗ್ನಿಯ
ಮಂಡಲತ್ರಯಗಳ ಮೀರಿ ಮೀರಿ ತ್ರಿಕೂಟದ–
ಖಂಡಿತವೆರಡೊಂದಾದ ಲಿಂಗವನು ॥ ಪಲ್ಲ ॥

ಕಾಯವೆನಿಪ ಕಾಶಿಯೊಳು ನಿರ್ಮಾಯಲಿಂಗವನು
ಸಾಯದ ಪೂಜೆಯ ನಡಸುವ ನಿತ್ಯದಿ ಮೋಹೋ–
ಪಾಯಗಳೆನಿಸುವ ಸೌಜ್ಞೆಯ
ನಾಯಕನೆನಿಪ ಚಿದ ಚಂದ್ರೋದಯ
ಮಾಯಾರಹಿತ ಮಹಲಿಂಗ ಘನಲಿಂಗವನು ॥ ೧ ॥

ಚಂದ್ರೋದಯದ ಚಲುವಿನೊಳೆ ಸದಾನಂದ ರೂಪವನು
ಹೊಂದಿದ ಪ್ರಭೆ ತಾನೆಂದೆನಿಸುತ ಮನ
ಒಂದೆರಡೇಕವು ವಾಚಕ ಮಾನಸ
ಸಂಧಿಸಿ ನಿಜವೆಂದೆನಿಸುವ ಭಕ್ತರ
ಬಂಧು ಪರಶಿವ ಚಂದ್ರಶೇಖರನ ॥ ೨ ॥

ಮೀಟೆನಿಸುವ ಮಿಂಚಿನ ಬೆಳಗು ಲಲಾಟ ನೇತ್ರಗಳು
ಕೂಟದ ಸಮರಸವಾಗಿಹ ಶಾಂತನ
ಬೇಟದಿ ಬೆರದಿಹ ನಿಟಿಲಾರೂಢನ
ಮಾಟದ ಚೇತನದಿಂದೊದಗಿದ ನಿಜ
ದಾಟ[ವ] ಪರ[ಮ]ಶಿವಲಿಂಗದ ನೆಲೆಯ ॥ ೩ ॥

೨೫೪

ಎತ್ತುವೆನಾರತಿಯ ಸಿದ್ಧೇಶನಿಗೆತ್ತುವೆನಾರತಿಯ
ಮೃತ್ಯುಂಜಯಗೆತ್ತುವೆನಾರತಿಯ ॥ ಪಲ್ಲ ॥

ಎತ್ತುವೆನಾರತಿ ಅರ್ತಿಲಿ ಬೆಳಗುವೆ
ಕರ್ತೃ ಶ್ರೀ ಗುರುವಿಗೆ ॥ ಅ. ಪಲ್ಲ ॥

ಕಾಮನ ಸಂಹರ ನಾಮ ಕೃಪಾಕರ
ಸ್ವಾಮಿ ಜಗತ್ರಯಪ್ರೇಮಿ ಮಹೇಶನಿಗೆತ್ತುವೆ ॥ ೧ ॥

ಕಾರಣಕ್ಕೈದಿ ಕರದಿ ನಿಂದು ತೋರುವ
ಸಾರ ಸದಾಶಿವ ವೀರ ಸಿದ್ಧೇಶನಿಗೆತ್ತುವೆ || ೨ ||

ಸಂಗನ ಶರಣರ ಇಂಗಿತ ಬಲ್ಲ
ಗಂಗಾಧರ ಶಿವಲಿಂಗಮಹೇಶನಿಗೆತ್ತುವೆನಾರತಿಯ || ೩ ||

೨೬೦

ಲಿಂಗಯ್ಯ ನಿಮ್ಮ ನಂಬಿ ನಾ ಬಂದೆ
ಲಿಂಗವೆ ನಿಮ್ಮ ನಂಬಿ ನಾ ಬಂದೆ
ಅಂಗಸಂಗವ ಹಿಂಗಿ ಲಿಂಗಸಂಗಿಗಳಾದ
ಸಂಗನ ಶರಣರುಂಟೆಂದರೆ ಬಂದೆ || ಪಲ್ಲ ||

ಆಚಾರವೆ ಪ್ರಾಣವಾಗಿ ಲಿಂಗವೆ ನಿಮ್ಮ-
ನಾಚರಿಸುವರುಂಟೆಂದರೆ ಬಂದೆ
ನೀಚವೃತ್ತಿಗಳಿಂದ ಒಡಲಹೊರವುತಿರ್ಪ
ಕೂಚಿಮೂಳರುಂಟೆಂದರ ಬಹೆನೆ ? || ೧ ||

ಮರ್ತ್ಯದೊಳಗೆ ಶಿವಭಕ್ತರುಂಟೆಂದರೆ
ಅತ್ಯಂತ ಹರುಷದಿಂದಲಿ ನಾ ಬಂದೆ
ತಥ್ಯಮಿಥ್ಯವ ಮಾಡಿ ಪರರ ಕೆಡಿಸುವಂಥ
ಕತ್ತೆಮೂಳರುಂಟೆಂದರ ಬಹೆನೆ ? || ೨ ||

ಗುರುಲಿಂಗಜಂಗಮದಿರವ ಕೊಂಡಾಡುವ
ಪರಮಭಕ್ತರುಂಟೆಂದರೆ ಬಂದೆ
ಹರನಿಂದ್ಯ ಗುರುನಿಂದ್ಯ ಚರನಿಂದ್ಯ ಮಾಡುವ
ದುರುಳನೀಚರುಂಟೆಂದರೆ ಬಹೆನೆ ? || ೩ ||

ಅಚ್ಚ ಪ್ರಸಾದವನೆ ನೆಚ್ಚಿ ಮೆಚ್ಚಿ ಮನ
ವೆಚ್ಚತ್ತು ಹೋದರುಂಟೆಂದರೆ ಬಂದೆ
ಇಚ್ಛೆಗೆ ಹರಿದಾಡುತಿಹ ಕರಣಂಗಳ
ತುಚ್ಛಕಮನುಜರುಂಟೆಂದರೆ ಬಹೆನೆ ? || ೪ ||

ಎನ್ನ ನಂಬು ನಂಬು ಎನ್ನ ನಚ್ಚು ನಚ್ಚು
ಅನ್ನಯವಿಲ್ಲವೆಂದರೆ ನಾನು ಬಂದೆ
ಗನ್ನ ಘಾತಕ ಮಾಡಿ ಕೊಲ್ಲುವರೇನೊ
ಮುನ್ನವೆ ಬಾರೊ ಶ್ರೀಗಿರಿ ಚೆನ್ನಮಲ್ಲ ॥ ೫ ॥

೨೬೧

ಮಂಗಳಾರ್ತಿ ಪದನು
ಮಂಗಳಂ ಮಹಮೇರುಮಂದಿರ ನಿಲಯನಿಗೆ ॥ ಪಲ್ಲ ॥

ಮಂಗಳಂ ಮಣಿಖಚಿತ ಮೊಗುಟಧರಗೆ
ಮಂಗಳಂ ತುಂಗಜಟ ಗಂಗಾಧರೇಶ್ವರಗೆ
ಮಂಗಳಂ ಶ್ರೀ ಗಿರಿಯಮಲ್ಲೇಶಗೆ ಜಯ
ಮಂಗಳಂ ನಿತ್ಯ ಶುಭಮಂಗಳಂ ॥ ೧ ॥

ಶ್ರೀ ಗಿರಿಜಾರಮಣನಿಗೆ ಸಿಖಿನೇತ್ರವುಳ್ಳವಗೆ
ನಾಗಾರಿಗಮನನಯನಾರ್ಚಿತನಿಗೆ
ನಾಗರಕುಂಡಲಧರಗೆ ನಾಗಚರ್ಮಾಂಬರಗೆ
ನಾಗ ಸಿಂಜಿನಿಯುಳ್ಳ ನಗಚಾಪಗೆ ॥ ೨ ॥

ಭಕ್ತಜನರಕ್ಷ ಪದ [ಯು]ಕ್ತಿ ಚಿಂತಾಮಣಿಗೆ
ಭಕ್ತ ವತ್ಸಲ ಭವಭವದೂರಗೆ
ಮುಕ್ತಿಪದವರ್ತಿ ಜಂಗ[ಮ]ದರ್ತಿ ನಿಮ್ಮಯ
ಕೀರ್ತಿ ಕರ್ತು ಶ್ರೀ ಗಿರಿ ಚೆನ್ನಮಲ್ಲೇಶಗೆ ॥ ೩ ॥

ಸಿಂಧುಮಥನದಿ ಅಮರವೃಂದವನು ಸಲಹಿದಗೆ
ಇಂದ್ರಾದಿ ಮನುಮುನಿ ವಂದಿತನಿಗೆ
ಸಂದಿಲ್ಲವಹ ಪ್ರಮಥವೃಂದ ಪೂಜಿತಪಾದ
ಗಂಧರ್ವನಮಿತ ಶ್ರೀ ಚಂದ್ರಧರಗೆ ॥ ೪ ॥

ಧರೆಗೆ ಶ್ರೀ ಕೈಲಾಸಪುರಿಯೆನಿಪ ಶ್ರೀ ಗಿರಿಯ
ವರಪುಣ್ಯನೆಲೆವಾಸ ಪರಮೇಶಗೆ

ಗುರು ಚೆನ್ನ ವರ ಚೆನ್ನ ಪರಮಪಾವನಲಿಂಗ
ಶರಣ ಶ್ರೀ ಗಿರಿ ಚೆನ್ನಮಲ್ಲೇಶಗೆ
ಜಯಮಂಗಳಂ ನಿತ್ಯ ಶುಭಮಂಗಳಂ || ೫ ||

### ೨೬೨

ಮಾತಾಡಲೊಲ್ಲ ಇದೇತರ ಮುನಿಸ ನ–
ಮ್ಮಾತನ ಕರಸಿ ನೀನಿನಿತ ಹೇಳಮ್ಮಯ್ಯ || ಪಲ್ಲ ||

ಹಾಸುಮಂಚದೊಳು ಅಗಿಲು ಗಂಧ ಪೂಸು ಬಾರೆಂದ
ಮಾಸಿದುಡುಗೆ ಬಿಟ್ಟು ಲೇಸದೇನೆಂದರೆ || ೧ ||

ಖಳೆಂದೆನಮ್ಮ ಈ ಮಾತಿಗೆ ತಾನೇಕೆ ಹೋದ
ಭಾನುಪ್ರಕಾಶದ ಖಣಾಕ್ಷಿ ಆತನ
ಪ್ರಾಣಪದಕವಮಾಡಿ ನಾನಪ್ಪಿಕೊಂಡರೆ || ೨ ||

ಹೆಣ್ಣಿನ ಕೂಡ ಇವೇತಕೆ ಎನ್ನ ಮೋಹನ
ಸನ್ನೆಯದೋರಿ ಪ್ರಸನ್ನನಾದನು ಮುದ್ದು
ಚೆನ್ನಿಗ ಶ್ರೀಗಿರಿ ಚೆನ್ನಮಲ್ಲೇಶನು || ೩ ||

 

### ೨೬೩

ಮಂಗಲವೆನ್ನಿರೆ ಮಾನಿನಿಯರೆಲ್ಲರು
ಕಂಗಳು ಮೂರುಳ್ಳ ದೇವನಿಗೆ || ಪಲ್ಲ ||

ಭಾರತಿ ಸರಸ್ವತಿ ವಾರುಣಿ
ಪಾರ್ವತಿ ದೇವತರೆಲ್ಲರು ದೇವನಿಗೆ
ತಾರಕೆಯುಂದದಿ ನಾರಿಯರು ಗೂಡಿ
ಆರತಿ ಬೆಳಗಿರೆ ಧೀರನಿಗೆ || ೧ ||

ಮಂಗಳಾಂಗಿಯರೆಲ್ಲ ಶೃಂಗಾರದಿಂದಲಿ
ತೆಂಗು ಹಲಸು ಬಾಳೆಯಗೊನಿಯ
ರಂಗಮಾಣಿಕದಕ್ಷತೆಯನು ಕರದಲಿ
ಗಂಗೆಯರಮಣನಿಗೆ ಅಂಗನೆಯರು ಜಯ ॥ ೨ ॥

ಸುರವರ ಶ್ರೀಪುರ ದೊರೆ ಸಿದ್ಧಲಿಂಗಗೆ-
ಯುರುತರದಾರತಿ ತವಕದಲಿ
ನಿರುತಲಿ ಭಜನಿಯ ಪಾಡುತ ಹರುಷದಿ
ಸ್ಮರಹರನಿಗೆ ಜ್ಯೋತಿಯ ಬೆಳಗುತಲಿ ॥ ೩ ॥

❑ ❑

೨೬೪

ಬೆಳಗುತಿದೆ ಪ್ರಭೆ ಬೆಳಗುತಿದೆ ॥ ಪಲ್ಲ ॥

ಆದಿಯನಾದಿಯ ಮಧ್ಯದೊಳು
ನಾದ ಬಿಂದುಗಳ ಸಮೂಹದೊಳು
ಮೇದಿನಿ ಮೇಲಣ ಚಕ್ರಾಬ್ಜಗಳೊಳು
ಸಾಧಿಸುವ ತಾರಕಬ್ರಹ್ಮದೊಳು ॥ ೧ ॥

ಮಸ್ತಕಬ್ರಹ್ಮಾದ್ಯಂತ್ಯದೊಳು
ಅಸ್ತಮಯವನಾಕ್ಷಣದೊಳು ಪರಿಸುವ
ಸ್ವ ಸ್ವ ಮಹಾಘನ ಬೆಳಗಿನೊಳು ॥ ೨ ॥

ನೀಲಗಿರಿಯ ಕೋಣೆ ಮಧ್ಯದೊಳು
ಲೋಲ ಪ್ರ[ಣ]ವ ಹಕಾರದೊಳು
ಬಾಲಮರಾಳನ ರೂಪವ ತೋರಿದ
ಕಾಲಸಂಹರ ಶ್ರೀರುದ್ರನೊಳು ॥ ೩ ॥

❑ ❑

೨೬೫

ನಿತ್ಯವಲ್ಲವೊ ಕಾಯ ನಿತ್ಯವಲ್ಲವೊ
ನಿತ್ಯವೆಂದು ನಂಬಬೇಡ ಮೃತ್ಯು ಕಾಯ್ದುಕೊಂಡಿಹುದೊ ॥ ಪಲ್ಲ ॥

ವಾರಿಸಿರಿಯು ಕಂಗಳಿಂಗೆ
ತೋರಿಯಡಗುತಿರ್ಪ ತೆರದಿ
ಧಾರುಣೀಯ ಭೋಗವೆಲ್ಲ
ತೋರಿ ನಿಮುಷ ನಿಲ್ಲಲರಿದು ॥ ೧ ॥

ಸೂಳೆ ತನ್ನಪ್ರೀತಿಯಿಂದ
ಬಾಳುತಿರ್ಪ ತೆ[ರದಿ] ಜಗದಿ
ಕಾಲಕಳೆದು ಹೋಗುತಿಹುದು
ಗಾಳಿಗಿಟ್ಟ ಸೊಡರಿನಂತೆ ॥ ೨ ॥

ಪಿಸಿತ ಚರ್ಮವಸ್ತ್ರಯಿಂದ
ಮಿಸುನಿವಣ್ಣದಂಥ ಗಾತ್ರ-
ದಸುವು ತೊಲಗಲಂತ್ಯದಲ್ಲಿ
ಮಸಣದೊಳಗೆ ಮಡಗುತಿಹರು ॥ ೩ ॥

ದುರುತಪಥವ ಬಿಡಿಸಿ ಮುಕ್ತಿ
ಸರಣಿಯನ್ನು ಬಿಡಿಸಿ ಕೊನೆಗೆ
ನಿರಯಕೂಪದೊಳಗೆ ಸತತ-
ವಿರಿಸಿ ಪೋಪುದೆಂದು ತಿಳಿಯೊ ॥ ೪ ॥

ಧರೆಯೊಳಧಿಕ ಶ್ವೇತನೀಲ-
ಗಿರಿಯ ಸಿದ್ಧಲಿಂಗನಂಘ್ರಿ
ಸರಸಿರುಹವ ಚಿತ್ತದಲ್ಲಿ
ಸ್ಮರಸಿ ರಸನೆಯಿಂದ ಪಾಡಿರೊ ॥ ೫ ॥

❑ ❑

೨೬೬

ಯಾವದೇಶದ ಗೆಳೆಯ ಬಂದು ಏನು ಮೋಜುಮಾಡಿ
ಬೆಲ್ಲದಂತಹ ಮಾತನಾಡಿ ಬೆಳಗು ಮುಂಜಾನೆ [ಪೋದ] ॥ ಪಲ್ಲ ॥

ಆರುವರ್ಣದ ಕುದುರೆಯೆನುತಲಿ ಏರಿಕೊಂಡು ಗಮಿಸಿದ
ಆರುಬಾಗಿಲ ದಾಂಟ ಆಚೆ[ಸ್ವಾ]ರಿಮಾಡಿ ನಿಲಿಸಿದ ॥ ೧ ॥

ಸುಮನವೆಂಬ ಕಮಚಿಯ ಪಿಡಿದು ಗಮಕದಿಂದಲಿ ಕುಣಿಸಿದ
ಕಮಲಸಾಸಿರಮಧ್ಯದೊಳಗೆ ನಿರ್ಮಲ ಹಯವನು ನಿಲಿಸಿದ ॥ ೨ ॥

ದೇಹವೆಂಬ ಬಯಲ ನೋಡಿ ಠಾವು ಮಾಡಿ ನಿಲಿಸಿದ
ಸಾವು ಹುಟ್ಟೆರಡಿಲ್ಲವೆನುತಲಿ ಕಾಯಕಿದು ಕಡೆಯೆನಿಸಿದ ॥ ೩ ॥

ಸದುನಾಮದ ಸಂಗಮಸ್ಥಳ ನದಿಯ ದಾರಿಯ ಹಿಡಿಸಿದ
ಮುದದಿ ಮನವೆರದಾಗ[ಲೆ]ಳೆಮರಿ ಕುದುರೆಗದುವ ಕುಡಿಸಿದ ॥ ೪ ॥

ಸತ್ತು ಹೋಗುವ ಅಂಗ ಕುದುರೆಯ ಕದ್ದ ಕಳ್ಳನ ಹಿಡಿಸಿದ
ಸದ್ದು ಅಡಗದೆ ಹಾಗೆ ಸಗರದ ಸಿದ್ಧಲಿಂಗನ ಒಲಿಸಿದ ॥ ೫ ॥

❑ ❑

೨೩೮

ನೋಡೋ ಸದ್ಗುರುವನು ಮರತಿರಬ್ಯಾಡೋ ಕಡೆಯಿ–
ಲ್ಲದೀ ಭವಕಡಲೊಳು ಮುಳುಗಿಹ
ಕೋಡಗನೊಲ್ಕುಣಿದಾಡಲಿ ಬ್ಯಾಡೋ ॥ ಪಲ್ಲ ॥

ಹುಟ್ಟಿ ನಿನಗಿರುವುದೆಲ್ಲ ಗೇಣು ಹೊಟ್ಟಿ ಈ ಆಶೆಗ್ಯಾಕೆ ಮೈ
ಗೊಟ್ಟಿ ಏನನ್ನು ಘಳಿಸಿ ನೀನಿಟ್ಟಿ ಬೆನ್ಹತ್ತಿ ಬಿಡದು ಈ
ಬಿಟ್ಟಿ ಚನ್ನಾಗಿ ತಿಳಿಯೊ ಮನಮುಟ್ಟಿ
ಹೊನ್ನು ಹೆಣ್ಣು ಮಣ್ಣು ತನ್ನದಲ್ಲಪಾರ–
ನ್ಯಾಯದ ಘಾನ ಪಾಪದ ಮೊಟ್ಟಿ ॥ ೧ ॥

ಚಿಂತಿಯೆಂಬುವದು ಒಣಭ್ರಾಂತಿ ಸಂಸಾರ ಕನಸಿನ
ಸಂತಿ ಕಣ್ಣು ಕಾಣದ ಕೂಳನು ತಿಂತಿ ದಿನದಿನಕೆ ಕಡಿಮೆ ಕಳೆ
ಕಾಂತಿ ನಾ ಮುಕ್ತನಾಗಬೇಕಂತಿ ಹಿಡಿ
ಶಾಂತಿ ಚಿನುಮಯ ಸದ್ಗುರು[ವ]ನಿನ್ನೊಳಗಿಟ್ಟು
ಕೊಂಡು ಕಣ್ಣಿದ್ದು ಕುರುಡಾಗಿ ಕುಂತಿ ॥ ೨ ॥

ಆದಿ ಆಧಾರವಿಲ್ಲದೆ ಹ್ಯಾಗಾದಿ ಅದರಾದಿ ಕೇಳು ಬ–
ನ್ನದಿ ನಿಗಮಾಗಮ ಶಾಸ್ತ್ರವನೋದಿ

ಕಾದಾಡಿ ದೂರಿಗೊಳಗಾದಿ ಎದೆ ಮ್ಯಾಲೆ ಬಂದ ಯಮ
ಬಾಧಿ ಬಿಡುವಾದಿ ಸದಮಲ ಸದ್ಗುರು ಶಾಂತರ ಪಾದವ
ಹೊಂದು ನಿಜವಸ್ತುವೆ ನೀನಾದಿ ॥ ೩ ॥

 

೨೬೯

ಆತ್ಮಹಸಿಕೆ ವಚನ
ಮನವ ಸೋಧಿಸಬೇಕು ನಿಚ್ಚ ಹೊರ
ಮನಿಯದೊಟ್ಟಿದರೆ ಅನುಮಿಷ ಮೆಚ್ಚ ॥ ಪಲ್ಲ ॥

ಜ್ಞಾನವೆಂಬುದು ಮೋಕ್ಷವಹುದು ಮೈಯ್ಯ
ಬೇನೆ ಬಡಿಸುವದು ಅದು ಮುಕ್ತಿಯಹುದೆ ?
ಜ್ಞಾನವೆಂಬುದು ಹೊರಗಿಹುದೆ ? ತನ್ನ
ತಾನೆ ತಿಳಿಯದೆ ಬಲ್ಲೆನೆನಬಹುದೆ ? ॥ ೧ ॥

ತನುವ ದಂಡಿಸುವದು ಮಾಣು ನಿನ್ನ
ಮನವ ದಂಡಿಸಿ ಪರಮಾತ್ಮನ ಕಾಣು
ನೆನಹು ನಿಲ್ವುದು ಅತಿ ಜಾಣು ನಿನಗೆ
ಮುಕ್ತಿ ದೂರವಿಲ್ಲ ಒಂದೆ ಗೇಣು ॥ ೨ ॥

ಹೀಗಾದ ಭಕ್ತರಿಗೆ ಕೇಡಿಲ್ಲ ಮುಕ್ತಿಯಿನ್ನೇಕೆ ?
ಅನುಮಾನ ಗುರು ತಾನೆ ಬಲ್ಲ
ಭಿನ್ನ ಬುದ್ಧಿಯ ಮಾಡ ಸಲ್ಲ ಪ್ರ-
ಸನ್ನ ಸದ್ಗುರು ಸಿದ್ಧ[ನ ತಾ]ನೆ ಬಲ್ಲ ॥ ೩ ॥

 

೨೭೦

ಪಕ್ಷಿಯೆಂಥದಣ್ಣಾ ಗರಿ ಇಲ್ಲದಾಡುತದಣ್ಣ ॥ ಪಲ್ಲ ॥

ನೀರಾಗೆ ನೆರಳಾಗೆ ಹುಟ್ಟುತಲಿದೆ
ಬೇರುಯಿಲ್ಲದ ವೃಕ್ಷ ಬಳೆವುತಲಿದೆ ಗಾಳಿ ಬಂ-

ದಾರೆ ತಾವೋಲ್ಯಾಡುತದೆ
ಪಕ್ಷಿಯೆಂಥದಣ್ಣ... ॥ ೧ ॥

ಕಾರ್ಯಿನಮತನ ? ಕಾಯಾಗುತದೆ
ಪ್ರಾಯಕ್ಕೆ ಬಂದರೆ ಸವಿದೋರುತದೆ
ಹಣ್ಣಾದರೆ ಮ[ಣ್ಣಿಲಿ] ಫಲಿಸು[ತ]ದೆ
ಪಕ್ಷಿಯೆಂಥದಣ್ಣ.... ॥ ೨ ॥

ಅಂಗವಾಗಿ ಮರ ಹುಟ್ಟುತದೆ
ಲಿಂಗಮೂರ್ತಿಯೆಂಬ ಕಾಯಾಗುತದೆ
ಸಂಗನಬಸವಗೆ ಸವಿದೋರುತದೆ
ಪಕ್ಷಿಯೆಂಥದಣ್ಣ... ॥ ೩ ॥

❑ ❑

೨೭೧

ರಾಗ : ತೋಡಿ

ತಾರಕಜ್ಯೋತಿಯ ನೋಡಿ
ಗುರುಕಾರುಣ್ಯ ದಿವ್ಯ ಹೃದಯಪೀಠದಲಿ ॥ ಪಲ್ಲ ॥

ಅಕ್ಷಿ ತುಂಬಿದ ವಾಯು ನಿಂದು ಕೃಷ್ಣ
ವೃಕ್ಷರಂಧ್ರದಿ ಮನ ನಿಶ್ಚಲಗೊಂಡು
ಈಕ್ಷಣದೆರಡೇಕವಾಗಿ ಭ್ರೂ
ಲಕ್ಷವು ಸುದ್ಧ ಪ್ರಸಾದದೊಳ್ಪಾಗಿ ॥ ೧ ॥

ನಾಸಿಕಾಗ್ರದ ದೃಷ್ಟಿಯಿಂದೆ ಎವೆ-
ಪೀಸದೆ ಮನವು ಸೂಸದೆ ನಿಂದ ವಾಯು
ಭಾಸುರ ಪ್ರಣಮತೇಜದಲಿ ಕೂಡಿ
ಸಾಸಿರದಳಕರ್ನಿಕಾಗ್ರ ಪೀಠದಲಿ ॥ ೨ ॥

ಪಿಂಡಾಂಡದೊಳಗೆಲ್ಲ ತಾನೆ ಮೂರು
ಮಂಡಲದೆರಡೆಸಳಗ್ರ ಪೀಠದಲಿ

ಗಂಡ ಪ್ರಾಣೇಶ ಸಂಗಮನ ನಾ ನೋಡಿ
ಕಂಡಿಹೆನೆಂದರೆ ಗುರುವಿಲ್ಲದಾಗದು ॥ ೩ ॥

೨೭೨

ಮಂಗಳಾರ್ತಿ ಪದ
ಆರಾತಿ ಬೆಳಗೀರೆ ನಾರೇರೂ ಭಕ್ತಿ ಪೂರೇರೂ
ಸಾರ ಪುಣ್ಯಕಾರೇರು
ಆರಾತಿ ಬೆಳಗೀರೆ ನಾರೇರೂ ಭಕ್ತಿ ಪೂರೇರೂ ॥ ಪಲ್ಲ ॥

ಮಂಗಳಾಂಗಗೆ ಮಾಯಭಂಗಗೆ ಕೃಪಾಂಗಗೆ
ಲಿಂಗ ಶರಣ ಸಂಗಗೆ
ಹಿಂಗದೆ ಯತಿಜನ ವರದಗೆ ನರಶರಧರಗೆ
ಗಂಗೋತ್ತುಮಾಂಗನಿಗೆ ಆರಾತಿ ಬೆಳಗೀರೆ ॥ ೧ ॥

ವಾರಿಜಭವ ಶಿರಕರನಿಗೆ ಭವಹರನಿಗೆ
ಚಾರುಚಿತ್ರಚರಿತಗೆ
ಮೀರಿದ ದೇವರ ಗೆದ್ದಗೆ ವ್ರತಬದ್ಧಗೆ
ಸಾರಿ ಭೂರಿ ಮಹಿಮನಿಗೆ ಆರಾತಿ ಬೆಳಗೀರೆ ॥ ೨ ॥

ನಿಗಮಗೋಚರ ನಿತ್ಯರೂಪಗೆ ಪುರಲೋಪಗೆ
ನಾಗತನುಜೆ ವಲ್ಲಭಗೆ
ಸೊಗಸುವ ಗಿರಿಜಾಪ್ರತಾಪ ಹತತಾಪಗೆ
ಜಗದೇಕ ರಕ್ಷಕಗೆ ಆರಾತಿ ಬೆಳಗೀರೆ ॥ ೩ ॥

ಭಾಳಲೋಚ[ನನಿಗೆ] ಭಕ್ತ ಪ್ರೇಮಿಗೆ ಸುಖಧಾಮಗೆ
ಬಾಲಚಂದ್ರಶೇಖರನಿಗೆ
ಕಾಳಕೂಟವನುಂಡು ಬಾಳ್ದಗೆ ಹರಿಯ ಸೀಳ್ದಗೆ ಮೂರು
ಲೋಕಪಾಲಿಪಗೆ ಆರಾತಿ ಬೆಳಗೀರೆ ॥ ೪ ॥

ಗುರುಸಿದ್ಧನೆಂಬ ದೇವೇಶಗೆ ಜಗದೀಶಗೆ
ಬೆರೆದೆರೆಕವಾಗಿಹಗೆ
ಧರೆಯೊಳು ಗುರುವಾಗಿ ಮೆರೆದಗೆ ಎನ್ನ

ಪೊರೆದ ದೊರೆ ಸಂಗಮೇಶ್ವರಗೆ
ಆರಾತಿ ಬೆಳಗೀರೆ ನಾರೇರೂ ಭಕ್ತಿ ಪೂರೇರೂ ॥ ೫ ॥

 

೨೭೩

ಜಯ ಜಯ ಜಗದೀಶ್ವರನಿಗೆ ಭಕ್ತ
ಜಯ ವರದನಿಗೆ ಸದಾಶಿವಲಿಂಗನಿಗೆ ॥ ಪಲ್ಲ ॥

ಪಂಚವಿಂಶತಿಲೀಲೆಗಳನುರೆ ನಟಿಸುತ್ತೆ
ವಂಚಿಸಿದರುಕೊ ಶೂನ್ಯಕ್ಕೆನಿಪ
ಮುಂಚೀವ ಸುಖವಿಲಾಸಂಗಳ ನಡಸಿದ
ಪಂಚಮುಖದ ಪರಾತ್ಪರ ಫಣಿಭೂಷಗೆ ॥ ೧ ॥

ಸುಂದರಮೂರ್ತಿಗೆ ಸುರುಚಿರ ಕೀರ್ತಿಗೆ
ಇಂದುಕಲಾಧರನೆನಿಸುತೆ
ಸಂದ[ಸಾರಸ] ಕುಲವಂಶರಾಜಗೆ
ಹೊಂದಿದ ಭೋಗಮೋಕ್ಷಗಳಧೀನತಗೆ ॥ ೨ ॥

ನಿರುಪಮ ಮಧುರಾಪುರದಿಂದೆ ನಡೆತಂದು
ಕರುಣದೆ ಸ್ವಾದೆ ನಗರದೊಳು
ಉರುತರ ನಂದೀಶ್ವರನೊಡಗೂಡುತೆ
ಪರಿಪೂರ್ಣ[ನ]ಹ ಸದಾಶಿವನಾಮಗೆ ॥ ೩ ॥

 

೨೭೪

ಸಿದ್ಧರಾಮ ಗುರು ನಿರಂಜನ ಸಕಲ ದಿವಿಜ
ಸಿದ್ಧತಾಧ್ಯಯಕ್ಷ ಪೂಜ ಪ್ರಮಥರೊಡೆಯ ಪಾಲಿಸೆನ್ನ ॥ ಪಲ್ಲ ॥

ಹಲವು ಜಲ್ಮದಲ್ಲಿ ಬಂದೆನೊ ಸ-
ಕಲ ಕರ್ಮದಲ್ಲಿ ಕುದಿದು ಕುದಿದು ಬೆಂದೆನೊ

ಮಾಯಿಯೆಂಬ ಬಲೆಗೆ ಸಿಲ್ಕಿ ಬಾಳ ನೊಂದೆನೊ
ಮೂರ್ಕತನದ ಬಳಕೆಯಿಂದ ನಿಮ್ಮ
ಜಪಿಸ ಮರೆದೆನಯ್ಯ ಪ್ರಭುವೇ
ಸಿದ್ಧರಾಮ ಗುರು ನಿರಂಜನ...... ॥ ೧ ॥

ಕಾಮ ಕ್ರೋಧ ಲೋಭದಿಂದಲಿ ಹೆಣ್ಣು ಹೊನ್ನು
ಭೂಮಿ ಮೂರರಾಸೆಯಿಂದಲಿ ಸತ್ತ್ವ ರಜ
ತಾಮಸಂಗಳೊಲುಮೆಯಿಂದಲಿ ಇಂದ್ರಿಗ್ಯೆದು
ರಾಮದಿಂದಕಾರದಿಂದಲಿ ? ನಿಮ್ಮನಂತಕಾಲದೊಳಗೆ
ಒಂದನರಿಯದಂಥ ಮೂಢನಾದೆನಯ್ಯ ಪ್ರಭುವೇ
ಸಿದ್ಧರಾಮ ಗುರು ನಿರಂಜನ... ॥ ೨ ॥

ಎಂಟು ಮದಗಳು ಅಂಟುಕೊಂಡಿಹೆ ವೆಸನವೇಳು
ಗಂಟುಮಾಡಿ ಕೆಡಹಿಕೊಂಡಿಹೆ ಅಯಿದುಮಂದಿ
ನಂಟರೆನಗೆ ಸತತ ಹಗೆಗಳು ಇಷ್ಟರೊಳಗೆ
ಸುಂಟುರುಗಾಳಿಯಂತೆ ತಿರಿಗಿ ತಿರಿಗಿ ಸುಖವ ಕಾಣೆನ್ಯೆಯ್ಯ ಪ್ರಭುವೇ॥ ೩ ॥

ತ[ಮ್ಮ] ಮತದ ಹೊಲಬನರಿಯೆನು ಪ್ರಾಯಮದದಿ
ಕೋತಿಯಂತೆ ಸೊಕ್ಕಿ ಮೆರದೆನು ಅಂಗನೆಯರ
ಮಾತಿಗಾಗಿ ಮರುಳುಗೊಂಡೆನು ಜಾತಿವ್ಯೆರನಾಗಿ
ನಿಮ್ಮ ಜಪಿಸ ಮರದೆನಯ್ಯ ಪ್ರಭುವೇ ॥ ೪ ॥

ರಕ್ಷಿಸು ಸುಧಾಂಬುಶೇಖರ ನಿಲಕಂಠ ಪರಮಪ್ರಭುವೇ
ಉರಗಭೂಷಣ ವಳೆನಡಿನಿನ? ಅರ[ಸ] ಸ್ವಾಸಲಪುರೀಶ್ವರ
ಪೂರ್ವಭವವ ಮರಿಯೆನ್ನ ರಕ್ಷಿಸಯ್ಯ ಪಡದ
ಕರ್ಮ ಪರನಿವಾಸ ಸಿದ್ಧರಾಮ ಗುರು ನಿರಂಜನ ॥ ೫ ॥

❑ ❑

೨೭೫

ರಾಗ : ಮಾಳಿ

ಆನೆ ಬಂದಿತು ಮದ್ದಾನೆ
ತನ್ನ ತಾನೆ ತಿಳಿದುಕೊಂಡು ನಿಂದ ಶರಣನೆಂಬ ॥ ಪಲ್ಲ ॥

ಮನವೆಂಬ ಮಾವುತಿಗನ ಕೊಂದು ಮಾಟದಿ
ನೆನವೆಂಬ xxxಭಾವ ಬಲಿದು
ತನು ಮುರಿದು ತಾಮಸದ ಬಳ್ಳಿಯ ಕಿತ್ತು
xxxಲಿಂಗ ಸಂಗ ಸಂಯೋಗಕ್ಕೆ ಸೊಕ್ಕೇರಿದ ॥ ೧ ॥

ಅರುವಿಂದಾಲಾ xxxಮೇಲ್ಮದವೇರೆ
xxxಕಿರಬುದ್ಧಿ ಮಾಯಕಿಬ್ಬಡಿಸುತಲಿ
ತರುಗಳ ಮುರಿದು ತಾ ಮನದ ಬಳ್ಳಿಯನು ಮೆಟ್ಟಿ
ಕುರುಹ ಮರದು ಕುಲಛಲದ ಚಿಂತಾಕುರ ॥ ೨ ॥

ವರ ಗುರು ಲಿಂಗ ಜಂಗಮದ ಪಾದೋ[ದ]ಕವ
ಪರಮ ಪ್ರಸಾದದ ಕವಳವನು
ಕರವೊಡ್ಡಿ ಸೇವಿಸುತ[ಲಿ] ಸಿದ್ಧರ ಮನ
ಬೆರಸಿಪ್ಪ ಶಿವಯೋಗಿ ಬೆಲೆಯಿಲ್ಲದ[ಹನು] ॥ ೩ ॥

 

೨೭೩

ವಂದಿಸಿ ಶರಣರ ನಿಂದಿಸಿ ನುಡಿದರೆ ಹಂದಿಜಲ್ಮ
ಇಂದುಧರನ ಭಕ್ತಿ ಎಡಬಲಕಾದರೆ ಹಂದಿಜಲ್ಮ ॥ ಪಲ್ಲ ॥

ಮಾತುಮಾತಿಗೆ ಸೊಕ್ಕಿ ಮಥನಿಸಿ ನುಡಿದರೆ ಹಂದಿಜಲ್ಮ
ಮಾತಿನೊಳೆರಡಾದ ಹೃದಯಸೂತಕರಿಗೆ ಹಂದಿಜಲ್ಮ
ಮಾತುಕೊಟ್ಟು ತಪ್ಪಿ ನುಡಿ ಎರಡಾದರೆ ಹಂದಿಜಲ್ಮ
ತನ್ನ ಮಾತೇನು ಕರದು ಭೋಗಕ್ಕೆ ಎಳೆದರೆ ಹಂದಿಜಲ್ಮ ॥ ೧ ॥

ಪರಮಪ್ರಸಾದಕ್ಕೆ ಎಂಜಲೆಂದವಗೆ ಹಂದಿಜಲ್ಮ
ಪರಮನಂಘ್ರಿ ಸಲೆ ತೀರ್ಥಜಲವೆಂದು ನುಡಿದರೆ ಹಂದಿಜಲ್ಮ
ಪರಮ ಜಂಗಮದೊಳು ಬೇರೆ ತಾನಾದರೆ ಹಂದಿಜಲ್ಮ
ಪರಮ ಪಾರ್ವತಿದೇವಿ ಆ xxx ಜರಿದರೆ ಹಂದಿಜಲ್ಮ ॥ ೨ ॥

ಸಿದ್ಧಗಿರಿಯ ನಿಜವಲ್ಲವೆಂದರೆ ಹಂದಿಜಲ್ಮ
xxx ಲಿಂಗನ xx ಡು. ಸಿಲೆಯೆಂದು ನುಡಿದರೆ ಹಂದಿಜಲ್ಮ

ಸಿದ್ಧ ಮಥರೊಳು ತ್ರಿವಿಧಕ[ಳುಕುವ]ರಿಗೆ ಹಂದಿಜಲ್ಮ
ಸಿದ್ಧಕಾಡನ ಗುರು ಬೆರಸಿದ ಮ್ಯಾಲೇ[ಕೆ] ಹಂದಿಜಲ್ಮ || ೩ ||

 

೨೭೭

ರಾಗ : ತೆಲುಗ ಕಾಂಬೋದಿ

ಭವಬವದೊ[ಳಗೆ] ಬಳಲ್ವದ ಬಿಡಿಸಯ್ಯ ಬಸವತಂದೆ ದೇವ
ಶಿವಪಾದಧ್ಯಾನದೊಳಿಂಬಿಟ್ಟು ಸಲಹಯ್ಯ [ಬಸವತಂ]ದೆ || ಪಲ್ಲ ||

ಭ್ರಾಂತಿಮನದ ಸಂಚಲಗಳ ತೊಲಗಿಸ ಬಸವತಂದೆ ಶಿವ
ಸಂತತ ಭಕ್ತಿಗೆ ಕಾರಣ[ವಾಗಿಸ] ಬಸವತಂದೆ
ಯಂತ್ರವಾಹಕನ ವಿಶ್ರಾಂತಿಯಿಂ ಭಜಿಸೆಂದು ಬಸವತಂದೆ ಘಾಟ
ಜಂತ್ರ ಜೀವಗೆ ಪ್ರಾಣ [ತಾರಕ]ನಾದೆ ಬಸವತಂದೆ || ೧ ||

ಬದ್ಧ ಮಲತ್ರಯ ಪಾಶವ ಛೇದಿಸಿ ಬಸವತಂದೆ ನೋಡಿ
ಬಿದ್ವಿಭೂತಿಯನಿಟ್ಟು ಶುದ್ಧಾತ್ಮನೆನಿಸಿದೆ ಬಸವತಂದೆ
ಹೊಂದಿದಘವ ಛಿದ್ರಿಸಲು ರುದ್ರಾಕ್ಷಿಯ ಬಸವತಂದೆ ಮುಕ್ತಿ
ಸಾಧ್ಯಕೆ ಶರಿರದೊಳು ಧರಿಸಿದೆ ಬಸವತಂದೆ || ೨ ||

ಭಕ್ತಿ ವಿಶ್ವಾಸವ ಭಾವಕ್ಕೆ ಪ್ರೇರಿಸಿ ಬಸವತಂದೆ ಎನ್ನ
ಚಿತ್ತದಿ ಶಿವಲಿಂಗವ ನೆಲೆಗೊಳಿಸಿದೆ ಬಸವತಂದೆ
ಉತ್ತರ ಯುಗತಿಯ ಸನ್ಮಾರ್ಗಕ್ಕೆ ಬಸವತಂದೆ ಧ್ಯಾನ ಸ–
ಧ್ಭಕ್ತಿಯನತ್ತಿತ್ತ ತೊಲಗದಂತಿರಿಸಿದೆ ಬಸವತಂದೆ || ೩ ||

ಕಾಯ ಕಾರಣವಾಂತ ದಯ ತ್ರೈ[ಜಗ]ಕ್ಕೆ ಬಸವತಂದೆ ಮಿಶ್ರ
ತೋಯವ ಚರಪಾದಾಂಬುವೆನಿಸಿದೆ ಬಸವತಂದೆ
ಸ್ವಾಯತ ಹರ ಗುರು ಚರ ಸುಪ್ರಸಾದವ ಬಸವತಂದೆ
ಆಯತವಿಷ್ಟಲಿಂಗಕೆ ತೃಪ್ತಿವಡಿಸಿದೆ ಬಸವತಂದೆ || ೪ ||

ಧಾತನಾಗಿ ಧರ್ಮ ನೀತಿಯ ಬೋಧಿಸಿ ಬಸವತಂದೆ ಮಂತ್ರ
ಮಾತೆಗೊಪ್ಪಿಸಿ ಮಹಾತ್ಮನೆನಿಸಿದೆ ಬಸವತಂದೆ

ಸ್ವಾತಿಶಯದ ತತ್ತ್ವಾರ್ಥವನರುಹಿ ಬಸವತಂದೆ ಸಲ್ವ
ರೀತಿಗೆ ಗುರುಕರಜಾತನೆಂದೆನಿಸಿದೆ ಬಸವತಂದೆ ॥ ೫ ॥

ಪೆತ್ತ ತಂದೆಯೊಳು ಪಾಟಿಗೈವವರಾರು ಬಸವತಂದೆ ಮುಂದೆ
ತೆತ್ತಿಗರಾರಯ್ಯ ಕರ್ತ ನೀನಲ್ಲದೆ ಬಸವತಂದೆ
ಸುತ್ತಿ ಸುಳಿವ ಮಾಯ ಮೋಹದ ಪಾಶವ ಬಸವತಂದೆ ಬೆಂ-
ಬೆತ್ತಲಿರಿಸದೆ ಬೇರಕಿತ್ತು ಬಿಸಾಟೆ ನೀ ಬಸವತಂದೆ ॥ ೬ ॥

ಲಿಂಗದಮುಖವೆ ಜಂಗಮವೆಂದು ಭಾವಿಸಿ ಬಸವತಂದೆ ಅರ್ಪಿ-
ತಂಗಳ ಕೊಟ್ಟು ಕೊಳ್ಳಲು ಘನವಹುದೆಂ[ದೆ] ಬಸವತಂದೆ
ಮಂಗಳಾತ್ಮಕ ಶಿವ ಹಿಂಗದಿರ್ಪನುಯೆಂದು ಬಸವತಂದೆ ಸಾ
ಷ್ಟಾಂಗವೆರಗಿ ಸಿದ್ಧಲಿಂಗನೊಳ್ಬೆರದೆ ಬಸವತಂದೆ ॥ ೭ ॥

## ೨೭೮

ಶರಣಪದ್ಧತಿಗಿನ್ನು ಸರಿಮಿಗಿಲುಂಟೆ ?
ಪರತತ್ತ್ವ ಪರಿಣಾಮಿಗೆ ದುಃಖವುಂಟೆ? ॥ ಪಲ್ಲ ॥

ಸದಮಲಜ್ಞಾನಿಗೆ ಕದನ ಕರ್ಕಸವುಂಟೆ ?
ಹೃದಯಸುದ್ಧಗೆ ಚಿತ್ತಕದಡಿದದುಂಟೆ ?
ಮೃಡವಚನಗಳಿಂದ ಅಧಿಕ ಹಿತವರುಂಟೆ ?
ಹದುಳಿಗನೊಳು ಸದಮದವೆಂಬುದುಂಟೆ? ॥ ೧ ॥

ವಾಕದುರ್ಜನಕಿಂದಧಿಕ ಹಗೆಯುಂಟೆ?
ಸಾಕೆಂದ ಬಳಿಕೆಮತ್ತೇಕಾಂತವುಂಟೆ
ಬೇಕು ಬೇಡಂದವಗೆ ಸುಖ ಮೋಹಗಳುಂಟೆ?
ಲೋಕಾರ್ಥ ಪರಮಾರ್ಥಕೇಕಾರ್ಥವುಂಟೆ ? ॥ ೨ ॥

ಸಟೆ ಹುಸಿಕನ ಭಕ್ತಿ ದಿಟವೆನಲುಂಟೆ ?
ಕಟಕಿಗೆ ಶಿವಧ್ಯಾನ ಘಟಿಸಿದುದುಂಟೆ ?
ಅಟಮಟ ಬಿಡದಂಗೆ ಧೂರ್ಜಟಿಯ ಧ್ಯಾನವದುಂಟೆ ?
ಕುಟಿಲಂಗೆ ನಿಟಿಲಾಕ್ಷ ಕೃಪೆಯದುಂಟೆ ? ॥ ೩ ॥

ಆಸೆವುಳ್ಳವನಿಗೆ ನಿರಾಸಕತನವುಂಟೆ ?
ಬೀಸುವ ಮರತಗೊಂದಾಶ್ರಯವುಂಟೆ?
ಈಶನ ಶರಣರ್ಗೆ ರೋಷ ಪಾಶಗಳುಂಟೆ? ॥ ೪ ॥

ಅರುಣನುದ[ಯ]ಕಿನ್ನು ಹರೆಯದ ಮಂಜುಂಟೆ?
ತರುಣಿಯರ ರತಿ ವಿರಕ್ತನಿಗುಂಟೆ ?
ಹರಭಕ್ತ ಸಿದ್ಧಲಿಂಗ [ನಿ]ಂದಧಿಕರಿನ್ನುಂಟೆ? ॥ ೫ ॥

೨೭೯

ಶೋಭಾನವೆನ್ನಿರೆ ಶೋಭವನೆನ್ನಿರೆ
ಶೋಭಾನವೆನ್ನಿರೆ ಶಿವನಿಗೆ ॥ ಪಲ್ಲ ॥

ಶ್ರೀಮತ್ಸಾಂಬವರೂಪ ಹೇಮಪರ್ವತ ಚಾಪ
ಸ್ವಾಮಿ ಮಾಯಾರಿ ಭವಲೋಕಸ್ವಾಮಿ ಮಾಯಾರಿ
ಭವಲೋಪ ಹತ ತಾಪ
ಕಾಮಸಂಹರನೆ ಜಯ ಜಯ ॥ ೧ ॥

ಲೋಕವಂದಿತ ಪಾದ ಸಾಕಾರ ಶಿವನಾದ
ಪಾಕಾರಿತನುಜಾವರ ಮೋದ
ಪಾಕಾರಿತನುಜಾವರ ವೇದನುತ ಮೋದ ಏಕ
ಏಕಮೂರುತಿಯೆ ಜಯ ಜಯ ॥ ೨ ॥

ವಿಮಲ ಮಂಗಲಗಾತ್ರ ಭ್ರಮರ ಬಾದರಳಗೋತ್ರ
ಭ್ರಮರ ಭಾಗರಳಧವ ಗೋತ್ರ ಸುಕ್ಷೇತ್ರ
ನಮಿತಪಿತ ಪಾಲಿತನೆ ಜಯ ಜಯ ॥ ೩ ॥

ಪರಮ ಪಾವನಭಾವ ನರ ಮಹ ಗುರುದೇವ
ಬರ ಲಿಂಗ ಭಜಕ ಜನಜೀವಧವ ಕಾವ
ನರಸಿ ಜನಕನೆ ಜಯ ಜಯ ॥ ೪ ॥

ವರ ಸಚ್ಚಿತ ಸೌಖ್ಯಾಂಗ
ಗುರು ಸ್ವತಂತ್ರದ ತುಂಗ

ದೊರೆ ಸಿದ್ಧಲಿಂಗ ಧವಳಾಂಗ
ದೊರೆ ಸಿದ್ಧಲಿಂಗ ಧವಳಾಂಗ ಭವಭಂಗ
ಪರಮದೇಶಿಕ ಜಯ ಜಯ ॥ ೫ ॥

೨೮೦

ಹರಸ್ತುತಿ ಜಿಹ್ವೆಯೊಳಗೆ ನರಸ್ತುತಿಯನು ಮಾಡಬಾರದು
ಧರಣಿಯ ಕಲ್ಲಿಗೆ ಘಣೆಮುಟ್ಟಿ ಪೂಜೆಯ ಮಾಡಬಾರದು
ಗುರುವಿತ್ತ ಲಿಂಗವ ಮರದನ್ಯ ಪದವ ಕೊಂಡಾಡಬಾರದು
ಗುರುಪದ ಧ್ಯಾನದಿ ಪರಚಿಂತೆಗಳೇನನು ಮಾಡಬಾರದು ॥ ಪಲ್ಲ ॥

ಬಡತನ ಬಂದ ಕಾಲದಿ ನಂಟರಿಷ್ಟರ ಸೇರಬಾರದು
ಬಡವರ ಕಂಡು ಬಲ್ಲಿದ ಮದ ಗರ್ವದಿ ನೋಡಬಾರದು ॥ ೧ ॥

ಬಡವರ ಬಾಯನು ಬಡಿದು ಅನ್ಯಾಯವ ಮಾಡಬಾರದು
ಬಡಗ ಪಶ್ಚಿಮದಿ ಶಿರವಿಟ್ಟು ನಿದ್ರೆಯ ಮಾಡಬಾರದು ॥ ೨ ॥

ಲಿಂಗ ಜಂಗಮ ಗುರು ನಿಂದಕರೆಡೆಯೊಳು ನಿಲ್ಲಭಾರದು
ಲಿಂಗ ಸುತೀರ್ಥ ಪ್ರಸಾದವ ಬಯಲೊಳು ಚೆಲ್ಲಬಾರದು ॥ ೩ ॥

ನೆಲೆ ನೋಡಿ ತಪ್ಪಿದಾತನು ನೀತಿಯೊಳಾಡಬಾರದು
ತಡೆಯದೆ ತಿಂಬೊ ರೋಗಿಗೆ ಮಂತ್ರವೈದ್ಯವ ಮಾಡಬಾರದು ॥ ೪ ॥

ತುಡುಕಿ ತಿಂಬವಳು ಮೀಸಲಡುಗೆ ಮಾಡುವಳೆಂದು ನೆಚ್ಚಬಾರದು
ಬಡಮನದವನಿಗೆ ಬ್ರಹ್ಮೋಪದೇಶವ ಮಾಡಬಾರದು ॥ ೫ ॥

ಪರಧನ ಪರಸತಿ ಕಾಮಿನಿ ಮನೆಗೆ ತಾ ಕರೆಯಬಾರದು
ಪರಮ ಸದ್ಗುರು ದೊಡ್ಡ ಮಾನ್ಯರ ಪಾದವ ಮರೆಯಬಾರದು ॥ ೬ ॥

ಮೃಡನಲ್ಲದನ್ಯದೈವರ ಪೂಜೆಯ ಮಾಡಬಾರದು
ಜಡದೇಹಿ ಮನುಜರ ಕೈಯೊಡ್ಡಿ ಧರ್ಮವ ಕೇಳಬಾರದು ॥ ೭ ॥

ಇಚ್ಛೆಯ ನುಡಿಗಳ ನುಡಿವ ದ್ರೋಹಿಯ ನೆಚ್ಚಬಾರದು
ಕಚ್ಚುವ ನಾಯಿದ್ದ ಕೇರಿಗೆ ಒಕ್ಕಲು ಹೋಗಬಾರದು || ೮ ||

ಹುತ್ತದ ಒಳಗಣ ಸರ್ಪವ ಬಲುಹಿಂದ ಕೆಣಕಬಾರದು ಅಂತೆ
ಹೊತ್ತಿ ನೀರಿರುವ ಅಬ್ಬರದ ಹೊಳೆಯೊಳು ಹೋಗಬಾರದು || ೯ ||

ಕೊಂಡೆಯ ನುಡಿಗಳ ಚಾಡಿಯ ಧರೆಯೊಳು ಹೇಳಬಾರದು ಅಂತೆ
ಗಂಡನಿಲ್ಲದ ಗರತಿಯೊಳು ಬಹು ಸ್ನೇಹವ ಮಾಡಬಾರದು || ೧೦ ||

ಸ್ವಸ್ಥವಾದೆಡೆಯೊಳು ಕದನ ಕ್ರೋಧಂಗಳ ಮಾಡಬಾರದು ಅಂತೆ
ಅಸ್ತಮಾನ ವ್ಯಾಳ್ಯದಿ ಪಯಣವ ಹೋಗಬಾರದು || ೧೧ ||

ದಂಡಿನ ಕಾಳಗದೊಳು ರಣಹೇಡಿಯ ನೆನೆಯಬಾರದು ಇಂಥ
ಗುಂಡಿಗೆ ಮದ್ದಿಗೆ ಹೆದರೋಡಿಬರುವನ ಕೇಳಬಾರದು || ೧೨ ||

ಮದ್ದುಗಾರನ ಮಾತು ಸಾವಿರಕೊಂದು ಬದ್ಧಬಾರದು ನಮ್ಮ
ಸಿದ್ಧಲಿಂಗೇಶನ ಶ್ರೀ ಚರಣಂಗಳ ಮರೆಯಲಾಗದು || ೧೩ ||

□ □

೨೮೧

ಆರತಿಯೆತ್ತುವ ಬಾರೆ ಭಾವಕಿಯೆ
ಚಾರು ಚೌಪೀಠದಿ ತಾರಕ ಶಿವಗೆ || ಪಲ್ಲ ||

ಮಿಂದು ಮಡಿಯನುಟ್ಟು ಛಂದದಣ್ಬುತಿಟ್ಟು
ಸೌಂದರದೇಹದೊಳ್ ದಂದುಳವಟ್ಟು || ೧ ||

ಸಕಲಭೂಷಣಗಳ ನಿಕರವ ಧರಿಸಿ
ಪಿಕ ರವ ಗಾನದಿ ಪರಸಿ ಸತ್ಕರಿಸಿ || ೨ ||

ತನು ತುಂಬಿ ಸಾತ್ವಿಕ ಮನ ತುಂಬಿ ಹರುಷ
ವಿನುತ ನಯನ ತುಂಬಿ ಮಿನುಗುತ ನೋಡಿ || ೩ ||

ಉತ್ತುಮ ಘ್ರಾಣದೊಳ್ ಮುತ್ತ ಮುಂದಿಟ್ಟು
ಅತ್ತಲಿತ್ತ ನೋಡಿದೆ ಚಿತ್ತವನಿಟ್ಟು ॥ ೪ ॥

ಮನಸಿನ ವಾಂಛೆಯ ನೆನದು ಬೇಡುತಲ್ಲಿ
ಚಿನುಮಯ ಸಿದ್ಧವೃಷಭನ ನೋಡಿ ಪಾಡಿ ॥ ೫ ॥

 

### ೨೮೨

ರಾಗ : ಭೈರವಿ

ಕರುಣಿಪುದೆನ್ನನು
ಕರುಣಿಸು ತೋಂಟದ ಸಿದ್ಧಲಿಂಗನೆ ॥ ಪಲ್ಲ ॥

ತಂದೆ ತಾಯಿಯ ಮನವ ಕೊಂದು ? ಪೇಳಿದನ
ಚಂದದಿ ಗುರುಮಠಕೆ ಬಂದ ಸಿದ್ಧೇಶನೆ ॥ ೧ ॥

ಹೊತ್ತಿಗೊಂದೊಂದು ಮಹಿಮೆ ಅರ್ತಿಯಲಿ ತೋರಿದನೆ
ಸತ್ತಜೀವಕೆ ಪ್ರಾಣವಿತ್ತ ಸಿದ್ಧೇಶನೆ ॥ ೨ ॥

ಕಾಳಸರ್ಪನ ಠಕ್ಕಿಮೇಲೆ ಮಂಡಿಸಿದಿ
ಲೀಲೆಯೊಳಗಿರ್ದಮಲ ಸಿದ್ಧೇಶನೆ ॥ ೩ ॥

ಅರೆಗಲ್ಲ ಬಸವನಿಗೆ ಅನ್ನವನುಣಿಸಿದೆ
ಗುರುಮಠವನು ಬಿಟ್ಟು ಚರಮೂರ್ತಿಯಾದನೆ ॥ ೪ ॥

ಗಜಚರ್ಮಾಂಬರಧರ ಗಂಗಾಧರನೆ
ಅಜ ಸುರಮುನಿ ವಂದ್ಯ ಆದಿ ಸಿದ್ಧೇಶನೆ ॥ ೫ ॥

### ೨೮೩

ಕಾಯೊ ನಮ್ಮಯ್ಯ ಕಾಮಿತಫಲವೀಯೋ ದಮ್ಮಯ್ಯ
ಕಾ[ಮನ] ಮದಭಂಗ ಕರುಣಿ ತೋಂಟದಲಿಂಗ ॥ ಪಲ್ಲ ॥

ಜಡದೇಹಿ ನಾನು ಷಡುಸ್ಥಲ ದೃಢಮೂರ್ತಿ ನೀನು
ಬಿಡದಿರೆನ್ನಯ ಕೈಯ್ಯ ನಡಸು ಮಾರ್ಗದಿ ಜೀಯ್ಯ
ಬಡಮನದವನೆನ್ನ ಪ[ಲ]ಗುಣರನ್ನ ॥ ೧ ॥

ಭಸಿತವಿಭೂಷ ಭಾಳಾಂಬಕವೆಸೆವ ವಿಲಾಸ
ಬಸವಾದಿ ಗಣಯುಕ್ತ ಭಜಕಜನಾಸಕ್ತಿ–
ಯೆನಿಪ ಪಾಲಿಪ ಸ್ವಾಮಿ ಸಿದ್ಧೇಶ ಸ್ವಾಮಿ ॥ ೨ ॥

ಮನದಿಷ್ಟಯುಕ್ತ ರಕ್ಷಿಪುದಯ್ಯ ಎನಗೆ ನೀ ಕರ್ತು
ಘನ ಪರತರಸಂಗ ಮತಿಯ ಚೆನ್ನಂಗೆ ಲಿಂಗ–
ಯೆನಿಪ ಪಾಲಿಪ ಸ್ವಾಮಿ ಸಿದ್ಧೇಶ ಸ್ವಾಮಿ ॥ ೩ ॥

❑ ❑

೨೮೪

ಬಸವರಾಜೇಂದ್ರ ಮಂಗಲಂ
ಬಸವರಾಜೇಂದ್ರ ಮಂಗಲಂ
ರಾಜಶೇಖರ ಗಣರಾಜ ಬಸವ ॥ ಪಲ್ಲ ॥

ಕರುಣಾರಸ ಭರಿತ ಕಟಾಕ್ಷ
ಪರಮತ ವಿಹರಣ ದಕ್ಷ
ಬಸವ......... ॥ ೧ ॥

ಪರಮ ಶಿವಾಗಮ ಚರಣ ಸುಶೀಲ
ಪರಮತ ನಿವಾರಣ ದಕ್ಷ
ಬಸವ......... ॥ ೨ ॥

ಸಿಂಧುನಗರಾನಂದನಿಧೀಶ
ವಂದಿತ ಸುಜನ ಮಂದಾರ
ಬಸವ....... ॥ ೩ ॥

❑ ❑

## ೨೮೫

ಹೇಗೆ ಮೆಚ್ಚಿಸುವೆ ಹೇಳಮ್ಮ ಎ[ನ್ನಿ]ನೆಯುನ
ಪೊಗೋಲಹರನ ಮಧುಲಿಂಗನ ತರುಣಿ ॥ ಪಲ್ಲ ॥

ಗಗನಕೇಶಗೆ ಮುಡಿಯನೆಂತಳವಡಿಸುವೆ
ದಿಗಂಬರನಿಗೆ ದಿವ್ಯಾಂಬರವೆಂತುಡಿಸುವೆ
ಮೊಗಗಳೈದರ ಮಹಿಮನ ಹೇಗೆ ಮುದ್ದಿಸುವೆ
ಅಗಣಿತಭುಜನನಪ್ಪುವದೆಂತು ರಮಣಿ ॥ ೧ ॥

ಶಶಿಧರನಿಗೆ ಕಮಲವ ಹೇಗೆ ಸೂಡುವೆ
ನೊಸಲಕಣ್ಣವಗೆ ತಿಲಕವನೆಂತಿಡುವೆ
ಭಸಿತಾಂಗಗನುಲೇಪನವ ಹೇಗೆ ಮಾಡುವೆ
ವಿಷಕಂಠನಧರಚುಂಬನವೆಂತು ತರುಣಿ ॥ ೨ ॥

ಬನವಸೆವಾಸನ ಮನ್ನೆಗೆಂತು ಕರವೆನೆ
ಚಿನುಮಯ ರೂಪನ ತೆಕ್ಕೆಯೊಳೆಂತು ನೆರೆವೆ
ಘನ ಸೋದೆರಾಯನ ರಕ್ಷಿಸುವ ಮಧುಲಿಂಗ
ಎನಗೊಲಿ[ಯುವ] ಪರಿಯೆಂತೇನೆ ರಮಣಿ ॥ ೩ ॥



## ೨೮೬

ಅಂಗದ ಲಿಂಗದ ನೆಲೆಯು ತಿಳಿಯೆ ಯಾರ
ಹಂಗು  ನಿನಗೆ ಹೇಳು ಲಿಂಗವಂತ ॥ ಪಲ್ಲ ॥

ನುತ ಪೀಠ ಕಟಿಗಳೊಳರೆಯಕ್ಕಿಯನಿತು ವಿ
ತತ ವೃತ್ತ ಗೋಮುಖಗಳೊಳಾದರೆಯು
ಸಿತನಾಳ ಗೋಳಕಂಗಳೊಳೆ[ಳ್ಳ]ನಿತು ಹಿಂಗೆ
ಗತ  ದೋಷವದು ಲಿಂಗದಾಚುತಾಣದಲ್ಲಿ ॥ ೧ ॥

ತಲೆಯಾದಿಯಾಗಿ ಬುಡತನಕಲಿ ಸೀಳು ಕೂ
ದಲಪಿಡಿವನಿತಾಗಿ ಸೀಳೆ ದೋಷ

ವಿಲಸಿತ ಸರ್ಜರಸವು ಸಡಿಲಲು ಮತ್ತೆ
ಬಲಿದು ಧರಿಸಲಾವ ಹಾನಿಯಿಲ್ಲ ॥ ೨ ॥

ನಾಳ ಗೋಳಕ ರೂಪ ಶಿವಲಿಂಗ ಶಕ್ತಿಗಳು
ಮೇಳವೆಯಾದ ಸಂಯೋಗಗಳೆ
ಹೇಳಲೇನದೆ ಜಗದುದಯ ಕಾರಣ ಲಯ
ಕೇಳಿದ ತಿಳಿಯ xxx ಲಾಗದು ॥ ೩ ॥

❑ ❑

೨೮೭

ಮಂಗಳಾರತಿ ಪದ

ಆರತಿ ಬ್ಯಳಗಿದೆನೆ ಸದ್ಗುರುವಿಗೊಂ-
ದಾರತಿ ಬ್ಯಳಗಿದೆನೆ
ಆರ ಆರ ಅರರರಿಯದೊಂ-
ದಾರತಿಯ ಬ್ಯಳಗಿದೆನೆ ॥ ಪಲ್ಲ ॥

ಮುತ್ತಿನಾರತಿ ಬ್ಯಳಗಿ ನಾ ಬೇಡುವೆ
ಮುಕ್ತಿದಾಯಕ ಶಿವನ
ಸತ್ಯಕ್ಕ ಚಂಗಳೆಗೊಲಿದ ಮಹದೇವ-
ಗೊಂದಾರತಿ ಬ್ಯಳಗಿದೆನೆ ॥ ೧ ॥

ನೀಲದಾರತಿ ಬ್ಯಳಗಿ ನಾ ಬೇಡುವೆ
ಕಾಲಕಂಧರ ಶಿವನ
ಬಾಲೆ ಕೋಲೂರ ಕೊಡಗೂಸಿ-
ಗೊ[ಲಿ]ದಗೊಂದಾರತಿ ಬ್ಯಳಗಿದೆನೆ ॥ ೨ ॥

ಪವಳದಾರತಿ ಬ್ಯಳಗಿ ನಾ ಬೇಡುವೆ
ಶಿವೆಯ ಪ್ರಾಣೇಶ್ವರನ
ಪವಳದ ಬೊಂಬೆ ಹೊನ್ನಮಳೆಗರದಾತ-
ಗೊಂದಾರತಿ ಬ್ಯಳಗಿದೆನೆ ॥ ೩ ॥

ವಜ್ರದಾರತಿ ಬ್ಯಳಗಿ ನಾ ಬೇಡುವೆ
ಪ್ರಜ್ವಲಿಸುವ ಹರನ
ನಿಶ್ಚಿಂತ ಕಿರಣ ಬ್ರಹ್ಮನಿಗೊಲಿದ-
ಗೊಂದಾರತಿ ಬ್ಯಳಗಿದೆನೆ ॥ ೪ ॥

ಪಚ್ಚೆದಾರತಿ ಬ್ಯಳಗಿ ನಾ ಬೇಡುವೆ
ಶಕ್ತಿದಾಯಕ ಶಿವನ
ಮುಕ್ತಿ ವಿರಕ್ತಿಗೊಲಿದಗೊಂದಾ-
ರತಿ ಬ್ಯಳಗಿದೆನೆ ॥ ೫ ॥

❑ ❑

## ೨೮೮

ಇನ್ಯಾಕೆ ಯಮನ ಚಿಂತಿ ಗುರುರಾಯ
ತನ್ನಂತೆ ಮಾಡಿಕೊಂಡ ಗುರುವೇ
ಇನ್ಯಾಕೆ ಯಮನ ಚಿಂತಿ ॥ ಪಲ್ಲ ॥

ಉಪ್ಪಿನಹರಳು ಹೋಗಿ ಸಾಗರವ
ಅಪ್ಪಿದಂತಾಯಿತಲ್ಲ ಗುರುವೆ
ತಪ್ಪು ತಡೆಗಳನೆಣಿಸದೆ ಗುರುರಾಯ
ಒಪ್ಪಿಸಿದ ತನ್ನ ಪಥವ ಗುರುವೇ
ಇನ್ಯಾಕೆ.......... ॥ ೧ ॥

ಮೂಕಿ ಸಕ್ಕರಿ ಮೆದ್ದುದ ಗುರುರಾಯ
ಮೂಕ ತಾ ಪೇಳಲೇನಾ ಗುರುವೇ
ಏಕಾತ್ಮ ಜ್ಞಾನಬೋಧ ಗುರುರಾಯ
ಐಕ್ಯಸ್ಥಲದಲ್ಲಿರಿಸಿದ ಗುರುವೇ
ಇನ್ಯಾಕೆ......... ॥ ೨ ॥

ಜೋತಿಯೊಳು ಜೋತಿ ಕೂಡಿ ಗುರುರಾಯ
ಪ್ರೀತಿ ಒಂದಾಯಿತಲ್ಲ ಗುರುವೇ
ಜಾತಿ ಕುಲ ಉಳಿಯಲಿಲ್ಲ ಗುರುರಾಯ
ಭ್ರಾಂತಿ ವಿರಹಿತ ಮಾಡಿದ ಗುರುವೇ ॥ ೩ ॥

❑ ❑

೨೮೯

ರಾಗ : ರಾಮಕ್ರೀ

ಉಮೆಯವರನ ನಿಂದಿಪ ನರಗುರಿಗಳು
ದೇವಲೋಕ ಮರ್ತ್ಯಲೋಕಕೆ ಹೊ[ರ]ಗು ॥ ಪಲ್ಲ ॥

ಆ ಕೈಲಾಸನಿವಾಸನ
ಶ್ರೀ ಕಂಠನ ಶಿವನಲ್ಲೆಂಬ
ಕುಹಕವಾದಿಯ ಎದೆಗೂಟವೆಂದೆನುತಲಿ
ನಾ ಕುಟ್ಟುವೆನು ಡಂಗುರವ ॥ ೧ ॥

ಆಕಾಶತತ್ತ್ವವ ಮೀರಿದಾತನ ಮತ್ತೆ
ಆಕಾರವನು ತೊಟ್ಟಾತ್ಮನೆ[ಂ]ದೆಂಬ
ಕುಹಕವಾದಿಯ ಮಾತ ಕೇಳಲೇತಕೆ ಹೇಳು
ಕಾಕರಮೇಲೆ ಹೊಯಿ ಡಂಗುವ ॥ ೨ ॥

ಹನ್ನೆರಡನೆಯ ಲೀಲೆಯ ತಾಳ್ದ
ಸನ್ನುತ ಹರ ವೀರಭದ್ರನು
ಚೆನ್ನಾಗಿ ಧರಿಯಜರಸುವ ತುಳಿದ ಮಹಿಮ
ಪನ್ನಗಧರನ ವರದ ಪುತ್ರನು
ಮುನ್ನಮಾಡಿದ ಸಾಸವ ಕಂಡು ಮೂಢರು
ಚೆನ್ನಾಗಿ ಶಿವನ ಸ್ಮರಿಸಲೊಲ್ಲದೆ
ಉನ್ನತ ಶಿವನಲ್ಲಾತ್ಮನೆಂದೆಂಬ
ಭಿನ್ನರಮೇಲೆ ಹೊಯಿಡಂಗುರವ ॥ ೩ ॥

❑ ❑

೨೯೦

ಮಂಗಳಾರತಿ

ಎತ್ತಿರಿ ಜನ ಮಂಗಳಾರತಿ
ಪಾಡಿರಿ ಜನ ಮಂಗಳಾರತಿ

ನೋಡಿರಿ ಜನ ಮಂಗಳಾರತಿ
ನೋಡಿರಿ ಕೇಳಿರಿ ಜನ ಮಂಗಳಾರತಿ ॥ ಪಲ್ಲ ॥

ಸಿದ್ಧ ವಿದ್ಯಾ ಏಕಾರ್ತಿ ಮಾಡಿ
ಸುದ್ದಾಗಿ ಶಿವಧ್ಯಾನದೊಳ್ಕೂಡಿ
ಎತ್ತಿರಿ ಜನ ಮಂಗಳಾರತಿ ॥ ೧ ॥

ಆಗಲಿ[ಗೆ] ನಿರ್ಮಲಾಜ್ಯವ ಹೊಯ್ದು
ತಗುಲಿಸಿ ಬ್ರಹ್ಮಜ್ಯೋತಿನೆ ತುಂಬಿ
ಎತ್ತಿರಿ ಜನ ಮಂಗಳಾರತಿ ॥ ೨ ॥

ಬೆಳಗಿರೆ ಬೆಳಗಾಖಂಡವಾಗಿ
ಚೆಲುವಾಗಿ ಶಿವಧ್ಯಾನದೊಳ್ಕೂಡಿ
ಎತ್ತಿರಿ ಜನ ಮಂಗಳಾರತಿ ॥ ೩ ॥

❑ ❑

## ೨೯೧

ಎನ್ನ ಗುಣವನು ನೋಡು ನೀನು ಲಿಂಗಯ್ಯ ನಾನು
ನಿನ್ನ ನಂಬಿದವನು ಕಾಣೊ ಲಿಂಗಯ್ಯ ॥ ಪಲ್ಲ ॥

ನೊಂದು ನೊಂದು ನಾನು ಬಳಲಿದೆನೊ ಲಿಂಗಯ್ಯ
ಮುಂದೆ ತೊಳಲಿ ಬಳಲಿದೆನೊ ಲಿಂಗಯ್ಯ ನಿಮ್ಮ
ಕಂದನೆಂದು ರಕ್ಷಿಸಯ್ಯ ಲಿಂಗಯ್ಯ ॥ ೧ ॥

ಮೂರುಮಲವು ಆರುವರ್ನ ಲಿಂಗಯ್ಯ ಎನ್ನ
ಗಾರುಮಾಡಿ ಕಾಡುತಾದೆ ಲಿಂಗಯ್ಯ
ಆರೆನಾರೆನಲಸಿದೆನು ಲಿಂಗಯ್ಯ ಎನ್ನ
ಮರಗೊಡದೆ ಮನ್ನಿಸಯ್ಯ ಲಿಂಗಯ್ಯ ॥ ೨ ॥

ಗಿಳಿಯು ಓದಿ ತನ್ನ ಮಲವ ಲಿಂಗಯ್ಯ ತಿಂದು
ನಲಿದು ನಲಿದು ಆಡುವಂತೆ ಲಿಂಗಯ್ಯ

ಹಲವನೋದಿ ಎನ್ನ ಮನವು ಲಿಂಗಯ್ಯ ತ್ರೈ
ಮಲಕ್ಕೆ ಮಚ್ಚಿ ಬಿಡ[ದು] ಲಿಂಗಯ್ಯ ॥ ೩ ॥

ಮರ್ತ್ಯಲೋಕದೊಳಗೆ ಬಂದು ಲಿಂಗಯ್ಯ ನಾನು
ವ್ಯರ್ಥನಾಗಿ ಹೋಗುತಿಹೆನೊ ಲಿಂಗಯ್ಯ
ಸತ್ತು ಹುಟ್ಟುವದನು ಬಿಡಿಸೊ ಲಿಂಗಯ್ಯ
ನಿತ್ಯ ನಿಜವೆಂದೆನಿಸೊ ಲಿಂಗಯ್ಯ ॥ ೪ ॥

ಎಷ್ಟು ಪರಿಯಲಿ ತನುವ ಹೊರಿವೆ ಲಿಂಗಯ್ಯ ಇದು
ನಷ್ಟವಾಗಿ ಹೋಗುತಾದೆ ಲಿಂಗಯ್ಯ
ಖೊಟ್ಟನೆಂದೆನಿಸಬೇಡ ಲಿಂಗಯ್ಯ ಸ್ಥಿರ –
ಪಟ್ಟದ ಕೈಲಾಸಕೊಯ್ಯೊ ಲಿಂಗಯ್ಯ ॥ ೫ ॥

❑ ❑

೨೯೨

ಕರದಳು ತನ್ನ ಮಗನ ಶ್ರೀ ಪಾರ್ವತಿ ಕರದಳು ॥ ಪಲ್ಲ ॥

ಮುದ್ದುಮುಖದ ಮೇಲೆ ತಿದ್ದಿದ ವಿಭೂತಿ
ಕ್ಷುದ್ರ ದೈವದಗಂಡ ರುದ್ರ ನೀ ಬಾರೆಂದು ಕರದಳು ॥ ೧ ॥

ಖಡ್ಗ ಹಲಿಗೆ ಬಾಣ ಕಡಿದು ದೈತ್ಯರ ಮೇಲೆ
ಹೊಡೆದು ದೂಷಕರ ತಲೆಯಗಡಿದು ನೀ ಬಾರೆಂದು ಕರದಳು ॥ ೨ ॥

ಘಣೆಘಗದ ಗಂಟೆಯು ಝುಣಝುಣರೆನುತಲಿ
ಬಣಗುದೈವದ ಗಂಡ ತ್ರಿಣಯ ನೀ ಬಾರೆಂದು ಕರದಳು ॥ ೩ ॥

❑ ❑

೨೯೩

ಗುರುವಿನ ಮಹಿಮೆಯ ಗುರುವೆ ತಾ ಬಲ್ಲನು ಚಂದಮಾಮ ಮೂಢ
ನರರೇನು ಬಲ್ಲರು ನಡು ಕಂಗ[ಳ] ಜ್ಯೋತಿಯ ಚಂದಮಾಮ ॥ ಪಲ್ಲ ॥

ಒಂಬತ್ತು ಹೂವಿಗೆ ಒಂದೆ ನಾಳವು ಚಂದಮಾಮ ಅಲ್ಲಿ
ತುಂಬಿತು ಶತಕೋಟಬಿಂಬ ಭಾನುಪ್ರಭೆ ಚಂದಮಾಮ
ಇಂಬುಗೊಂ[ಡೊಳಗೆ] ತೇಜದ ಬೆಳಕಾದುದು ಚಂದಮಾಮ ಚಿ-
ದಂಬರ ರೂಪಿನ ಕಂಬವು ಸುಖದಾಟ ಚಂದಮಾಮ ॥ ೧ ॥

ತೇರು ತಾನೊಂದೆ ಸಾರಥಿ ಕಲೆ ನಾಲ್ಕು ಚಂದಮಾಮ ಮೂರು
ಮೂರು ಮೂರು ಬಾಲಿಯೆಂದು ತೂಗಾವು ಚಂದಮಾಮ
ಭಾರಿ ಸಂಕೋಲೆಯಂತೆ ಝುಲ್ಲಿಗಳೆರಡುಂಟು ಚಂದಮಾಮ
ಧೀರರ X ಷಮಾಡುವುದೊಂದು ಹೊರಜೆಯು ಚಂದಮಾಮ ॥ ೨ ॥

ವೃಕ್ಷವು ಒಂದಕ್ಕೆ ಕೊಂಬೆಗಳ್ಮೂರುಂಟು ಚಂದಮಾಮ ಅಲ್ಲಿ
ಪಕ್ಷಿಗಳೆರಡು ಆಶ್ರಯವಾಗಿದೆ ಚಂದಮಾಮ
ಭಕ್ಷಿಸುತಿದೆ ಒಂದು ಸಾಕ್ಷಿಯಾಗಿಹುದೊಂದು [ಚಂದಮಾಮ] ಇದ
ಕುಕ್ಷಿ XX ವಲ್ಲ ತಿಳಿದಾತ ಸಾಕ್ಷಾತ ಪರಬ್ರಹ್ಮ ಚಂದಮಾಮ
ಗುರುವಿನ ಮಹಿಮೆಯ.......... ॥ ೩ ॥

□ □

೨೯೩

ಜಯದೇವ ಜಯದೇವ ಜಯ ಮಹಾಲಿಂಗ
ಆರತಿ ಬೆಳಗುವೆ ನಿಮಗೆ ಅಪರಂಪರಸಂಗ
ಜಯದೇವ......... ॥ ಪಲ್ಲ॥

ಬೆಳಗಿನಾರಿತಿ ಮಾಡಿ ಬೆಳಗುವೆನು ನೋಡಿ
ಪೊಳೆವ ಸದ್ಗುಣರೂಪ ಶಿವನ ಕೊಂಡಾಡಿ
ಜಯದೇವ ....... ॥ ೧ ॥

ಪರಿಪರಿಯ ಚಿತ್ರವಿಚಿತ್ರವನೆ ಮಾಡಿ ಚಿ-
ದ್ರೂಪ ಚಿನ್ಮಯ ಮಿಂಚುಮಂಟಪವ ನೋಡಿ
ಜಯದೇವ .... ॥ ೨ ॥

ಅಂಗಲಿಂಗೈಕ್ಯ ಮಹಲಿಂಗನೆ ಮರಂಗ ?
ಆರತಿ ಬೆಳಗುವೆ ನಿಮಗೆ ಅಪರಂಪರಸಂಗ
ಜಯದೇವ ॥ ೩ ॥

 

೨೯೫

ಜ್ಯೋತಿಯೊಳಗೊಂದು ಜ್ಯೋತಿ ಬೆಳಗುತಿದೆ
ನೀತಿಳಿಯದೆಯತ್ತಿತ್ತಾಡುವೆ ತನುಜ ॥ ಪಲ್ಲ ॥

ಎಣ್ಣೆ ಬತ್ತಿಗಳ ಹಂಗಿಲ್ಲದ ಜ್ಯೋತಿ
ಉಣ್ಣಲೆಳಸುವರ ಕಾಣದ ಜ್ಯೋತಿ
ಬಣ್ಣಸರವ ನುಂಗಿಯುಗಳದ ಜ್ಯೋತಿ
ಕಣ್ಣಿಗೆ ರಚನೆಗೊಪ್ಪುವ ಜ್ಯೋತಿ ॥ ೧ ॥

ವೇದ ಬ್ರಹ್ಮಾಮೃತವೆಸೆ[ವ] ಪಾತ್ರ ಜ್ಯೋತಿ
ಮೇದಿನಿಯುಪರಿಯೊಳಮಳ ಸು ಜ್ಯೋತಿ
ಕಾದಂಬನಿಯೊಳಗಚಲಿತ ಜ್ಯೋತಿ
ಶೋಧಿತ ತತ್ತ್ವವದೆನಿಪ ಜ್ಯೋತಿ ॥೨ ॥

ನೀರಕೊಡನೊಳಿರ್ದು ನಂದದ ಜ್ಯೋತಿ
ಮೂರುಬಣ್ಣದೊಳು ಪ್ರಕಾಶಿಪ ಜ್ಯೋತಿ
ತಾರಕೆಯಂದದಿ ಬೆಳಗುವ ಜ್ಯೋತಿ
ಸಾರವಾರನು ಸತ್ಯೆನಿಸುವ ಜ್ಯೋತಿ ॥ ೩ ॥

ನೀರದೀಪವೆನಿಸೊಪ್ಪುವ ಜ್ಯೋತಿ
ಸೂರಾಗ್ನಿಶಶಿಗಳನೊಳಕೊಂಡ ಜ್ಯೋತಿ
ಮೇರು ರಜತಗಿರಿ ಮೇಲಿರ್ಪ ಜ್ಯೋತಿ
ವಾರಿಜದಳಮಧ್ಯ ಗಗನಸ್ಥ ಜ್ಯೋತಿ ॥ ೪ ॥

ಬೋರೆಮುಳ್ಳಿನ ಮೊನೆಯೊಳು ಸೂಕ್ಷ್ಮ ಜ್ಯೋತಿ
ಈರೇಳು ಲೋಕವ ಬೆಳಗುವ ಜ್ಯೋತಿ

ಧೀರರ ದಯಾಹೃದಯವೆ ಜ್ಯೋತಿ
ನೀರ ನಿರಂಜನ ನಿರುಪಮ ಜ್ಯೋತಿ ॥ ೫ ॥

□ □

## ೨೯೬

ನಿಜದ ನೆನಹು ನಿನಗಿರಲಿ ಚೆಲ್ವಿ
ಅಜನಲಿಖಿತದಿ ಬಂದುದೆಲ್ಲ ಬರಲಿ ॥ ಪಲ್ಲ ॥

ಹುಟ್ಟಿ ಬಹಾಗ ತಂದುದಿಲ್ಲ ಶಿವ
ಕೊಟ್ಟ ಸರ್ವಸ್ವ ಸಂಗಡ ಬಾಹದಲ್ಲ
ಬಟ್ಟಬಯಲಾಗುವುದಲ್ಲ ಮನ
ಮುಟ್ಟ ಧ್ಯಾನಿಸು ಗುರುನಾಥ ಸೊಲ್ಲ ॥ ೧ ॥

ಸುಖ ಸುಗ್ಗಿ ಕಾಯ ನಂಬಬೇಡ ಬಹು
ದುಃಖ ತಂದೊಡ್ಡುವುದಕೆ ತಡಮಾಡ
ಸುಖ ದುಃಖ [illegible]ನೋಡ ನಿಚ್ಚ
ಮುಕುತಿಮಾರ್ಗದಲಿ ಚಿತ್ತವನಿಡು ಬೇಗ ॥ ೨ ॥

ನಿನ್ನೊಳು ಶೋಧಿಸಿ ನೋಡು ಪ್ರ-
ಸನ್ನನಾಗಿಹ ಪ್ರಕಾಶದೊಳೋಲಾಡು
ಭಿನ್ನಭಾವನೆಯನೀಡಾಡು
[illegible]ಗುರುವಿನಮಲಸಂಧಾನ ಪಾಡು ॥ ೩ ॥

□ □

## ೨೯೭

ರಾಗ : ಜಾವಡಿ

ಯಾತಕೆನ್ನೊಳು ಮುನಿಸು ಸದ್ಗುರುರಾಯ
ಯಾತಕೆನ್ನೊಳು ಮುನಿಸು
ಪ್ರೀತಿಯಿಂದಲಿ ಎನ್ನ ಧಾತು ತಿಳಿಯದೆ ಸಂ-
ಪ್ರೀತಿಯೊಳಿರು ರನ್ನ ॥ ಪಲ್ಲ ॥

ಕನಕಮಣಿಮಂಚದೆಡೆಗೆ ಬಾರೆಂದು ಎನ್ನ
ಅಣಕಾವಾಡುತ ಜರಿದೆ
ದಿನಕರಕೋಟಿಪ್ರಕಾಶನೆ ನೀನ್ನ ಗುಣವ ನೋಡಡೆ ಸು–
ಮ್ಮನೆದ್ದು ಪೋಗುವರೆ ರನ್ನ ॥ ೧ ॥

ಇದ್ದಲ್ಲಿ ನಾನು ಹೋಗಿ ಕರವ ಹಿಡಿದು ಎದ್ದು ಬಾ–
ರೆಂದು ಕರೆದೆ ಮುದ್ದುಮುಖದ ರನ್ನ
ಸತ್ಪುರುಷನೆ ನಿನ್ನ ಗದ್ದ ಹಿ–
ಡಿದು ಬೇಡಿಕೊಂಡರ ಬಾರನೊ ॥ ೨ ॥

ಎಣ್ಣೆಯೋಳಿಗೆಯು ತುಪ್ಪ ಸಕ್ಕರೆ ಹಾಲು
ಹಣ್ಣು ಕಜ್ಜಾಯಗಳ
ಸಣ್ಣಹರಿವಾಣದೊಳು ಎಡೆಮಾಡಿ ತಂದರೆ
ಉಣ್ಣದೆ ಪೋಗುವದು ಸಣ್ಣವರೊಳಾಟವೆ ॥ ೩ ॥

❑ ❑

೨೯೮

ಲಿಂಗವಂತರಿವರಲ್ಲ ಹೀನ
ಜಂಗುಳಿ ದೈವಕ ಎರಗುವರಲ್ಲ ॥ ಪಲ್ಲ ॥

ಮಾರಹರಲಿಂಗ ಮುಂಡೊಳಗಿದ್ದು
ಊರ ದೇವತಿ ಮುಂದ ಉಚಕ ಬಿದ್ದು
ಹಾರ್ಕೈ[ಸಿ] ಭಂಡಾರ ಧರಿಸಲು ಎದ್ದು ಇ
ವರೆಲ್ಲ ಯಮಪುರಕೆ ಹೋದಾರು ಎದ್ದು ॥ ೧ ॥

ಹಿಂಡಿ ಪಲ್ಯ ಕಡಬು ಹಿತವಾಗಿ ಮಾಡಿ
ಮಂಡಿಸಿ ಮನೆಯೊಳ[ಗೆಲ್ಲ]ರ ಕೂಡಿ
ಉಂಡಮ್ಯಾಲ ಉರದ ಲಿಂಗ xxxವಂಥ
ಗುಡುಮಾಗೆ ಧರಿಸಿದ ಗುರುಯಂಥ ಖೋಡಿ ॥ ೨ ॥

ಲಿಂಗವ ಶಿವನೆಂದು ಪೂಜಿಸಬಲ್ಲ –
ರಂಗವಿಟ್ಟು ಎರಗಿ ಕೇಳುವರೆಲ್ಲ
ತಂಗಿ ತಾಯಿಯೆಂಬುವ ತಪ್ಪುವರೆಲ್ಲ
ಜಂಗಮವೆಂದರ ಹಿಡಿವರು ಕಲ್ಲ ॥ ೩ ॥

ವೀಭೂತಿ ರುದ್ರಾಕ್ಷಿxx ಗುರುವೆಂದು
ಸೋಬಿಸಿ ಸಳಿಗೆ ಸೊxx ಕೊಂಬ
ಜೀಬಿನಾಣ್ಯವನಿಟ್ಟು ಜೀತವ ತಿಂಬ
ಕಾಬಾಗ ಬಂದಲ್ಲಿ ತಪ್ಪಿಸಿಕೊಂಬ. ॥ ೪ ॥

ಹೇಮ ಹಿತ್ತಾಳಿಗೆ ಹೆಚ್ಚು ಕುಂದಿಲ್ಲ
ಗ್ರಾಮರ್ಕೈತರಿಗೆ ಗೌರಘನವಿಲ್ಲ
ಪ್ರೇಮದಿ ಪೊರವನೆ ಶಿವನೆಂಬ ಸೊಲ್ಲ
ಕಾಮಾರಿಗಾಣದೆ ಕ್ರಮಗೆಟ್ಟರೆಲ್ಲ ॥ ೫ ॥

 

## ೨೯೯

### ರಾಗ : ಗೌಡಿ

ಲಿಂಗವಂತ[ರೆ]ಲ್ಲ ಭಕ್ತರೆನ್ನಬಹುದೆ?
ಅಂಗಕ್ಕೆ ಆಚಾರವಳವ[ಡ]ದೆ ಶಿವನೇ ?
ಅಂಗದೊಳು ಲಿಂಗವಿದ್ದು ಜಂಗುಳಿ ದೈವಂಗಳಿಗೆ
ಹಿಂಗದೆ ಕರವೆತ್ತಿ ಮುಗಿವುತಿಹರು
ಭಂಗಭವಿಗಳೆಲ್ಲ ಮುಂಗಾಣ[ದೆ] ನಡುವುತ್ತಿಹ
ಕಂಗುರುಡರೆಲ್ಲರ ಭಕ್ತರೆನ್ನಬಹುದೆ ? ॥ ೧ ॥

ಕಾಸು ವೀಸಕಾಗಿ ಮನ ಹೇಸದೆ ಬಳಲುತಿಹ –
ರಾಸೆಗೆ ನಸುತ ? ತನ್ನ ಪಿತನ ದೇಶದೊಳಗೆ
ಕ್ಲೇಶವ ಬಿಟ್ಟು ರಾಸಿ ದೈವ[ವ] ಕಲ್ಪಿಸುತ್ತಿಹ
ಪಾಷಂಡ ಮೂಳರಿಗೆ ಭಕ್ತರೆನ್ನಬಹುದೆ ? ॥ ೨ ॥

ಮಾನ್ಯವು [ದಶ]ಸ್ಥಾನಗುಂದಿಸುವದಂತೆ ತಾ
ತನ್ನ ದಾನ್ಯಗುಂದಿಸುವುದು
ಮಾನ್ಯ ಜನ್ಮಕೆ ಬಂದು ಬಣಗನಾಗಿ ಬಾಯ ತೆರವ
ಸ್ವಾನನಿಂದ ಹೀನರಿಗೆ ಭಕ್ತರೆನ್ನಬಹುದೆ ? ॥ ೩.॥

❑ ❑

೩೦೦

ರಾಗ : ಮುಖಾರಿ

ಹೇಳೆನಗೆ ತಿಳಿಯದಿದೆ ಪೊಸ ಜವ್ವನದ ನೀರೆ ಭಾವೆ
ನಲ್ಲನೊಳಿರುತ ಪರರ ನೆನೆದುದನು ॥ ಪಲ್ಲ ॥

ಮರಿದುಂಬೆಗುರುಳೆ ಮಾನಿನಿಯೆ ಮೋಹದಿ ತನು
ಹರಣದಿನಿಯನರುಷಬಿಡದೆ ನೋಡಿ
ಹರುಷದಿಯರವೇರಿ ? ಹರಿಣಾಕ್ಷಿ ತಾನಾಗ
ಮರುತಸುತನನುನುಜನ್ಯೆಯ್ಯನ ನೆನೆದ ಪರಿಯ ॥ ೧ ॥

ಕನಕ ನಿರ್ಮಿತವಾದಿ ತೂಗುಮಂಚದ ಮೇಲೆ
ಮನವೇಕವಾಗಿ ಪರವಶದೊಳಾಗ
ತನುಪುಳಕವೇರಿ ಶಾಂತನ ಕರದೊಳಮರ್ದಪ್ಪಿ
ಮನಸಿಜನ ಮಗನ ಮಾವನ ನೆನೆದ ಪರಿಯ ॥ ೨ ॥

ತನ್ನ ಕಲೆಯರಿತು ಕೂಡುವಳ ಸ್ವನರಸಿಗನ ?
ಚೆನ್ನಾಗಿ ಸ್ತುತಿಸಿ ಬಹು ಪ್ರೀತಿಯಿಂದ
ಕನ್ಯೆಯರ ವ್ರತವನಳಿದವನ ಪೆಗಲಲ್ಲಿ ಪೊತ್ತು
ಮನ್ನಣೆಯೊಳಿಹನ ವೈರಿಯ ನೆನೆದ ಪರಿಯ ॥ ೩ ॥
❑ ❑

# ಅನುಬಂಧಗಳು

## ೧. ಸ್ವರವಚನಗಳ ಅಕಾರಾದಿ

## ೨. ಸ್ವರವಚನಗಳ ಆಕರಸೂಚಿ

೧. (ಓ) ೩೯೨ (ಬಿಡಿಗರಿ) ಬೃಹನ್ಮಠ (ಚಿ)
೨. (ಕಾ) ೧೧೮೧ (ಕೊನೆಹಾಳೆ) ಕ. ಅ. ಕೇಂ. (ಬೆಂ)
೩. (ಕಾ) ಸ್ವಂತ ಸಂಗ್ರಹ
೪. (ಕಾ) ಕ. ಅ. ಕೇಂ. (ಚಿ)
೫. (ಕಾ) ಬಸವ ಭವನ (ಬೆಂ)
೬. (ಓ) ಶ್ರೀ ಉಮೇಶಚಂದ್ರ (ಕೆಂಗೇರಿ)
೭. (ಓ) ೪೩೪ (೨೧ ಹಿಂ – ೨೨ ಹಿಂ) ಧರ್ಮಸ್ಥಳ
೮. (ಓ) ೧೮೫ (೧೦ ಹಿಂ – ೧೧ ಮುಂ) ಬೃಹನ್ಮಠ (ಚಿ)
೯. (ಓ) ಕ. ಅ. ಕೇಂ. (ಬೆಂ)
೧೦. (ಕಾ) ೧೬೨೭ (೫೪ ಮುಂ) ಕಂ. ಅ. ಕೇಂ. (ಬೆಂ)
೧೧. ಓ ೧೨೫೩ (೪೯ ಮುಂ + ಹಿಂ) ಕ. ಅ. ಸಂ. (ಮೈ)
೧೨. ಶ್ರೀ ಪಿ. ಎಂ. ಗಿರಿರಾಜು (ಮೈ)
೧೩. (ಓ) ೩೬೮ (ಮೊದಲಗರಿ) ಬೃಹನ್ಮಠ (ಚಿ)
೧೪. (ಓ) ಶ್ರೀ ಉಮೇಶಚಂದ್ರ (ಕೆಂಗೇರಿ)
೧೫. (ಕಾ) ೯೫೬ (೧೭ ಮುಂ – ೧೮ ಮುಂ) ಕ. ಅ. ಕೇಂ. (ಬೆಂ)
೧೬. (ಕಾ) ಕ. ಅ. ಕೇಂ (ಬೆಂ)
೧೭. (ಕಾ) ೧೩೯೮ (೬೭ ಹಿಂ–೬೮ ಹಿಂ) ಕ. ಅ. ಕೇಂ. (ಬೆಂ)
(ಓ) ಶ್ರೀ ಉಮೇಶಚಂದ್ರ ( ಕೆಂಗೇರಿ)
೧೯ (ಕಾ) ಕೆ. ಬಿ. ೫೪೦ (೫೧) ಕ. ಅ. ಸಂ. (ಮೈ)
೨೦. (ಕಾ) ಕೆ. ಬಿ. ೫೪೦ (೫೦–೫೨) ಕ. ಅ. ಸಂ. (ಮೈ)
೨೧. (ಕಾ) ಕೆ. ಬಿ. ೫೪೦ (೬–೭) ಕ. ಅ. ಸಂ. (ಮೈ)
೨೨. (ಕಾ) ಕೆ. ಬಿ. ೫೪೦(೨೩–೪) ಕ. ಅ. ಸಂ. (ಮೈ)
೨೩. (ಓ) ೧೯೬೯ (೩ ಹಿಂ–೪ ಮುಂ) ಕ. ಸಂ. ಸಂ. (ಧಾ)
೨೪. (ಕಾ) ೫೪೦ (೪೩–೪) ಕ. ಅ. ಸಂ. (ಮೈ)
೨೫. (ಕಾ) ೫೪೦ (೩೬–೭) ಕ. ಅ. ಸಂ. (ಮೈ)
೨೬. (ಕಾ) ೫೪೦ (೩೫) ಕ. ಅ. ಸಂ. (ಮೈ)
೨೭. (ಕಾ) (೩೬–೭) ಕ. ಅ. ಸಂ. (ಮೈ)
೨೮. (ಕಾ) ೫೪೦ (೫೨–೩) ಕ. ಅ. ಸಂ. (ಮೈ)
೨೯. (ಕಾ) ೫೪೦ (೪೦) ಕ. ಅ. ಸಂ. (ಮೈ)

೩೦. (ಕಾ) ೫೪೦ (೩೦) ಕ. ಅ. ಸಂ. (ಮೈ)
೩೧. (ಕಾ) ೫೪೦ (೩೯) ಕ. ಅ. ಸಂ. (ಮೈ)
೩೨. (ಓ) ೧೭೮೮ (೫೫ ಹಿಂ – ೫೬ ಮುಂ) ಕ. ಅ. ಸಂ. (ಮೈ)
೩೩. (ಕಾ) ೫೪೦ (೨೩) ಕ. ಅ. ಸಂ. (ಮೈ)
೩೪. (ಕಾ) ೫೪೦ (೩೨–೩) ಕ. ಅ. ಸಂ. (ಮೈ)
೩೫. (ಕಾ) ೫೪೦ (೩೮) ಕ. ಅ. ಸಂ. (ಮೈ)
೩೬. (ಕಾ) ೬೩೮ (೭ ಹಿಂ) ಕ. ಅ. ಕೇಂ. (ಬೆಂ)
೩೭. (ಕಾ) ೧೭೪೭ (೪೦ಹಿಂ–೪೧ಮುಂ) ಕ. ಅ. ಕೇಂ. (ಬೆಂ)
೩೮. (ಕಾ) ೧೭೪೭ ೧೭೪೭ (೬ ಹಿಂ–೭ ಹಿಂ) ಕ.ಅ. ಕೇಂ. (ಬೆಂ)
೩೯. (ಕಾ) ೫೪೦ (೪೨) ಕ. ಅ. ಸಂ (ಮೈ)
೪೦. (ಕಾ) ೫೪೦ (೫೧–೨) ಕ. ಅ. ಸಂ. (ಮೈ)
೪೧. (ಕಾ) ೫೪೦ (೫೧–೨) ಕ. ಅ. ಸಂ. (ಮೈ)
೪೨. (ಕಾ) ೫೪೦ (೩೧–೨) ಕ. ಅ. ಸಂ. (ಮೈ)
೪೩. (ಕಾ) ೫೪೦ (೩೨) ಕ. ಅ. ಸಂ. (ಮೈ)
೪೪. (ಕಾ) ೫೪೦ (೩೨) ಕ. ಅ. ಸಂ (ಮೈ)
೪೫. (ಕಾ) ೫೪೦ (೩೫–೬) ಕ. ಅ. ಸಂ. (ಮೈ)
೪೬. (ಕಾ) ೫೪೦ (೪೪) ಕ. ಅ. ಸಂ. (ಮೈ)
೪೭. (ಓ) ೧೭೪೭ (೨ ಮುಂ – ೩ ಮುಂ) ಕ. ಅ. ಕೇಂ. (ಬೆಂ)
೪೮. (ಕಾ) ೫೪೦ (೪೪–೫) ಕ. ಅ. ಸ (ಮೈ)
೪೯. (ಕಾ) ೫೪೦ (೪೪–೫) ಕ. ಅ. ಸಂ. (ಮೈ)
೫೦. (ಕಾ) ೫೪೦ (೫೨) (೩೭–೮) ಕ. ಅ. ಸಂ. (ಮೈ)
೫೧. (ಕಾ) ೫೪೦ (೪೬) ಕ. ಅ. ಸಂ. (ಮೈ)
೫೨. (ಕಾ) ೫೪೦ (೫೨) ಕ. ಅ. ಸಂ. (ಮೈ)
೫೩. (ಓ) ೧೯೬೯ (ಮುಂ) ಕ. ಅ. ಸಂ. (ಮೈ)
೫೪. (ಓ) ೧೭೪೭ (೫ ಹಿಂ – ೬ ಹಿಂ) ಕ. ಅ. ಕೇಂ (ಬೆಂ)
೫೫. (ಕಾ) ಬೇಲಿಮಠ (ಬೆಂ); (ಓ) ೧೩೬೯ (೪ನೇ) ಕ. ಸಂ. ಸಂ. (ಧಾ)
೫೬. (ಓ) ೨ (೭೩ನೇ) ಕ. ಸಾ. ಪ. (ಬೆಂ)
೫೭. (ಕಾ) ೫೪೦ (೫೮–೯) ಕ. ಅ. ಸಂ. (ಮೈ)
೫೮. (ಕಾ) ೫೪೦ (೯) ಕ. ಅ. ಸಂ. (ಮೈ)
೫೯. (ಕಾ) (೫೦) ಕ. ಅ. ಸಂ. (ಮೈ)
೬೦. (ಕಾ) ೫೪೦ (೩೩) ಕ. ಅ. ಸಂ. (ಮೈ)

೬೧. (ಕಾ) ೫೪೦ (೪೦) ಕ.ಅ.ಸಂ (ಮೈ)
೬೨. (ಓ) ೧೭೪೭ (೯ ಹಿಂ–೧೦ ಮುಂ) ಕ.ಅ.ಕೇಂ. (ಬೆಂ)
೬೩. (ಓ) ಶ್ರೀ ಉಮೇಶಚಂದ್ರ (ಕೆಂಗೇರಿ)
೬೪. (ಕಾ) ೫೪೦ (೪೩) ಕ.ಅ.ಸಂ. (ಮೈ)
೬೫. (ಓ) ೭೪೬/೨ (೧೧೮ ಹಿಂ – ೧೧೯ ಹಿಂ) ಬೃಹನ್ಮಠ (ಚಿ)
೬೬. (ಕಾ) ೫೪೦ (೩೫) ಕ.ಅ.ಸಂ. (ಮೈ)
೬೭. (ಕಾ) ೫೪೦ (೩೫) ಕ.ಅ.ಸಂ. (ಮೈ)
೬೮. (ಕಾ) ೫೪೦ (೫೦–೧) ಕ.ಅ.ಸಂ. (ಮೈ)
೬೯. (ಓ) ೪೦೬ (ಬಿಡಿಗರಿ) ಕ.ಅ.ಕೇಂ. (ಬೆಂ)
೭೦. (ಕಾ) ೫೪೦ (೩–೪) ಕ.ಅ.ಸಂ. (ಮೈ)
೭೧. (ಕಾ) ೫೪೦ (೨೨–೩) ಕ.ಅ.ಸಂ. (ಮೈ)
೭೨. (ಕಾ) ೯೨೫ (೬ ಹಿಂ) ಕ.ಅ.ಕೇಂ. (ಬೆಂ)
೭೪. (ಕಾ) ೫೪೦ (೪೧–೨) ಕ.ಅ.ಸಂ. (ಮೈ)
೭೫. ?
೭೬. (ಓ) ೨೮೧ (ಕೊನೆಗರಿ) ಧರ್ಮಸ್ಥಳ
೭೬ಎ (ಓ) ೧೭೩ (೯ ಮುಂ) ಕ.ಅ.ಕೇಂ. (ಬೆಂ)
೭೭. (ಕಾ) ಬೇಲಿಮಠ (ಬೆಂ)
೭೯. (ಕಾ) ೯೫೬ (೧೪ ಹಿಂ – ೧೫ ಹಿಂ) ಕ. ಅ. ಕೇಂ. (ಬೆಂ)
೮೦. (ಓ) ೫೦೩ (೬೧ ಹಿಂ – ೬೨ ಮುಂ) ಬೃಹನ್ಮಠ (ಚಿ)
೮೧. (ಓ) ೧೬೭ (ಅನೇ) ಬೃಹನ್ಮಠ (ಚಿ)
೮೨. (ಓ) ೧೭೧೧ (೧ ಮುಂ) ಕಂ.ಅ.ಕೇಂ. (ಬೆಂ)
೮೩. (ಓ) ೩೦೨ (೬೯ ಹಿಂ) ಬೃಹನ್ಮಠ (ಚಿ)
೮೪. (ಕಾ) ೬೬೬ (೨೨–೩ರ ನಡುವೆ ) ಕ. ಅ. ಕೇಂ. (ಬೆಂ)
೮೫. (ಕಾ) ೯೭೫ (೧೪ ಹಿಂ) ಕ.ಅ.ಕೇಂ. (ಬೆಂ)
೮೬. (ಕಾ) ೧೬೨೭ (೪೫ ಮುಂ) ಕ.ಅ.ಕೇಂ. (ಬೆಂ)
೮೭. (ಕಾ) ೧೪೦೦ (೬೮ ಹಿಂ – ೬೯ ಮುಂ)
೮೮. (ಓ) ಡಾ| ಕೆ. ರಾಘವೇಂದ್ರರಾವ್ (ಮೈ)
೮೯. (ಕಾ) ೯೫೬ (೨೩ ಹಿಂ – ೨೪ ಮುಂ) ಕ.ಅ.ಕೇಂ. (ಬೆಂ)
೯೦. (ಓ) ೭೧೪ (೩೨ ಮುಂ) ಬೃಹನ್ಮಠ (ಚಿ)
೯೧. (ಕಾ) ೨೪೦೫ (೪೩ ಮು) ವ.ವಾ.ಭಾಂ. (ಧಾ)
೯೨. (ಕಾ) ೩೯೭ (೧೭) ತೋಂಟದಾರ್ಯಮಠ (ಗದಗ)

೯೩. (ಓ) ೪೨೭ (೧೯ನೇ) ಕ.ಅ.ಕೇಂ. (ಬೆಂ)
೯೪. (ಕಾ) ೧೬೨೭ (೪೧ ಮುಂ) ಕ.ಅ.ಕೇಂ.(ಬೆಂ)
೯೫. (ಕಾ) (೧೬೨೭) (೪೧ ಮುಂ) ಕ.ಅ.ಕೇಂ. (ಬೆಂ)
೯೬. (ಕಾ) ೧೬೨೭ (೪೧ ಮುಂ) ಕ.ಅ.ಕೇಂ. (ಬೆಂ)
೯೭. ೨೪೧೩ (೧೩೦ ಹಿಂ) ವ.ವಾ.ಭಾಂ. (ಧಾ)
೯೮. ೩೬೨೩(೧೦೮ ಮುಂ) ವ.ವಾ.ಭಾಂ. (ಧಾ)
೯೯. (ಓ) ೬೮೨ (೪೯ ಹಿಂ – ೫೦ ಮುಂ) ಬೃಹನ್ಮಠ (ಚಿ)
೧೦೦. (ಕಾ) ೧೦೧೮ (೩೪ಮುಂ) ಕ.ಅ.ಕೇಂ. (ಬೆಂ)
೧೦೧. (ಓ) (ಬಿಡಿಗರಿ) ಬೃಹನ್ಮಠ (ಚಿ)
೧೦೨. (ಕಾ) ಬಸವಭವನ (ಬೆಂ)
೧೦೩. (ಕಾ) ಬಸವಭವನ (ಬೆಂ)
೧೦೪. (ಕಾ) ಬಸವಭವನ (ಬೆಂ)
೧೦೫. (ಕಾ) ಭಸವಭವನ (ಬೆಂ)
೧೦೬. (ಕಾ) ೧೦೨೧ (೧೫ ಮುಂ) ಕ.ಅ.ಕೇಂ. (ಬೆಂ)
೧೦೭. (ಓ) ೧೯೬೭ (೪ ಮುಂ) ಕ.ಸಂ.ಸಂ. (ಧಾ)
೧೦೮. (ಕಾ) ಶ್ರೀ. ಬಿ.ಗಂಗಶೆಟ್ರು (ಕನಕಪುರ)
೧೦೯. (ಕಾ) ೯೫೬ (೫೨–೫೩ಮುಂ) ಕ.ಅ.ಕೇಂ. (ಬೆಂ)
೧೧೦. (ಕಾ) ಕ.ಅ.ಕೇಂ. (ಬೆಂ)
೧೧೧. (ಕಾ) ಕ.ಅ.ಕೇಂ. (ಬೆಂ)
೧೧೨. (ಓ) ೧೯೧ (೧೬ ಮುಂ) ಬೃಹನ್ಮಠ (ಚಿ)
೧೧೩. (ಓ) ೭೪೫ (೭೬ಹಿಂ) ಬೃಹನ್ಮಠ (ಚಿ)
೧೧೪. (ಓ) ೭೪೫ (೭೬ಹಿಂ) ಬೃಹನ್ಮಠ (ಚಿ)
೧೧೫. (ಓ) ೭೪೫ (೭೭ಮುಂ) ಬೃಹನ್ಮಠ (ಚಿ)
೧೧೬. ೭೪೫ (೭೬ ಹಿಂ–೭೭ ಮುಂ) ಬೃಹನ್ಮಠ (ಚಿ)
(ಕಾ) ೧೪೩೯ (೧೪೬–೪೭) ಕ.ಅ.ಕೇಂ. (ಬೆಂ)
೧೧೭. (ಕಾ) ಬಸವಭವನ (ಬೆಂ)
೧೧೮. (ಓ) ಕ.ಅ. ಕೇಂ. ( ಬೆಂ)
೧೧೯. (ಕಾ) ೬೩೮ (೭೫ ಮುಂ) ಕ.ಅ.ಕೇಂ. (ಬೆಂ)
೧೨೦ (ಓ) ೧೮೫ (೧ ಹಿಂ–೨ಮುಂ) ಬೃಹನ್ಮಠ (ಚಿ)
೧೨೧. ?
೧೨೨. (ಓ) ಕ.ಅ.ಕೇಂ. (ಬೆಂ)

೧೨೩. (ಕಾ) ೨೬೫ (೧೭೦ಮುಂ ಹಿಂ) ಧರ್ಮಸ್ಥಳ

೧೨೪. (ಕಾ) ೨೬೫ (೧೭೦ ಹಿಂ–೧೭೧ ಮುಂ) ಧರ್ಮಸ್ಥಳ

೧೨೫. (ಕಾ) ೨೬೫ (೧೭೧ ಹಿಂ – ೧೭೨ ಮುಂ) ಧರ್ಮಸ್ಥಳ

೧೨೬. (ಓ) ೧೩೮೮ (ಆದಿಯ ಸಂಖ್ಯಾರಹಿತ ಗರಿ ) ಕ.ಅ. ಕೇಂ. ( ಬೆಂ)

೧೨೮. (ಓ) (ಬಿಡಿಗರಿ) ಬೃಹನ್ಮಠ (ಚಿ)

೧೨೯. (ಕಾ) ಬಸವ ಸಮಿತಿ (ಬೆಂ)

೧೩೦. (ಓ) ೧೮೫ (೨೧ನೇ) ಬೃಹನ್ಮಠ (ಚಿ)

೧೩೧. (ಓ) ಕ. ಕೇಂ. (ಬೆಂ)

೧೩೨. (ಕಾ) ೫೦೬ (೨೨೮ ಹಿಂ – ೨೨೯ ಹಿಂ) ಕ.ಅ.ಸಂ. (ಮೈ)

೧೩೩. (ಕಾ) ೯೫೬ (೧೭೧ನೇ) ಧರ್ಮಸ್ಥಳ

೧೩೫. (ಕಾ) ೯೫೬ (೨೪ ಮುಂ) ಕ.ಅ.ಕೇಂ. (ಬೆಂ)

೧೩೬. (ಓ) ೩೩೬ (೩೬ ಮುಂ) ಧರ್ಮಸ್ಥಳ

೧೩೭. ೨೫೭೪ (೫ ಮುಂ) ವ.ವಾ. ಭಾಂ. (ಧಾ)

೧೩೮. ವ.ವಾ. ಭಾಂ. (ಧಾ)

೧೩೯. (ಓ) ೧೨೬೪ (೧ ಹಿಂ) ಕ. ಅ. ಕೇಂ. (ಬೆಂ)

೧೪೦. (ಕಾ) ೩೫೩೬ (೪೩ ಹಿಂ) ವ.ವಾ.ಭಾಂ. (ಧಾ)

೧೪೧. (ಕಾ) ಡಾ। ಬಿ. ನಂಜುಂಡಸ್ವಾಮಿ (ಗುಬ್ಬಿ)

೧೪೨. (ಓ) ೩೨ (೧ ಮುಂ) ವ.ವಾ. ಭಾಂ. (ಧಾ)

೧೪೩. (ಕಾ) ೯೫೬ (೭೫ ಹಿಂ) ಕ.ಅ. ಕೇಂ (ಬೆಂ)

೧೪೪. (ಕಾ) ಬಸವ ಸಮಿತಿ ( ಬೆಂ.)

೧೪೫. ?

೧೪೬. (ಕಾ) ೯೨೮ (೨೫ ಮುಂ) ಕ.ಅ. ಕೇಂ. (ಬೆಂ)

೧೪೭. (ಕಾ) ೩೫೬ (೫೧ ಹಿಂ) ಕ.ಅ. ಸಂ. (ಮೈ)

೧೪೮. (ಓ) ೧೮೫ (೧೦೦ ಮುಂ + ಹಿಂ) ಬೃಹನ್ಮಠ (ಚಿ)

೧೪೯. (ಓ) ಡಾ। ಕೆ. ರಾಘವೇಂದ್ರರಾವ್ (ಮೈ)

೧೫೦. (ಓ) ಡಾ। ಕೆ. ಕಾಘವೇಂದ್ರರಾವ್ (ಮೈ)

೧೫೧. (ಕಾ) ಬಸವ ಭವನ (ಬೆಂ)

೧೫೨. (ಓ) ४೧೧ (೩೭ ಹಿಂ – ೩೮ ಹಿಂ) ಬೃಹನ್ಮಠ (ಚಿ)

೧೫೩. ೨೫೭೪(೭ ಹಿಂ) ವ.ವಾ. ಭಾಂ. (ದಾ)

೧೫೪. (ಕಾ) ೬೩೮ (೭೮ ಹಿಂ) ಕ.ಅ.ಕೇಂ. (ಬೆಂ)

೧೫೫. (ಕಾ) ೬೬೬ (೧೨) ಕ. ಅ. ಕೆಂ.

೧೫೬. (ಓ) ಮೂರುಸಾವಿರಮಠ (ಹುಬ್ಬಳ್ಳಿ)
೧೫೭. ೨೪೧೭ (೧೩೩ ಹಿಂ – ೧೩೫ ಮುಂ) ವ.ವಾ. ಭಾಂ (ದಾ)
೧೫೮. (ಓ) ೩೫೫೬ (೩೭ ಹಿಂ) ಧರ್ಮಸ್ಥಳ
೧೫೯. (ಕಾ) ೯೭೫ (೧೧ ಹಂ) ಕ.ಅ.ಕೇಂ. (ಬೆಂ)
೧೬೦. ೨೪೧೭ (೮ ಮುಂ) ವ.ವಾ.ಭಾಂ. (ಧಾ)
೧೬೧ (ಓ) ೧೮೫ (೩೧ ಹಿಂ) ಬೃಹನ್ಮಠ (ಚಿ)
೧೬೨. (ಕಾ) ೧೪೦೧ (೧೩ಮುಂ) ಕ.ಅ.ಕೇಂ. (ಬೆಂ)
೧೬೩. ?
೧೬೪. (ಓ) ೧೨೫೩ (೪೬ ಮುಂ) ಕ.ಅ.ಸಂ. (ಮೈ)
೧೬೫ (ಓ) (ಬಿಡಿಗಿರಿ ಬೃಹನ್ಮಠ (ಚಿ)
೧೬೬. (ಓ) ಶ್ರೀ ಉಮೇಶಚಂದ್ರ (ಕೆಂಗೇರಿ)
೧೬೭. ?
೧೬೮. (ಓ) ಶಿರಾಳಕೊಪ್ಪದಮಠ
೧೬೯. (ಕಾ) ೧೬೩೫ (೧೬ ಮುಂ) ಕ.ಅ.ಕೇಂ. (ಬೆಂ)
೧೭೦. ?
೧೭೧. ೨೪೧೭ (೧೩೪ ಹಿಂ) ವ.ವಾ.ಭಾಂ. (ಧಾ)
೧೭೨. (ಕಾ) ಶ್ರ ಗಂಗಶೆಟ್ರು (ಕನಕಪುರ)
೧೭೩. (ಓ) ಶ್ರೀ ಉಮೇಶಚಂದ್ರ (ಕೆಂಗೇರಿ)
೧೭೪. (ಓ) ೧೨೯೫ (೫ನೇ) ಮ.ಸಂ. ಪಾ. (ಮೈ)
೧೭೫. (ಓ) ೩೯೨ (ಬಿಡಿಗರಿ) ಬೃಹನ್ಮಠ (ಚಿ)
೧೭೬. (ಕಾ) ೩೫೬ (೯೨ ಹಿಂ – ೯೩ ಮುಂ) ಕ.ಸಂ.ಸಂ. (ದಾ)
೧೭೮. (ಕಾ) ಬಸವ ಭವನ (ಬೆಂ)
೧೭೯. (ಕಾ) ೯೨೮ (೫ ಹಿಂ–೬ ಮುಂ) ಕ.ಅ.ಕೇಂ. (ಬೆಂ)
೧೮೦. (ಕಾ) ಕ. ಕೇಂ. (ಬೆಂ)
೧೮೧. ಶ್ರೀ ಎಸ್. ಉಮಾಪತಿ (ದಾವಣಗೆರೆ)
೧೮೨. (ಓ) ೯೭ (ಮೊದಲಗರಿ ) ಬೃಹನ್ಮಠ (ಚಿ)
೧೮೩. (ಓ) ಮೂರುಸಾವಿರಮಠ (ಹುಬ್ಬಳ್ಳಿ)
೧೮೪. (ಕಾ) ೩೭೭ (೯ ಮುಂ–೧೦ಮುಂ) ತೋಂಟದಾರ್ಯಮಠ (ಗದಗ)
೧೮೫. (ಓ) ಮೂರುಸವಾರಿದಮಠ (ಹುಬ್ಬಳ್ಳಿ)
೧೮೬. (ಕಾ) ೬೫೮ (೪೩ನೇ) ಕ. ಅ. ಕೇಂ (ಬೆಂ)

೧೮೭. (ಕಾ) ೩೭೭ (೧೧ ಹಿಂ – ೧೨ಮುಂ) ತೋಂಟದಾರ್ಯಮಠ
(ಗದಗ)

೧೮೮. (ಕಾ) ಬಸವ ಭವನ( ಬೆಂ)

೧೮೯. (ಕಾ) ೪೦೯ (೨೮ ಹಿಂ – ೨೯ ಮುಂ) ತೋಂಟದಾರ್ಯಮಠ
(ಗದಗ)

೧೯೦ (ಓ) ೪೯೬ (೧೨ ಮುಂ – ೧೪ ಮುಂ) ಬೃಹನ್ಮಠ (ಚಿ)

೧೯೧. ಶ್ರೀ ಎಸ್. ಉಮಾಪತಿ (ದಾವಣಗೆರೆ)
(ಕಾ) ೯೫೬ (೧೧ ಮುಂ) ಕ.ಅ.ಕೇಂ. (ಬೆಂ)

೧೯೨. (ಓ) ೬೯೨ (೫೧ ಮುಂ) ಬೃಹನ್ಮಠ (ಚಿ)

೧೯೩. (ಓ) ೬೮೨ (೪೯ ಹಿಂ) ಕ.ಅ.ಕೇಂ. (ಬೆಂ)

೧೯೪. (ಓ) ೧೭೧/೧ (೨ಮುಂ + ಹಿಂ)

೧೯೫. (ಓ) ೭೧೪/೫ (೪ ಮುಂ) ಬೃಹನ್ಮಠ (ಚಿ)

೧೯೬. (ಓ) ಬೃಹನ್ಮಠ (ಚಿ)

೧೯೭. (ಓ) ೧೮೫ (೯೫ ನೇ ) ಬೃಹನ್ಮಠ (ಚಿ)

೧೯೮. (ಓ) ೬೮೨ (೫೨ ಹಿಂ– ೫೩ ಮುಂ) ಬೃಹನ್ಮಠ (ಚಿ)

೧೯೯ (ಕಾ) ಡಾ। ಎಚ್.ಎಂ. ಮರುಳಸಿದ್ಧಯ್ಯ( ಬೆಂ)

೨೦೧. (ಕಾ) ೧೦೨೧ (೬೬ನೇ) ಕ.ಅ.ಕೇಂ. (ಬೆಂ); ಶ್ರೀ ಪಿ.ಎಂ. ಗಿರಿರಾಜು
(ಮೈ)

೨೧೦. (ಓ)೧೦೧೨ (೨೨ –೨೪ಮುಂ) ಕ.ಅ.ಸಂ (ಮೈ)

೨೦೨. (ಕಾ) ಕ.ಅ.ಕೇಂ. (ಬೆಂ)

೨೦೩. (ಕಾ) ೩೮೧/೨ (೭ಮುಂ) ತೋಂಟದಾರ್ಯಮಠ (ಗದಗ)

೨೦೪. (ಓ) ೧೭೧ ಮುಂ ಕ. ಅ. ಕೇಂ (ಬೆಂ)

೨೦೫. (ಕಾ) ೨೬೫ (೧೭೦ ಮುಂ + ಹಿಂ) ಧರ್ಮಸ್ಥಳ

೨೦೬. (ಓ) ೧೭೪೭ (೩–೧೪ ಮುಂ) ಕ.ಅ. ಕೇಂ. (ಬೆಂ)

೨೦೭. (ಕಾ) ತೋಂಟದಾರ್ಯಮಠ (ಗದಗ)

೨೦೮. (ಕಾ) ೬೩೯ (೩೧ ಮುಂ) ಕ.ಅ. ಕೇಂ. (ಬೆಂ)

೨೦೯. (ಕಾ) ೬೩೯ (೩೨ ಮುಂ) ಕ.ಅ. ಕೇಂ. (ಬೆಂ)

೨೧೦. (ಕಾ) ೨೪೦೫ (೩೫ ಮುಂ) ವ. ಪಾ. ಭಾಂ. (ಧಾ)

೨೧೧. (ಓ) ೭೧೪ (೩ ಹಿಂ) ಬೃಹನ್ಮಠ (ಚಿ)

೨೧೨. (ಕಾ) ಕೆ.ಬಿ. ೫೪೦ (೩೪) ಕ.ಅ.ಸಂ. (ಮೈ)

೨೧೩. (ಓ) ೪೨೭ (೪೬ ಮುಂ) ಕ.ಅ.ಕೇಂ. (ಬೆಂ)

೨೧೪. (ಓ) ೪೨೭ (೨೧ ಮುಂ + ಹಿಂ) ಕ.ಅ. ಕೇಂ. (ಬೆಂ)

೨೧೫. ೩೫೬ (೩೩ ಮುಂ) ಕ.ಸಂ. ಸಂ. (ಧಾ)

೨೧೬. (ಕಾ) ೯೫೬ (೧೮ನೇ ) ಕ.ಅ. ಕೇಂ. (ಬೆಂ)

೨೧೭. (ಕಾ) ೯೭೫ (೭ ಹಿಂ– ೮ ಮುಂ) ಕ.ಅ.ಕೇಂ. (ಬೆಂ)

೨೧೮. ?

೨೧೯. (ಓ) ೨೧೭ (೮೩ ಮುಂ) ಧರ್ಮಸ್ಥಳ

೨೨೦. (ಓ) ೧೧೩೧ (೨ನೇ) ಕ.ಅ.ಸಂ. (ಮೈ)

೨೨೧. (ಓ) ೪೨೪ (೩೨ ಹಿಂ – ೩೩ ಮುಂ) ಧರ್ಮಸ್ಥಳ

೨೨೨. (ಓ) ಬೇಲಿಮಠ (ಬೆಂ)

೨೨೩. (ಕಾ) ೯೮೬ (೧೦ಹಿಂ – ೧೧ ಮುಂ) ಕ.ಅ.ಕೇಂ. (ಬೆಂ)

೨೨೪. (ಓ) (೯೧ನೇ) ಬೃಹನ್ಮಠ (ಚಿ)

೨೨೫. (ಕಾ) ೩೮೫೭ (೨೦ ಮುಂ) ವ.ವಾ.ಭಾಂ. (ಧಾ)

೨೨೬. (ಓ) ೨೨೨ (ಬಿಡಿಗಿರಿ) ಕ.ಅ.ಕೇಂ. (ಬೆಂ)

೨೨೭. (ಓ) ೨೯೮ (೫ ಮುಂ – ೬ ಮುಂ) ಧರ್ಮಸ್ಥಳ

೨೨೮. ೩೫೭೪ (೭ ಮುಂ) ವ.ವಾ.ಭಾಂ. (ಧಾ)

೨೨೯. (ಕಾ) ೯೭೫ (೧೨ ಮುಂ) ಕ.ಅ.ಕೇಂ. (ಬೆಂ)

೨೩೦. (ಕಾ) ಬಸವಭವನ (ಬೆಂ)

೨೩೧. ೨೫೭೪ (೪ನೇ) ವ.ವಾ.ಭಾಂ (ಧಾ)

೨೩೨. ೨೪೧೭ (೧೩೧ ಮುಂ) ವ.ವಾ.ಭಾಂ. (ದಾ)

೨೩೩. (ಓ) (ಓ) (೬೮–೬೯ ಮುಂ) ಕ.ಅ.ಕೇಂ. (ಬೆಂ)

೨೩೪. (ಓ) ೧೬೯೩/೩ ಕ.ಅ.ಕೇಂ. (ಬೆಂ)

೨೩೫. ಶ್ರೀ ಎಸ್.ಉಮಾಪತಿ (ದಾವಣಗೆರೆ)

೨೩೬. (ಓ) (೪೭ನೇ) ಬೃಹನ್ಮಠ (ಚಿ)

೨೩೭. (ಓ) ೭೯೯ (೪೮–೫೦) ಬೃಹನ್ಮಠ (ಚಿ)

೨೩೮. (ಓ) ೭೯೯ (೪೮–೫೦) ಬೃಹನ್ಮಠ (ಚಿ)

೨೩೯. (ಕಾ) ಬಸವಭವನ (ಬೆಂ)

೨೪೦ (ಕಾ) ೩೭೭ (೮ನೇ, ತೋಂಟದಾರ್ಯಮಠ (ಗದಗ)

೨೪೧ (ಕಾ) ೯೫೬ (೧ ಮುಂ –೨ ಮುಂ) ಕ.ಅ.ಕೇಂ. (ಬೆಂ)

೨೪೨. ೨೪೧೭ (೧೪೩ ಹಿಂ) ವ.ವಾ.ಭಾಂ. (ಧಾ)

೨೪೩. (ಕಾ) ಬಸವ ಭವನ (ಬೆಂ)

೨೪೪. (ಓ) ಬೇಲಿಮಠ (ಬೆಂ)

೨೪೫. (ಓ) ೨೮೧ (ಬಿಡಿ ಗರಿ) ಧರ್ಮಸ್ಥಳ

೨೪೬. ?

೨೪೭. (ಕಾ) ೧೪೦೦ (೧೩ಮುಂ) ಕ.ಅ.ಕೇಂ. (ಬೆಂ)

೨೪೮. (ಓ) ೩೫೬ (೩೭ ಮುಂ) ಧರ್ಮಸ್ಥಳ

೨೪೯. (ಕಾ) ೯೫೬ (೧೬ನೇ) ಕ.ಅ.ಕೇಂ. (ಬೆಂ)

೨೫೦. (ಕಾ) ೨೮೧೪ (೧ ಹಾಳೆ) ವ.ವಾ.ಭಾಂ. (ಧಾ)

೨೫೧. (ಓ) ೩೫೭ (೩೫ ಮುಂ) ಧರ್ಮಸ್ಥಳ

೨೫೨. (ಓ) ೩೬೮ (?) ಬೃಹನ್ಮಠ (ಚಿ)

೨೫೩. (ಓ) ೬೫೩ (೪ನೇ) ಬೃಹನ್ಮಠ (ಚಿ)

೨೫೪. (ಓ) ಬೃಹನ್ಮಠ (ಚಿ)

೨೫೫. (ಓ) ೩೭೮ (?) ಬೃಹನ್ಮಠ (ಚಿ)

೨೫೬. (ಓ) ೭೧೪ (೨೩ ಮುಂ) ಬೃಹನ್ಮಠ (ಚಿ)

೨೫೭. (ಓ) ೭೧೪ (೩೩ ಮುಂ) ಬೃಹನ್ಮಠ (ಚಿ)

೨೫೮. (ಕಾ) ಬಸವಭವನ (ಬೆಂ)

೨೫೯. ಶ್ರೀ ಪಿ.ಎಂ. ಗಿರಿರಾಜು (ಮೈ)

೨೬೦. (ಕಾ) ೧೧೯೧ (೪೪ನೇ)

೨೬೧. ರಂಭಾಪುರಿಮಠದ ಸಂಗ್ರಹ, ಬಾಳೆಹೊನ್ನೂರು

೨೬೨. (ಓ) ಡಾ। ಕೆ. ರಾಘವೇಂದ್ರರಾವ್ (ಮೈ)

೨೬೩. ವ.ವಾ.ಭಾಂ. (ಧಾ)

೨೬೪. (ಓ) ೧೧೫೬/೫ (೧ ಮುಂ) ಕ.ಅ.ಕೇಂ. (ಬೆಂ)

೨೬೫. (ಕಾ) ಬಸವಭವನ (ಬೆಂ)

೨೬೬. ಶ್ರೀ ಎಸ್. ಉಮಾಪತಿ ( ದಾವಣಗೆರೆ)

೨೬೭. ನೋಡಿ : ೭೬ಎ

೨೬೮. (ಕಾ) ಬಸವಭವನ (ಬೆಂ)

೨೬೯. (ಕಾ) ೨೪೦೫ (೪೧ ಹಂ) ವ.ವಾ.ಭಾಂ. (ಧಾ)

೨೭೦. ೨೪೧೭ (೧೪ ಹಿಂ) ವ.ವಾ.ಭಾಂ. (ಧಾ)

೨೭೧. (ಕಾ) ಶ್ರೀ ಜಿ.ಎ. ಶಿವಲಿಂಗಯ್ಯ (ಮೈ)

೨೭೨. (ಓ) ಕ.ಅ.ಕೇಂ. (ಬೆಂ)

೨೭೩. (ಓ) ೧೮೫ (೯೦ ಮುಂ) ಬೃಹನ್ಮಠ (ಚಿ)

೨೭೪. (ಓ) ೪೨೩/೧೬ (೮ನೇ) ತೋಂಟದಾರ್ಯಮಠ ಗದಗ

೨೭೫. (ಕಾ) ೯೭೫ (೧೪ನೇ) ಕ.ಅ.ಕೇಂ.(ಬೆಂ)

೨೭೬. ಡಾ। ಕೆ. ರಾಘವೇಂದ್ರರಾವ್ (ಮೈ)
೨೭೭. (ಓ) ಶ್ರೀ ಉಮೇಶಚಂದ್ರ (ಕೆಂಗೇರಿ)
೨೭೮. ವ.ವಾ.ಭಾಂ. (ಧಾ)
೨೭೯. (ಓ) ೩೫೬ (೩೪ನೇ) ಧರ್ಮಸ್ಥಳ
೨೮೦. * (ಓ) ಬೇಲಿಮಠ (ಬೆಂ)
೨೮೧. (ಓ) ೧೯೪೬ (೧೦ ಹಿಂ) ಕ.ಅ.ಸಂ. (ಮೈ)
೨೮೨. ೩೪೨೩ (೬೩ ಹಿಂ – ೪೬ ಮುಂ) ವ.ವಾ.ಭಾಂ. (ಧಾ)
೨೮೩. (ಓ) ಶ್ರೀ. ಉಮೇಶಚಂದ್ರ (ಕೆಂಗೇರಿ)
೨೮೪. ?
೨೮೫. (ಓ) ೨೮೧ (ಧರ್ಮಸ್ಥಳ)
೨೮೬. (ಓ) ೬೫೧ (ಬಿಡಿಗೆರಿ) ಬೃಹನ್ಮಠ (ಚಿ)
೨೮೭. (ಕಾ) ಡಾ। ಎಚ್.ಎಂ. ಮರುಳಸಿದ್ಧಯ್ಯ (ಬೆಂ)
೨೮೮. (ಕಾ) ಕ.ಅ.ಕೇಂ. (ಬೆಂ)
೨೮೯. (ಓ) ೪೫/೧ (೨೭ ಹಿಂ – ೨೮ ಮುಂ) ಕ.ಅ.ಕೇಂ. (ಬೆಂ)
೨೯೦. (ಓ) ಪ್ರಸಾದಚಿಂತಾಮಣಿ (ಅದಿ ಗರಿ) ರಂಭಾಪುರಿಮಠ
೨೯೧. (ಕಾ) ಬಸವ ಭವನ (ಬೆಂ)
೨೯೨. ೨೪೧೭ (೧೫ ಮುಂ) ವ.ವಾ.ಭಾಂ. (ಧಾ)
೨೯೩. ?
೨೯೪. ೨೪೧೭ (೧೩೭ ಹಿಂ) ವ.ವಾ.ಭಾಂ. (ಧಾ)
೨೯೫. (ಕಾ) ೨೭೭ (೮ ಹಿಂ–೯ ಮುಂ) ತೋಂಟದಾರ್ಯಮಠ (ಗದಗ)
೨೯೬. (ಓ) ೧೩೮೭ ( ) ಕ.ಅ.ಕೇಂ. (ಬೆಂ)
೨೯೭. (ಓ) ಲಿಂ. ಬಿ. ನಂಜುಂಡಪ್ಪ (ಕನಕಪುರ)
೨೯೮. (ಕಾ) ೯೭೫ (೮ ಹಿಂ) ಕ.ಅ.ಕೇಂ. (ಬೆಂ)
೨೯೯. (ಕಾ) ೯೭೫ (೮ ಹಿಂ) ಕ.ಅ.ಕೇಂ. (ಬೆಂ)
೩೦೦. ಸ್ವಂತ ಸಂಗ್ರಹ

□ □

## ೩. ರಾಗಗಳ ಅಕಾರಾದಿ



 

## ೪. ಸ್ವರವಚನಾಂಕಿತಗಳ ಅಕಾರಾದಿ

❑ ❑

ಸುತ್ತೂರು ಶ್ರೀ ಜಗದ್ಗುರು ವೀರಸಿಂಹಾಸನ ಮಹಾಸಂಸ್ಥಾನಮಠ, ನಾಡಿನ ಒಂದು ಪ್ರಾಚೀನ ಧರ್ಮಪೀಠ. ಚೋಳಚಕ್ರೇಶ್ವರನ ಪ್ರಾರ್ಥನೆಯ ಸುಮಧುರ ರಸಾಮೃತ ಫಲ. ಸಂಸ್ಥಾಪನಾಚಾರ್ಯರು ಆದಿಜಗದ್ಗುರು ಶ್ರೀ ಶಿವರಾತ್ರೀಶ್ವರ ಭಗವತ್ಪಾದರು. ಆ ಮಹಾಶಿವಯೋಗಿಗಳು ನಿತ್ಯನಿಜಾನಂದದಲ್ಲಿ ಸದಾ ನೆಲೆಸಿರು[illegible] ಶಿವಯೋಗಸಮಾಧಿ —ಅದುವೆ ಶ್ರೀಕರ್ತೃಗದ್ದುಗೆ. ಅದು ನಿಶ್ಚಿಂತ ನಿಜನಿವಾಸ, ಬೆಳ[illegible] ಪ್ರಶಾಂತ ಆವಾಸ. ಅಲ್ಲಿಂದ ಹೊರಹೊಮ್ಮುವ ಶಿವಬೆಳಗು ಸರ್ವವ್ಯಾಪಿಯಾಗಿ [illegible]ರಹಿದೆ. ನಡೆದು ಬರುತ್ತಿದೆ ಮನುಕುಲದ ಕಲ್ಯಾಣ ಅಸದೃಶವಾಗಿ. ಉಜ್ವಲವಾದ ಆ[illegible]ಪರಂಪ[illegible]ಯಲ್ಲಿ ಬಂದ ಮಹಾನುಭಾವರೆಲ್ಲರೂ ಕಾರುಣ್ಯಸಿಂಧುಗಳು, ಲೋಕೈಕಬಂಧು[illegible].

ನಾಡಿನ ಧಾರ್ಮಿಕ–ಸಾಮಾಜಿಕ, ಶೈಕ್ಷಣಿಕ—ಸಾಂಸ್ಕೃತಿಕ ಕ್ಷೇತ್ರಗಳ ಸಮಗ್ರ ಅಭಿವೃದ್ಧಿಗೆ ಶ್ರೀಮಠದ ಸೇವೆ ಅಮೋಘ ಹಾಗೂ ಅದ್ವಿತೀಯ. ಸಾಹಿತ್ಯ–ಸಂಗೀತ–ಕಲೆಗಳಿಗೆ ನೀಡುತ್ತಿರುವ ಕೊಡುಗೆ ಅಸಂಖ್ಯ ಹಾಗೂ ಗಣನೀಯ. 'ಪರಮಶಿವಾ[illegible]ಕ್ಷ ಚೂಡಾಮಣಿ' ಗ್ರಂಥವನ್ನು ರಚಿಸಿ ಶ್ರೀ ಮಲೆಯಮಾದೇಶ್ವರರಿಗೆ ಆಶ್ರಯ ನೀಡಿದ ಸಿದ್ಧನಂಜದೇಶಿಕೇಂದ್ರರು; 'ಅಮುಗಿದೇವಯ್ಯಗಳಸಾಂಗತ್ಯ'ವನ್ನು ಬರೆದ ಕವಿ ಶಿವಲಿಂಗದೇವನಿಗೆ ಪ್ರೇರಕ—ಪೋಷಕರಾದ ಕಪಿನೀನಂಜುಂಡದೇಶಿಕೇಂದ್ರರು; ತೋಂಟದ ಸಿದ್ಧಲಿಂಗಯತಿಗಳ ಶಿಷ್ಯಪ್ರಮುಖರಲ್ಲಿ ಒಬ್ಬರಾಗಿ ಸ್ವತಂತ್ರವಚನಕಾರರೆಂದು ಪ್ರಸಿದ್ಧರಾದ ಘನಲಿಂಗಿಶಿವಯೋಗಿಗಳು; 'ಮಂತ್ರಮಹರ್ಷಿ'ಗಳೆನಿಸಿ 'ಶಿವಮಂತ್ರ[illegible]' ಗ್ರಂಥವನ್ನು ನೀಡಿದ ಜಗದ್ಗುರು ಶ್ರೀ ಶಿವರಾತ್ರೀಶ್ವರ ಮಹಾಸ್ವಾಮಿಗಳು; 'ಘನಲಿಂಗದೇವರ ವಚನಗಳು' ಮತ್ತು ಶ್ರೀ ಗೌರೀಶಂಕರ ಮಹಾಸ್ವಾಮಿಗಳವರ 'ಅಕ್ಕಮಹಾದೇವಿ' ಚಂಪೂಕಾವ್ಯ—ಇವುಗಳನ್ನು ಸಂಪಾದಿಸಿಕೊಟ್ಟ 'ಶ್ರೀಮನ್ಮಹಾರಾಜ ರಾಜಗುರುತಿಲಕ' ಜಗದ್ಗುರು ಡಾ. ಶ್ರೀ ಶಿವರಾತ್ರಿರಾಜೇಂದ್ರ ಮಹಾಸ್ವಾಮಿಗಳು; 'ಮುಪ್ಪಿನ ಷಡಕ್ಷರಿಗಳ ಕೈವಲ್ಯಪದ'ವನ್ನು ಸಂಪಾದಿಸಿಕೊಟ್ಟು ಗ್ರಂಥ ಪ್ರಕಾಶನಕ್ಕೆ ಪ್ರೋತ್ಸಾಹವೀಯುತ್ತಿರುವ ಪೂಜ್ಯ ಜಗದ್ಗುರು ಶ್ರೀ ಶಿವರಾತ್ರಿದೇಶಿಕೇಂದ್ರ ಮಹಾಸ್ವಾಮಿಗಳು—ಇವರೇ ಮೊದಲಾದ ಗುರುವರೇಣ್ಯರು ಕೈಕೊಂಡ ಧರ್ಮಸಂರಕ್ಷಣೆ—ಸಾಹಿತ್ಯಪರಿಪೋಷಣೆ ಗಮನಾರ್ಹ ಹಾಗೂ ಸ್ತುತ್ಯರ್ಹ. ಮನುಕುಲದ ಏಳಿಗೆಗಾಗಿ ಶ್ರೀಪೀಠದಿಂದ ಸಲ್ಲುತ್ತಿರುವ ಮಹತ್ಸೇವೆ ಅಭಿವಂದನೀಯ ಹಾಗೂ ಸದಾ ಸಂಸ್ಮರಣೀಯ!

---

**ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ : ಮೈಸೂರು**